# ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ: ಒಂದು ಮಾನವಶಾಸ್ತ್ರೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮಾನವಶಾಸ್ತ್ರ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ




ಸಂಶೋಧಕರು

ಟಿ.ಎನ್. ಕೇಶವಮೂರ್ತಿ
ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬಾಗೇಪಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ

ಮಾರ್ಗದರ್ಶಕರು

ಡಾ. ಎಲ್. ಶ್ರೀನಿವಾಸ
ಸಹಾಯಕ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು







ಮಾನವಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೧೬




# ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ: ಒಂದು ಮಾನವಶಾಸ್ತ್ರೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ, ಹಂಪಿ, ಮಾನವಶಾಸ್ತ್ರ ವಿಭಾಗಕ್ಕೆ
ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
**ಟಿ.ಎನ್. ಕೇಶವಮೂರ್ತಿ**
ಸಹಾಯಕ ಪ್ರಾಧ್ಯಾಪಕರು
ಸರ್ಕಾರಿ ಪ್ರಥಮ ದರ್ಜೆ ಕಾಲೇಜು
ಬಾಗೇಪಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ

ಮಾರ್ಗದರ್ಶಕರು
**ಡಾ. ಎಲ್. ಶ್ರೀನಿವಾಸ**
ಸಹಾಯಕ ಪ್ರಾಧ್ಯಾಪಕರು ಹಾಗೂ ಮುಖ್ಯಸ್ಥರು



ಮಾನವಶಾಸ್ತ್ರ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

ಟಿ.ಎನ್. ಕೇಶವಮೂರ್ತಿ ಅವರು "ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ: ಒಂದು ಮಾನವಶಾಸ್ತ್ರೀಯ ಅಧ್ಯಯನ" ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಮಾನವಶಾಸ್ತ್ರ ವಿಭಾಗಕ್ಕೆ ಸಲ್ಲಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ದಿನಾಂಕ : 25/6/16
ಸ್ಥಳ : ವಿದ್ಯಾರಣ್ಯ

(ಡಾ. ಎಲ್. ಶ್ರೀನಿವಾಸ)
ಸಹಾಯಕ ಪ್ರಾಧ್ಯಾಪಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

**"ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ: ಒಂದು ಮಾನವಶಾಸ್ತ್ರೀಯ ಅಧ್ಯಯನ"** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಮಾನವಶಾಸ್ತ್ರ ವಿಭಾಗದ ಸಹಾಯಕ ಪ್ರಾಧ್ಯಾಪಕರಾದ **ಡಾ. ಎಲ್. ಶ್ರೀನಿವಾಸ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿ ಇಲ್ಲವೇ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : 22/6/16
ಸ್ಥಳ : ವಿದ್ಯಾರಣ್ಯ

(ಟಿ.ಎನ್. ಕೇಶವಮೂರ್ತಿ)
ಸಂಶೋಧಕರು
ಮಾನವಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

## ಪರಿವಿಡಿ

ಅಧ್ಯಾಯ ಒಂದು

# ಪ್ರಸ್ತಾವನೆ

೧.೧. ಪೀಠಿಕೆ

೧.೨. ಸಂಶೋಧನಾ ವಿಷಯದ ಸಮಷ್ಠೀಕರಣ

೧.೩. ಅಧ್ಯಯನದ ಉದ್ದೇಶ

೧.೪. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

೧.೫. ಅಧ್ಯಯನದ ವಿಧಾನಗಳು

೧.೬. ಅಧ್ಯಯನದ ಸ್ವರೂಪ

೧.೭. ಸಾಹಿತ್ಯ ಸಮೀಕ್ಷೆ

೧.೮. ದಕ್ಷಿಣ ಕರ್ನಾಟಕದಲ್ಲಿ ಬಂಜಾರರು ಮತ್ತು ಐತಿಹಾಸಿಕ ಹಿನ್ನೆಲೆ

ಅಧ್ಯಾಯ ಒಂದು

# ಪ್ರಸ್ತಾವನೆ

## ೧.೧. ಪೀಠಿಕೆ

ಮಾನವ ತನ್ನ ಐತಿಹಾಸಿಕವಾದ ಮಹಾನ್ ಹೆಜ್ಜೆಯಲ್ಲಿ ಮುನ್ನುಗ್ಗುತ್ತಾ, ಇದೀಗ ನಾಗರೀಕತೆಯ ಉನ್ನತಮಟ್ಟಕ್ಕೆ ಬಂದು ತಲುಪಿದ್ದಾನೆ. ಆದರೆ, ಜಗತ್ತಿನ ಎಲ್ಲಾ ಮಾನವ ಸಮೂಹ ಸಮುದಾಯಗಳು ನಾಗರೀಕತೆಯ ಈ ಘಟಕ್ಕೆ ತಲುಪಿವೆ ಎನ್ನುವಂತಿಲ್ಲ. ಇಂತಹ ಸಮೂಹಗಳಲ್ಲಿ ನಾಗರಿಕತೆಯಿಂದ ಬಹುದೂರವಿರುವ ಹಾಗೂ ಇನ್ನೂ ಅಕ್ಷರ ಪೂರ್ವ ಸ್ಥಿತಿಯಲ್ಲಿರುವ ಸಮುದಾಯಗಳ ಸಂಖ್ಯೆಯು ಕಡಿಮೆಯೇನಿಲ್ಲ. ಮೂಲ ನಿವಾಸಿಗಳೆಂದು, ಆದಿವಾಸಿಗಳೆಂದು, ದೇಶಿವರ್ಗವೆಂದು, ಆದಿಪ್ರಜೆಗಳೆಂದು ಕರೆಯಲಾಗುತ್ತಿರುವ ಇಂತಹ ಸಮೂಹಗಳು ಇಲ್ಲದ ದೇಶವೇ ಇಲ್ಲ ಎನ್ನಬಹುದು. ಜನಸಂಖ್ಯೆಯ ದೃಷ್ಟಿಯಿಂದ ಬಹಳ ಅಲ್ಪಸಂಖ್ಯಾತರಾದ ಈ ಜನ ಸಮುದಾಯಗಳ ಜೀವನ ತೀರಾ ಭಿನ್ನ ರೀತಿಯದು, ವಿಶಿಷ್ಟವಾದದು ಮತ್ತು ಚೋದ್ಯಮಯ ವಾದದು. ಈ ಸಮುದಾಯಗಳ ಜೀವನಕ್ರಮವನ್ನು ಮಾನವಶಾಸ್ತ್ರೀಯ ಹಿನ್ನಲೆಯಲ್ಲಿ ಅಧ್ಯಯನ ಮಾಡುವುದೆಂದರೆ ಅದೊಂದು ಕುತೂಹಲದ ವಿಷಯ ಹಾಗೆಯೇ ಸವಾಲಿನ ಪ್ರಶ್ನೆ ಕೂಡಾ.

ಹೆರಡೊಟಸ್ ಹಾಗೂ ಸಮಕಾಲೀನ ತತ್ವಜ್ಞಾನಿಗಳಾದ ಡೆಮೊಕ್ರೆಟಸ್, ಪ್ರೊಟೋಗೊರಸ್, ಪ್ಲೇಟೋ ಮುಂತಾದವರು ಜಗತ್ತಿನ ಮಾನವ ಸಮಾಜಗಳ ಸಾಂಸ್ಕೃತಿಕ, ಸಾಮಾಜಿಕ ವ್ಯವಸ್ಥೆಯ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಹೆರಡೊಟಸ್ ಮಾನವನ ಮೂಲಭಾಷೆಯ ಬಗ್ಗೆ ಒಂದು ಪೂರ್ವ ಸಿದ್ಧಾಂತವನ್ನು ನೀಡಿದರೆ, ಡೆಮೋಕ್ರೆಟಸ್ ಪ್ರಾಚೀನತೆಯಿಂದ ನಾಗರಿಕತೆಯವರೆಗೆ ಸಮಾಜ ಹೇಗೆ ವಿಕಾಸವಾಯಿತೆಂದು ವಿವರಿಸಿದ್ದಾನೆ. ಪ್ರೋಟೋಗೊರಸ್ ಏಕತೆಯಿಂದ ಬಹುರೂಪಿಯಾಗಿ ಸಮಾಜ ಹೇಗೆ ವಿಕಸಿತವಾಗಿದೆ ಎಂದು ತಿಳಿಸಿದನು. ಸಾಕ್ರೆಟಿಸ್ ಸಾರ್ವಜನಿಕ ಮಾನವ ಸಮಾಜದ ಬೆಳವಣಿಗೆಯನ್ನು ತಿಳಿಸಿದ್ದಾನೆ. ಪ್ಲೇಟೋ ನೈತಿಕ ಸಮಾಜದ ಬಗ್ಗೆ ಪ್ರಸ್ತಾಪಿಸಿದ್ದಾನೆ. ಅರಿಸ್ಟಾಟಲ್ ಸಂಸ್ಕೃತಿ ಮತ್ತು ಸಮಾಜದ ನಡುವಿನ ಸಂಬಂಧದ ಬಗ್ಗೆ ತನ್ನದೇ ಆದ ಅಭಿಪ್ರಾಯ ತಿಳಿಸಿದ್ದಾನೆ. ಹೀಗೆ ಗ್ರೀಕ್ ದೇಶದ ತತ್ವಜ್ಞಾನಿಗಳು, ಇತಿಹಾಸಕಾರರು, ಆಸ್ತಿಕವಾದಿಗಳು ಮುಂತಾದವರು ಸಾಮಾಜಿಕ-ಸಾಂಸ್ಕೃತಿಕ ಮಾನವಶಾಸ್ತ್ರದ ಅಧ್ಯಯನಗಳ ಬೆಳವಣಿಗೆಗೆ ಕಾರಣರಾಗಿದ್ದಾರೆ.

ಮನುಕುಲಶಾಸ್ತ್ರವು ಮಾನವ ಜನಾಂಗಗಳ ಅಧ್ಯಯನದಲ್ಲಿ ತಿಳಿಸುತ್ತಾ, ಅದು ಮಾನವಕುಲದ ಜನಾಂಗಗಳನ್ನು ಹಾಗೂ ಸಂಸ್ಕೃತಿಗಳನ್ನು ಅವರುಗಳ ಪರಿಸರದಲ್ಲಿಯೇ ತೌಲನಿಕವಾಗಿ ಆದರೆ ಐತಿಹಾಸಿಕ ನೆಲೆಯಲ್ಲಿ ಅಧ್ಯಯನ ಮಾಡುವ ಶಾಸ್ತ್ರವಾಗಿದೆ. ಈ ಹಿನ್ನಲೆಯಲ್ಲಿ ಮಾನವ ಸಮೂಹಗಳಲ್ಲಿನ ವಿಭಿನ್ನ ಸಂಸ್ಕೃತಿಗಳ ಐತಿಹಾಸಿಕ ನೆಲೆಯಲ್ಲಿ ನಿರಂತರ ಅಧ್ಯಯನಗಳು ಮತ್ತು ಸಂಶೋಧನೆಗಳು ಕಾರ್ಯಶೀಲವಾಗಿವೆ.

ಸರ್ ಎಡ್ವರ್ಡ್ ಬರ್ನೆಟ್ ಟೈಲರ್ ಬ್ರಿಟನ್ನಿನ ಹೆಸರಾಂತ ಮಾನವಶಾಸ್ತ್ರಜ್ಞ ಸಾಂಸ್ಕೃತಿಕ ಮಾನವಶಾಸ್ತ್ರದ ಜನಕ ಈತನ Researches into the early history of Mankind and the Development of Civilisation ೧೮೬೫ ಕೃತಿಯಲ್ಲಿ ನಾಗರೀಕವಲ್ಲದ ಆದಿವಾಸಿ ಸ್ಥಿತಿಯಿಂದ ಇಂದಿನ ನಾಗರೀಕ ಸ್ಥಿತಿಯವರೆಗೆ ಮಾನವನು ಹೇಗೆ ವಿಕಾಸಾತ್ಮಕ ಪ್ರಗತಿ ಸಾಧಿಸಿಕೊಂಡು ಬಂದನು ಎಂಬಂಶವನ್ನು ವಿವರಿಸುತ್ತಾನೆ.

ಲೆವಿಸ್ ಹೆನ್ರಿ ಮಾರ್ಗಾನ್ ಅಮೇರಿಕಾದ ಪ್ರಖ್ಯಾತ ಮನುಕುಲಶಾಸ್ತ್ರಜ್ಞ, ವೈಜ್ಞಾನಿಕ ಮಾನವಶಾಸ್ತ್ರಕ್ಕೆ ತಳಹದಿ ಹಾಕಿದವರಲ್ಲಿ ಮುಖ್ಯವಾಗಿದ್ದಾನೆ. ಬಂಧುತ್ವ ವ್ಯವಸ್ಥೆಗಳ ಅಧ್ಯಯನ ಕ್ಷೇತ್ರದಲ್ಲಿ ವಿಶಿಷ್ಟ ಸಾಧನೆ ಮಾಡಿದ್ದಾನೆ. ಎಲ್.ಹೆಚ್. ಮಾರ್ಗಾನ್-ಸಮಾಜದ ಆರಂಭದಲ್ಲಿ ತಾರತಮ್ಯ ರಹಿತ ಲೈಂಗಿಕ ಜೀವನ ಪದ್ಧತಿ ಇದ್ದರೂ ಕೊನೆಯಲ್ಲಿ ಏಕಪತ್ನಿತ್ವ ಸ್ಥಿರವಾಗಿ ಉಳಿಯಿತು. ಈತನು ಕುಟುಂಬ ಮತ್ತು ವಿವಾಹದ ಬೆಳವಣಿಗೆಯಲ್ಲಿ ಹದಿನೈದು ಹಂತಗಳನ್ನು ಗುರ್ತಿಸಿದ್ದಾನೆ.

ಜೇಮ್ಸ್ ಫ್ರೇಜರ್ ಧರ್ಮದ ಉದಯಕ್ಕೆ ಮಾಂತ್ರಿಕ ವಿದ್ಯೆ, ಧರ್ಮ ಮತ್ತು ವಿಜ್ಞಾನ ಎಂಬ ಮೂರು ಹಂತಗಳೇ ಕಾರಣ ಎಂದು ಅಭಿಪ್ರಾಯಪಡುತ್ತಾನೆ. ಮೊದಲು ಮಾನವ ಮಂತ್ರ-ತಂತ್ರಗಳಲ್ಲಿ ನಂಬಿಕೆಯಿಟ್ಟಿದ್ದ, ಕಾಲಾಂತರದಲ್ಲಿ ಅದು ಸುಳ್ಳೆಂದು ತಿಳಿದು ದೈವಿಕ ಶಕ್ತಿಯಲ್ಲಿ ನಂಬಿಕೆಯಿಟ್ಟನು. ಆ ಶಕ್ತಿಯನ್ನು ತೃಪ್ತಿಗೊಳಿಸಲು ಪ್ರಾರಂಭಿಸಿದನು. ಕಾಲಾನು ಕ್ರಮೇಣ ಇದು ಭ್ರಮೆ ಎಂದು ನಂಬಿ ವಿಜ್ಞಾನದಲ್ಲಿ ನಂಬಿಕೆಯಿಟ್ಟನು ಎಂದು ಫ್ರೇಜರ್ ತಿಳಿಸುತ್ತಾನೆ.[೧]

ಭಾರತವು ಜಗತ್ತಿನಲ್ಲಿಯೇ ಬೃಹತ್ ಪ್ರಜಾಪ್ರಭುತ್ವ ಹೊಂದಿರುವ ರಾಷ್ಟ್ರ, ಹೆಚ್ಚು ಬುಡಕಟ್ಟು ಸಮೂಹ ಹೊಂದಿರುವ ದೇಶಗಳಲ್ಲಿ ಎರಡನೆ ಸ್ಥಾನವನ್ನು, ಭೌಗೋಳಿಕ ವಿಸ್ತೀರ್ಣದಲ್ಲಿ ಏಳನೇ ಸ್ಥಾನವನ್ನು ಜನಸಂಖ್ಯಾ ಗಾತ್ರದಲ್ಲಿ ಎರಡನೇ ಸ್ಥಾನವನ್ನು ಹೊಂದಿದ್ದು, ತನ್ನದೇ ಆದ ಸಾಂಸ್ಕೃತಿಕ ವೈವಿಧ್ಯತೆ ಹಾಗೂ ವೈಶಿಷ್ಟ್ಯತೆಯನ್ನು ಹೊಂದಿರುವ, ಏಷ್ಯಾದ ಒಂದು ಉಪಖಂಡವಾಗಿದೆ. ಭಾರತ ಸಾಂಸ್ಕೃತಿಕ ಸಂರಚನೆಯಲ್ಲಿ ವೈವಿಧ್ಯತೆಯನ್ನು ಹೊಂದಿರುವ ಬಹುಮುಖಿ ಸಮಾಜವಾಗಿದೆ. ಧಾರ್ಮಿಕ, ಭೌಗೋಳಿಕ ಮತ್ತು ಕುಲಸಂಬಂಧಿ ವೈವಿಧ್ಯತೆಯನ್ನು ಆಧರಿಸಿದ್ದು ಹಲವು ಜಾತಿ, ಜನಾಂಗ, ಧರ್ಮ ಮತ್ತು ಬುಡಕಟ್ಟುಗಳನ್ನು ಹೊಂದಿರುವ ಒಂದು ದೀಮಂತ ಸಾಂಸ್ಕೃತಿಕ ಪರಂಪರೆಯನ್ನು ತನ್ನದಾಗಿಸಿಕೊಂಡಿದೆ. ತನ್ನ ಸಾಮಾಜಿಕ, ಐತಿಹಾಸಿಕ ಪರಂಪರೆಯ ಮೂಲಕ ಹಲವು ತಲೆಮಾರುಗಳಿಗೆ ಅಪಾರವಾದ ಅಧ್ಯಯನಕ್ಕೆ ಸಂಶೋಧನೆಗಳಿಗೆ ಕೇಂದ್ರೀಕೃತ ವಸ್ತು ವಿಷಯವಾಗಿದೆ.

ಭಾರತೀಯ ಸಮಾಜದಲ್ಲಿ ವೇದೋತ್ತರ ಕಾಲದಿಂದಲೂ ಜಾರಿಯಲ್ಲಿರುವ ಜಾತಿ ವ್ಯವಸ್ಥೆಯ ಜೊತೆಯಲ್ಲಿ ಯಾವ ಜಾತಿಗಳಿಗೂ ಸೇರಿರದ, ಇವರೆಲ್ಲರಿಂದಲೂ ಪ್ರತ್ಯೇಕವಾಗಿ ಕಾಡುಕಾನನಗಳಲ್ಲಿ ವಾಸಿಸುತ್ತಿರುವ ಅಸಂಖ್ಯಾತ ಬುಡಕಟ್ಟುಗಳು ಅಸ್ತಿತ್ವದಲ್ಲಿವೆ. ಭಾರತದಲ್ಲಿರುವ ಈ ಬುಡಕಟ್ಟುಗಳು ತಮ್ಮ ವಿಶಿಷ್ಟ ಸಾಂಸ್ಕೃತಿಕ ಘಟಕಗಳಾದ ಸಂಪ್ರದಾಯಗಳು, ನಂಬಿಕೆಗಳು, ಸಾಹಿತ್ಯ, ಸಂಗೀತ, ನೃತ್ಯಕಲೆ ಮುಂತಾದ ಹಲವಾರು ಅಂಶಗಳಿಂದ ಭಾರತೀಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿವೆ. ಆದರೆ, ಭಾರತೀಯ ಸಂಸ್ಕೃತಿಯ ಬಗ್ಗೆ ಅನೇಕ ವಿದ್ವಾಂಸರು, ಚಿಂತಕರು, ಮತ್ತಿತ್ತರ ಶಿಷ್ಟ ಜನರು ವಿಚಾರ ಮಾಡುವಾಗ ಜಾತಿಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡು ಬುಡಕಟ್ಟುಗಳ ಸಂಸ್ಕೃತಿಯನ್ನು ಕಡೆಗಣಿಸಿರುವುದು

---

೧. ಡಾ. ಕೆ.ಜೆ.ಗುರುಮೂರ್ತಿ, ಪ್ರೊ. ಬಿ.ಜಿ.ಹಳಬರ ಮತ್ತು ಪ್ರೊ.ಎ.ಜಿ.ಹಿರೇಮಠ, ಮಾನವಶಾಸ್ತ್ರ ಪಠ್ಯಪುಸ್ತಕ ನಿರ್ದೇಶನಾಲಯ, ಧಾರವಾಡ, ೧೯೭೩.

ಕಂಡುಬರುತ್ತದೆ. ಆರಂಭದಲ್ಲಿ ವೃತ್ತಿಗನುಗುಣವಾಗಿ ವರ್ಗೀಕರಿಸಲ್ಪಟ್ಟ ಜಾತಿ ವ್ಯವಸ್ಥೆ, ಕಾಲಕ್ರಮೇಣ ಸಾಮಾಜಿಕ ಶೋಷಣೆಯ ಸಾಧನವಾಗಿ ಪರಿಣಮಿಸಿತು.[೨]

ಕರ್ನಾಟಕ ರಾಜ್ಯದ ಪ್ರಸ್ತುತ ಬುಡಕಟ್ಟುಗಳಲ್ಲಿ ಬಂಜಾರ ಸಮುದಾಯವು ಒಂದಾಗಿದ್ದು, ೧೯೭೫ರ ಹಾವನೂರು ವರದಿಯ ಪ್ರಕಾರ ರಾಜ್ಯದಲ್ಲಿ ಸುಮಾರು ೩,೫೨,೮೮೨ರಷ್ಟು ಬಂಜಾರ ಜನಸಂಖ್ಯೆ ಇತ್ತೆಂದು ತಿಳಿದು ಬಂದಿದೆ. ಇಂದು ರಾಜ್ಯದಲ್ಲಿ ೨೦೧೧ರಂತೆ ಇವರ ಜನಸಂಖ್ಯೆ ಸುಮಾರು ೦೮ ಲಕ್ಷವನ್ನು ಮೀರಿದೆ ಎಂಬುದು ಬಂಜಾರ ಸಂಘಟನೆಗಳ ಹೇಳಿಕೆಯಾಗಿದೆ. ಇವರು ಮೂಲತಃ ಅಲೆಮಾರಿಗಳಾಗಿರುವುದರಿಂದ ಈ ಸಮುದಾಯದ ನಿಖರವಾದ ಜನಸಂಖ್ಯೆ ತಿಳಿಯುವುದು ಕಷ್ಟದ ಕೆಲಸವಾಗಿದೆ. ಅಲ್ಲದೆ ಇವರುಗಳು ವಾಸಿಸುವ ತಾಂಡಗಳು ಹತ್ತಿರ ಹಳ್ಳಿಗಳಿಂದ ಗುರ್ತಿಸಿ ಅದೇ ಹಳ್ಳಿಯ ಹೆಸರನ್ನು ಹೊಂದಿರುತ್ತವೆ. ಇದರಿಂದ ಪ್ರತ್ಯೇಕವಾದ ಬಂಜಾರರ ನಿರ್ದಿಷ್ಟ ಜನಸಂಖ್ಯೆ ಲಭ್ಯತೆ ಕಷ್ಟಕರವಾಗಿರುತ್ತದೆ.[೩]

ಕರ್ನಾಟಕದ ಬಂಜಾರ ಸಮುದಾಯವು ಪ್ರಾರಂಭದಲ್ಲಿ ಬುಡಕಟ್ಟು ಸಮುದಾಯಗಳಲ್ಲಿ ಒಂದಾಗಿದ್ದು, ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿರದ ಬುಡಕಟ್ಟು ಆಗಿರುತ್ತದೆ. ಬಂಜಾರ ಸಮುದಾಯವನ್ನು ಕರ್ನಾಟಕ ಸರ್ಕಾರವು ಪರಿಶಿಷ್ಟ ಜಾತಿಯ ಪಟ್ಟಿಯಲ್ಲಿ ಸೇರಿಸಿರುತ್ತದೆ. ರಾಜ್ಯದ ಮಾಜಿ ಮುಖ್ಯಮಂತ್ರಿಗಳಾಗಿದ್ದ ದಿವಂಗತ ಡಿ.ದೇವರಾಜ ಅರಸುರವರ ಕಾಲದಲ್ಲಿ ಈ ಸಮುದಾಯವನ್ನು ಪರಿಶಿಷ್ಟ ಜಾತಿಗೆ ವರ್ಗಾಯಿಸಲಾಗಿತ್ತು. ಇದಕ್ಕೆ ಮೊದಲು ಈ ಸಮುದಾಯವನ್ನು ಬುಡಕಟ್ಟು ಎಂದೇ ಕರೆಯಲಾಗುತ್ತಿತ್ತು. ಬಂಜಾರ ಸಮುದಾಯವು ಕೇವಲ ಕರ್ನಾಟಕ ರಾಜ್ಯದಲ್ಲಿ ಮಾತ್ರವೇ ನೆಲೆಸದೆ ಇಡೀ ಭಾರತದ ಎಲ್ಲಾ ರಾಜ್ಯಗಳಲ್ಲೂ ನೆಲೆಸಿರುವುದು ಕಂಡುಬರುತ್ತದೆ. ಆದರೆ ವಿವಿಧ ರಾಜ್ಯಗಳು ಇವರನ್ನು ವಿವಿಧ ಜಾತಿಗಳ ಪಟ್ಟಿಯಲ್ಲಿ ಸೇರಿಸಿರುವುದನ್ನು ಗಮನಿಸಬಹುದು. ಉದಾಹರಣೆಗೆ ತಮಿಳುನಾಡಿನಲ್ಲಿ ಬಂಜಾರರು ಅತಿ ಹಿಂದುಳಿದಿರುವ ಜಾತಿಗಳೆಂದು ಪರಿಗಣಿಸಿದರೆ, ಆಂಧ್ರಪ್ರದೇಶದಲ್ಲಿ ಪರಿಶಿಷ್ಟ ಪಂಗಡಗಳೆಂದು ಕರೆಯಲಾಗಿದೆ. ಮಹಾರಾಷ್ಟ್ರದಲ್ಲಿ ಹಿಂದುಳಿದ ಜಾತಿ ಎಂಬುದಾಗಿ ಕರೆಯಲಾಗಿದೆ.

---

೨. ಶಂಕರ ನಾರಾಯಣ, "ಕಾಡುಗೊಲ್ಲರ ಸಂಪ್ರದಾಯಗಳು ಹಾಗೂ ನಂಬಿಕೆಗಳು", ಮೈಸೂರು ವಿಶ್ವವಿದ್ಯಾಲಯ, ೧೯೮೨, ಪು. ೧೦.

೩. ರಾಜುನಾಯ್ಕ,ಎನ್. "ಲಂಬಾಣಿಗಳಲ್ಲಿ ರಾಜಕೀಯ ಅರಿವು–ಒಂದು ಅಧ್ಯಯನ", ೨೦೦೬, ಪು.ಸಂ.೨.

ಆದರೆ ಕರ್ನಾಟಕ ಸರ್ಕಾರವು ಬಂಜಾರರನ್ನು ಪರಿಶಿಷ್ಟ ಜಾತಿಗೆ ಸೇರಿಸಿದ್ದರೂ ಇವರ ರೂಢಿ ಸಂಪ್ರದಾಯಗಳು, ಧಾರ್ಮಿಕ ವಿಧಿ–ವಿಧಾನಗಳು, ವೈವಾಹಿಕ, ಕೌಟುಂಬಿಕ ನೆಲೆಗಟ್ಟು, ಭಾಷೆ ಮುಂತಾದವುಗಳನ್ನೆಲ್ಲಾ ಗಮನಿಸಿದಾಗ ಕಂಡುಬರುವ ಅಂಶವೆಂದರೆ ಬಂಜಾರರು ಮೂಲತಃ ಬುಡಕಟ್ಟಿನವರೇ ಆಗಿದ್ದು, ಇತ್ತೀಚೆಗೆ ಒಂದು ಜಾತಿಯಾಗಿ ಪರಿವರ್ತನೆಯಾಗಲು ಪ್ರಯತ್ನಿಸುತ್ತಿದ್ದಾರೆ ಎಂದು ಭಾವಿಸಬಹುದಾಗಿದೆ.[೪]

ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ ಒಂದು ಮಾನವಶಾಸ್ತ್ರೀಯ ಅಧ್ಯಯನ ಎಂಬ ಈ ಸಂಶೋಧನಾ ಅಧ್ಯಯನವು ಬಂಜಾರ ಜನಸಮುದಾಯದ ಸರ್ವತೋಮುಖ ಅಭ್ಯುದಯಕ್ಕೆ ಬೆಳಕು ಚೆಲ್ಲಲು ಸಹಕರಿಸಬಹುದು. ಆದ್ದರಿಂದ ಬಂಜಾರರ ಪ್ರಾಚೀನ ಮೂಲ, ಆಚಾರ–ವಿಚಾರ, ಉಡುಗೆ–ತೊಡುಗೆ, ಧಾರ್ಮಿಕ ಮತ್ತು ಪಾರಂಪರಿಕ ಆಚರಣೆಗಳು ಮುಂತಾದ ಅಂಶಗಳನ್ನು ಕೇಂದ್ರೀಕರಿಸಿಕೊಂಡು ಸಂಶೋಧನಾ ಅಧ್ಯಯನ ಕೈಗೊಳ್ಳಲಾಗಿದೆ.

ಕರ್ನಾಟಕದಲ್ಲಿ ೫೦ ಬುಡಕಟ್ಟುಗಳನ್ನು ಅಧಿಕೃತ ಬುಡಕಟ್ಟುಗಳೆಂದು ಗುರುತಿಸಲಾಗಿದ್ದು ರಾಜ್ಯದಲ್ಲಿ(೨೦೦೧ರ ಜನಗಣತಿ) ೩೪,೬೪,೦೦೦ ಬುಡಕಟ್ಟು ಜನರಿದ್ದಾರೆ. ಅವರ ಭಾಷೆ, ಧಾರ್ಮಿಕ, ಸಾಂಸ್ಕೃತಿಕ ಸಂಘಟನೆ, ಆರ್ಥಿಕವಾಗಿ ಹಿಂದುಳಿಯುವಿಕೆ, ಭೌಗೋಳಿಕ ಪ್ರತ್ಯೇಕತೆ, ಇತ್ಯಾದಿ ಗುಣಲಕ್ಷಣಗಳ ಆಧಾರದ ಮೇಲೆ ಬುಡಕಟ್ಟು ಸಮುದಾಯದವರೆಂದು ಗುರುತಿಸಲಾಗಿದೆ.

೨೦೧೧ರ ಜನಗಣತಿಯ ಪ್ರಕಾರ ಕರ್ನಾಟಕದ ಜನಸಂಖ್ಯೆ ೬,೧೦,೯೫,೨೯೭ ಆಗಿದ್ದು ಕರ್ನಾಟಕದಲ್ಲಿ ಲಂಬಾಣಿಗರ ಒಟ್ಟು ಜನಸಂಖ್ಯೆ ೮,೨೩,೫೦೫ ಆಗಿರುತ್ತದೆ. ಕರ್ನಾಟಕದ ಲಂಬಾಣಿ ಜನಸಂಖ್ಯೆ ಜಿಲ್ಲಾವಾರು ಹಂಚಿಕೆ ಸಮ ಪ್ರಮಾಣದಲ್ಲಿ ಇರುವುದಿಲ್ಲ. ಕೆಲವು ಜಿಲ್ಲೆಗಳಲ್ಲಿ ಕಡಿಮೆ ಹಂಚಿಕೆಯಾಗಿದ್ದು, ಕೆಲವು ಜಿಲ್ಲೆಗಳಲ್ಲಿ ಅತಿಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಉದಾಹರಣೆ ಗುಲ್ಬರ್ಗಾದಲ್ಲಿ ಬಂಜಾರರ ಸಂಖ್ಯೆ ೧,೬೬,೪೬೬, ಅತಿ ಹೆಚ್ಚು ಕಂಡುಬಂದರೆ ಕೊಡಗು ಜಿಲ್ಲೆಯಲ್ಲಿ ೧೫೦ರಷ್ಟು ಅತಿಕಡಿಮೆ ಬಂಜಾರರ ಸಂಖ್ಯೆಯನ್ನು ಕಾಣಬಹುದಾಗಿದೆ.

ಸಂವಿಧಾನದ ದೃಷ್ಟಿಯಲ್ಲಿ ಬಂಜಾರರ ಸಮುದಾಯವನ್ನು ಕರ್ನಾಟಕ ರಾಜ್ಯದಲ್ಲಿ ಪರಿಶಿಷ್ಟ ಜಾತಿ ಎಂದೂ ಪರಿಗಣಿಸಲ್ಪಟ್ಟಿದ್ದಾರೆ. ಆಂಧ್ರ ಪ್ರದೇಶದಲ್ಲಿ ಪರಿಶಿಷ್ಟ ಪಂಗಡದವರೆಂದು,

---

೪. ಅನಂತಕೃಷ್ಣ ಅಯ್ಯರ್ ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ೧೯೨೮ ಎಡ್ಗರ್ ಥರ್‌ಸ್ಟನ್ ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ ೧೮೮೭.

ತಮಿಳುನಾಡಿನಲ್ಲಿ ಅತಿ ಹಿಂದುಳಿದ ಜನಾಂಗವೆಂದು ಪರಿಗಣಿಸಲ್ಪಟ್ಟಿದೆ. ಈ ನಿಟ್ಟಿನಲ್ಲಿ ಬಂಜಾರ ಜನಾಂಗವನ್ನು ಸಂವಿಧಾನಾತ್ಮಕವಾಗಿ ನೋಡುವುದರ ಬದಲೂ ಅವರ ಕಲೆ, ಸಾಂಸ್ಕೃತಿಕತೆ, ರೂಢಿ ಸಂಪ್ರದಾಯ, ಭಾಷೆ, ಪ್ರತ್ಯೇಕ ವಾಸಸ್ಥಳ, ಧಾರ್ಮಿಕ ವಿಧಿ–ವಿಧಾನ ಮತ್ತು ಹಬ್ಬ ಹರಿದಿವಸಗಳು ಇತ್ಯಾದಿ ಅಂಶಗಳಿಂದ ವ್ಯಾಖ್ಯಾನಿಸಬಹುದಾಗಿದೆ.

ಬಂಜಾರ ಸಮುದಾಯದ ಮಾನವಶಾಸ್ತ್ರೀಯ ಅಧ್ಯಯನಕ್ಕಾಗಿ ಕರ್ನಾಟಕವನ್ನು ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಎಂದು ಎರಡು ಪ್ರಾದೇಶಿಕ ಘಟಕಗಳಾಗಿ ವಿಭಜಿಸಲಾಗಿದೆ. ಕರ್ನಾಟಕದ ಒಟ್ಟು ೩೦ ಜಿಲ್ಲೆಗಳಲ್ಲಿ ದಕ್ಷಿಣ ಕರ್ನಾಟಕ ವ್ಯಾಪ್ತಿಯಲ್ಲಿರುವ ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು, ಬಂಜಾರರ ಸಾಂಸ್ಕೃತಿಕ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಮೂಲರೂಪದಲ್ಲಿ ಉಳಿಸಿಕೊಂಡಿರುವ ಹಾಗೂ ಮಾನವಶಾಸ್ತ್ರೀಯ ಪರಿದೃಷ್ಟಿಯಿಂದ ಮೂರು ಜಿಲ್ಲೆಗಳಿಂದ ಒಟ್ಟು ೧೫ ತಾಂಡಗಳನ್ನು ಕ್ಷೇತ್ರ ಕಾರ್ಯಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ರೀತಿಯ ಪ್ರಾದೇಶಿಕ ವಿಂಗಡಣೆ ಮಾಡುವಾಗ ಸಾಂಸ್ಕೃತಿಕ ದೃಷ್ಟಿಕೋನವನ್ನು ಗಮನದಲ್ಲಿಟ್ಟು ಕೊಳ್ಳಲಾಗಿದೆ. ಕ್ಷೇತ್ರಾಧ್ಯಯನ ವ್ಯಾಪಕವಾದುದರಿಂದ ಈ ಆಯ್ಕೆ ಅನಿವಾರ್ಯವಾಗಿದೆ. ಹೀಗೆ ಆಯ್ಕೆ ಮಾಡಿದ ಪ್ರದೇಶಗಳನ್ನು ಸಂದರ್ಶಿಸಿ ಆ ಸಮಾಜದ ಅನೇಕ ಪರಿಣಿತರೊಂದಿಗೆ ಸಮಾಲೋಚನೆ ಮಾಡಿ ಸಂಶೋಧನಾ ಸಾಮಗ್ರಿಗಳನ್ನು ಸಂಗ್ರಹಿಸಲಾಗಿದೆ.

### ೧.೨. ಸಂಶೋಧನಾ ವಿಷಯದ ಸಮಷ್ಟೀಕರಣ

ಪ್ರಸ್ತುತ ಸಂಶೋಧನಾ ಪ್ರಬಂಧವು ಪ್ರಧಾನವಾಗಿ ನಾಲ್ಕು ಕಾರಣಗಳಿಂದ ಸ್ವಂತಿಕೆಯನ್ನು ಹೊಂದಿದೆ. ಮೊದಲನೆಯದಾಗಿ ದಕ್ಷಿಣ ಕರ್ನಾಟಕದ ಬಂಜಾರರ ಸಮುದಾಯ ಕುರಿತು ಇಲ್ಲಿಯವರೆವಿಗೂ ನಡೆದಿರುವ ಅಧ್ಯಯನಗಳಲ್ಲಿ ಮಾನವಶಾಸ್ತ್ರೀಯ ವಿಧಾನ ಮತ್ತು ವಿಶ್ಲೇಷಣೆಯನ್ನು ಗುರ್ತಿಸಿ ವಿಶ್ಲೇಷಿಸಿಲ್ಲ, ಈ ಕೆಲಸವನ್ನು ಇಲ್ಲಿ ಕೈಗೆತ್ತಿಕೊಳ್ಳಲಾಗಿದೆ.

ಎರಡನೆಯದಾಗಿ ಕರ್ನಾಟಕದಾದ್ಯಂತ ನಾಲ್ಕು ಕಂದಾಯ ವಿಭಾಗಗಳಲ್ಲಿನ ಮೈಸೂರು ವಿಭಾಗ ಮತ್ತು ಬೆಂಗಳೂರು ವಿಭಾಗಗಳಲ್ಲಿ ಕಂಡುಬರುವ ಪ್ರಮುಖ ತಾಂಡಗಳು ಕೇಂದ್ರೀಕೃತವಾಗಿರುವ ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ಬಂಜಾರ ತಾಂಡಗಳ ಕ್ಷೇತ್ರಾಧ್ಯಯನದಿಂದ ಸಂಗ್ರಹಿಸಲಾದ ಮಾಹಿತಿಯೇ ಬಂಜಾರರ ಅಧ್ಯಯನಕ್ಕೆ ಪ್ರಾಥಮಿಕ ಆಕರ ಮೂಲವಾಗಿರುವುದು. ಆದುದರಿಂದ ವಿಶ್ಲೇಷಣೆಗೆ ವಾಸ್ತವಿಕತೆ ಆಧಾರಿತ ಮೆರುಗಿದೆ.

ಮೂರನೆಯದಾಗಿ ಬಂಜಾರರ ಸಮುದಾಯಗಳಲ್ಲಿ ಕಂಡುಬರುವ ಶಿಕ್ಷಣ, ಸಾಕ್ಷರತೆ, ಸ್ವಾವಲಂಬನೆಯ ಅಂಶಗಳು ಪರಿವರ್ತನೆಗೆ ಮೂಲಾಂಶಗಳಾಗಿದ್ದು, ಇವುಗಳ ಮೇಲೆ ಸಂಪ್ರದಾಯಗಳು, ಸಾಂಸ್ಕೃತಿಕತೆ ಮತ್ತು ಧಾರ್ಮಿಕ ಅಂಶಗಳ ಪರಸ್ಪರತೆ ಮತ್ತು ಅಂತರ್ ಕ್ರಿಯಾತ್ಮಕತೆಯ ಪ್ರಭಾವ ಬಗ್ಗೆ ಸಂಶೋಧನಾ ಪ್ರಬಂಧ ಹೆಚ್ಚು ಮಾನವಶಾಸ್ತ್ರೀಯ ಮಾಹಿತಿ ನೀಡಿ ವಿಶ್ಲೇಷಿಸಿದೆ.

ನಾಲ್ಕನೆಯದಾಗಿ ಸಾಂಪ್ರದಾಯಿಕ ಹಾಗೂ ಆಧುನಿಕತೆಯ ವ್ಯವಸ್ಥೆಯಲ್ಲಿ ದಕ್ಷಿಣ ಕರ್ನಾಟಕದ ವಿವಿಧ ಭಾಗದ ಬಂಜಾರ ಸಮುದಾಯಗಳ ಸ್ಥಿತಿಗತಿಗಳ ಅಧ್ಯಯನಗಳಲ್ಲಿನ ಮಾನವಶಾಸ್ತ್ರೀಯ, ದೃಷ್ಟಿಕೋನಗಳನ್ನು ಅವಲೋಕಿಸುವುದು ಎಂಬ ವಿಷಯಗಳತ್ತ ಗಮನಸೆಳೆಯಲಾಗಿದೆ.

ಮಾನವಶಾಸ್ತ್ರೀಯ ಅಧ್ಯಯನಗಳು ಸಂಪೂರ್ಣ ಕ್ಷೇತ್ರಕಾರ್ಯವನ್ನು ಅವಲಂಬಿಸಿರುತ್ತೇವೆ. ತನ್ಮೂಲಕ ಲಭ್ಯವಿರುವ ನಿಖರ ಮಾಹಿತಿಗಳಿಂದ ಸಂಶೋಧನಾ ಚಟುವಟಿಕೆಗಳಿಗೆ ಹೆಚ್ಚು ಪುಷ್ಠಿಯನ್ನು ನೀಡುತ್ತವೆ. ಹಾಗೆಯೇ ಸಮುದಾಯವೊಂದರ ಚಿತ್ರಣವನ್ನು ಒದಗಿಸುತ್ತದೆ. ಇಂತಹ ಸಂದರ್ಭದಲ್ಲಿ ಎದುರಿಸಿದ ಪ್ರಥಮ ಹಾಗೂ ಗಂಭೀರ ಸಮಸ್ಯೆ ಎಂದರೆ ಸೂಕ್ತ, ಸಮರ್ಪಕ ಮಾಹಿತಿ ಕೊರತೆ, ಕಾರಣವೆನೆಂದರೆ ವಿವಿಧ ಭಾಗಗಳಲ್ಲಿಯ ಲಂಬಾಣಿಗಳ ತುಲನಾತ್ಮಕ ವಿವರ ಎಲ್ಲಿಯೂ ಲಭ್ಯವಿಲ್ಲದಿರವುದೇ ಆಗಿದೆ. ಆದಾಗ್ಯೂ ಕೆಲವು ಸಂಶೋಧನಾ ಅಧ್ಯಯನಗಳಿದ್ದರೂ ಕೇವಲ ಸೀಮಿತ ಭಾಗದ ಲಂಬಾಣಿಗಳಿಗೆ ಕುರಿತಾಗಿರುತ್ತದೆ. ಈ ಕಾರಣಕ್ಕಾಗಿಯೇ ಮೂಲ ಮಾಹಿತಿಯ ಸಂಗ್ರಹ ಮಾಡುವುದು ಅನಿವಾರ್ಯವಾಗಿತ್ತು. ಪ್ರಾಥಮಿಕ ಮೂಲ ಮಾಹಿತಿಯನ್ನು ಬಂಜಾರರ ಸಮುದಾಯಗಳ ಸಾಂಪ್ರದಾಯಿಕ ಮುಖಂಡರುಗಳು, ವಿದ್ಯಾವಂತ ತರುಣರುಗಳು, ಸ್ಥಳೀಯ ಸಮಾಜ ಕಾರ್ಯಕರ್ತರು, ಸಣ್ಣಪುಟ್ಟ ವ್ಯಾಪಾರಸ್ಥರು, ಪಂಚಾಯ್ತಿ ಸದಸ್ಯರು ಮತ್ತಿತರ ವ್ಯಕ್ತಿಗಳನ್ನು ಪುರುಷರು ಹಾಗೂ ಸ್ತ್ರೀಯರುಗಳನ್ನು ಬೇಟಿಮಾಡಿ ಪ್ರಶ್ನೋತ್ತರ ವಿಧಾನವನ್ನು ಅನುಸರಿಸಿ ಪ್ರಾಥಮಿಕ ಮಾಹಿತಿ ಸಂಗ್ರಹಿಸಲಾಗಿದೆ. ಸಂದರ್ಶನ ವಿಧಾನದಲ್ಲಿ ಎದುರಾಗುವ ಪ್ರಮುಖ ಸಮಸ್ಯೆಯೇ ಭಾಷಾ ಸಮಸ್ಯೆ, ಬಂಜಾರರು ತಮ್ಮದೇ ಆದ ಭಾಷೆಯನ್ನು ಹೊಂದಿದ್ದಾರೆ. ಅವರು ಕನ್ನಡ, ತೆಲುಗು, ಹಿಂದಿ ಹಾಗೂ ಮರಾಠಿ ಭಾಷೆಗಳನ್ನು ಆಯಾ ಪ್ರದೇಶಕ್ಕೆ ಅನುಗುಣವಾಗಿ ಮಾತನಾಡಬಲ್ಲವರಾದರೂ ಸ್ಪಷ್ಟವಾಗಿ ತಮ್ಮ ವಿಚಾರಗಳನ್ನು ಮತ್ತು ಭಾವನೆಗಳನ್ನು ಇತರ ಭಾಷೆಯಲ್ಲಿ ವ್ಯಕ್ತಪಡಿಸಲಾರದು. ನಾನು ಸಂದರ್ಶಿಸಿದ ಬಂಜಾರರಲ್ಲಿ ಬಹುತೇಕ

ಮಾಹಿತಿದಾರರು ವಿದ್ಯಾವಂತರಲ್ಲ, ವಿದ್ಯಾವಂತರು ತಮ್ಮ ವಿಚಾರಗಳನ್ನು ಇತರ ಭಾಷಿಕರಿಗೆ ತಿಳಿಯುವಂತೆ ಹೇಳಬಲ್ಲವರಾದರೂ, ಹೆಚ್ಚಿನ ಸಂಖ್ಯೆಯ ಅವಿದ್ಯಾವಂತರು ತಮ್ಮ ಮಾತೃ ಭಾಷೆಯಲ್ಲಿ ಹಲವು ಸಂದರ್ಭಗಳಲ್ಲಿ ಅತ್ಯಂತ ಸ್ಪಷ್ಟವಾಗಿ ತಮ್ಮ ವಿಚಾರ ವ್ಯಕ್ತಪಡಿಸುತ್ತಾರೆ.ನಾನು ಲಭ್ಯವಿರುವ ಬಂಜಾರರ ಸಮುದಾಯದ ಸ್ನೇಹಿತರುಗಳನ್ನು ಬಳಸಿಕೊಂಡು ಹಾಗೂ ಹಲವು ವರ್ಷಗಳಿಂದ ಅವರ ಸಮುದಾಯಗಳ ಸಂಪರ್ಕ ಹೊಂದಿದ್ದರಿಂದಲೂ ಆಯ್ಕೆ ಮಾಡಿಕೊಂಡಿರುವ ಒಟ್ಟು ೧೫ ತಾಂಡಗಳಿಗೆ ಪ್ರವೇಶ ದೊರೆಯಲು ಸಾಧ್ಯವಾಯಿತು. ಸಾಮಾನ್ಯವಾಗಿ ಹೊರಗಿನ ಸಮಾಜದ ಇತರರಿಗೆ ನೀಡದೆ ಇರುವ ಅಥವಾ ನೀಡಲು ಸಂಕೂಚಿಸುವ ವಿಷಯಗಳನ್ನು ಸಂದರ್ಶಿಸಿದ ಮಾಹಿತಿದಾರ ಯಾವುದೇ ಸಂಕೋಚ ಭೀತಿಯಿಲ್ಲದೆ ನೀಡಿರುವುದರಿಂದ ಅಧ್ಯಯನಕ್ಕೆ ದೊರೆತಿರುವ ಮಾಹಿತಿ ಸತ್ಯಾಂಶದಿಂದ ಕೂಡಿದೆ ಎಂದು ತಿಳಿಸಬಲ್ಲವನಾಗಿದ್ದೇನೆ.

### ೧.೩. ಅಧ್ಯಯನದ ಉದ್ದೇಶ

ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯದ ಮಾನವಶಾಸ್ತ್ರೀಯ ಅಧ್ಯಯನವು ಬಂಜಾರರ ಸಾಂಸ್ಕೃತಿಕ ಜೀವನ ವಿಧಾನದ ಮಾನವಶಾಸ್ತ್ರೀಯ ವಿವೇಚನೆಯನ್ನು ಒಳಗೊಂಡಿದ್ದು, ಈ ಕೆಳಕಂಡ ಉದ್ದೇಶಗಳನ್ನು ಒಳಗೊಂಡಿದೆ.

- ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯದ ಚಾರಿತ್ರಿಕ ಹಿನ್ನಲೆಯನ್ನು ಅವಲೋಕಿಸಿ, ಅವರನ್ನು ಗುರ್ತಿಸಿ, ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನವಾಗಿದೆ.
- ಬಂಜಾರರಲ್ಲಿನ ಸಾಂಸ್ಕೃತಿಕ ವೈಶಿಷ್ಟ್ಯತೆಗಳು ಸಾಂಪ್ರದಾಯಿಕ ಆಚರಣೆಗಳು ಮತ್ತು ಸ್ಥಳೀಯ ಧಾರ್ಮಿಕ ನಂಬಿಕೆಗಳು ಇವುಗಳ ಕುರಿತಾದ ಮಾನವಶಾಸ್ತ್ರೀಯ ವಿಶ್ಲೇಷಣೆ ತಿಳಿಯುವುದು.
- ಬಂಜಾರ ಸಮುದಾಯಗಳ ಸಾಮಾಜಿಕ-ಆರ್ಥಿಕ ಜೀವನ ಗುರುತಿಸುವುದು ಮತ್ತು ವಿಶ್ಲೇಷಿಸುವುದು.
- ಬಂಜಾರರಲ್ಲಿ ಕಂಡುಬರುವ ವಿಶಿಷ್ಟ ಕಲೆ, ಸಾಹಿತ್ಯ ಹಾಗೂ ವೈವಿಧ್ಯಮಯ ಬದುಕಿನ ಚಿತ್ರಣವನ್ನು ಮಾನವಶಾಸ್ತ್ರೀಯ ನೆಲೆಗಟ್ಟಿನಲ್ಲಿ ತಿಳಿಯುವುದಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ

ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ದಕ್ಷಿಣ ಕರ್ನಾಟಕದ ಜಿಲ್ಲೆಗಳಲ್ಲಿ ಸಂಶೋಧನಾ ಅಧ್ಯಯನಕ್ಕಾಗಿ ಮೂರು ಜಿಲ್ಲೆಗಳನ್ನು ಅಂದರೆ ಚಿತ್ರದುರ್ಗ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಸ್ಥಳಗಳನ್ನು(ಕರ್ನಾಟಕ ಜನಗಣತಿ ೨೦೧೧, ಆರ್ಥಿಕ, ಸಾಂಖ್ಯಿಕ ಇಲಾಖೆಯ ಅಂಕಿ–ಅಂಶಗಳ ಆಧಾರದ) ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಜಿಲ್ಲೆಗಳಿಂದ ಕ್ರಮವಾಗಿ ಹೊಸದುರ್ಗ, ಕಡೂರು ಹಾಗೂ ಬಾಗೇಪಲ್ಲಿ ತಾಲ್ಲೂಕುಗಳನ್ನು ಗುರುತಿಸಿಕೊಂಡು ಪ್ರತಿ ತಾಲ್ಲೂಕುಗಳಿಂದ ಐದು ತಾಂಡಗಳನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಾಥಮಿಕ ಮೂಲ ಮಾಹಿತಿಗಾಗಿ ಒಟ್ಟು ೧೫ ತಾಂಡಗಳಿಂದ ೨೦೦ ಕುಟುಂಬಗಳನ್ನು ಮಾಹಿತಿಗಾಗಿ ಆರಿಸಿಕೊಳ್ಳಲಾಗಿದೆ. ಸಂಶೋಧಕರ ಕಾಲ, ಕರ್ತವ್ಯ ಹಾಗೂ ಅನುಕೂಲಕರ ವಾತಾವರಣವನ್ನು ಪರಿಗಣಿಸಿ ಅಧ್ಯಯನ ಕ್ಷೇತ್ರದ ವ್ಯಾಪ್ತಿಯನ್ನು ನಿರ್ಣಯಿಸಲ್ಪಟ್ಟಿರುತ್ತದೆ.

ಮಾನವಶಾಸ್ತ್ರೀಯ ಅಧ್ಯಯನದಲ್ಲಿ ಜನಾಂಗೀಯ ಅಧ್ಯಯನ ಒಂದು ಪ್ರಮುಖ ವಿಧಾನವಾಗಿದೆ. ಮಾನವ ಸಮುದಾಯ ಅಥವಾ ಚಿಕ್ಕ ಸಮುದಾಯವೊಂದರ ಕುರಿತಾಗಿ ಪ್ರತ್ಯೇಕ್ಷ ಅವಲೋಕನಗಳನ್ನು ಅನುಸರಿಸಿ ಆ ಮೂಲಕ ಕಂಡುಕೊಂಡದ್ದನ್ನು ಒಂದು ವಿಸ್ತೃತ ದಾಖಲೆಯ ಮೂಲಕ ಈ ಅಧ್ಯಯನದಲ್ಲಿ ಪ್ರಸ್ತುತಪಡಿಸಲಾಗಿದೆ. ಮಾನವಶಾಸ್ತ್ರೀಯ ವಿವರಣೆಯ ಬಗ್ಗೆ ಇಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಸಾಮಾಜಿಕ ಮಾನವಶಾಸ್ತ್ರ ಕ್ಷೇತ್ರ ಕಾರ್ಯವನ್ನು ಬಳಸುವುದರಿಂದ ವಿಭಿನ್ನ ಬಂಜಾರತಂಡಗಳ ಸಾಂಸ್ಕೃತಿಕ ಅಧ್ಯಯನ ಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಅಧ್ಯಯನ ಕ್ಷೇತ್ರ ತಾಂಡಗಳು:** ಚಿತ್ರದುರ್ಗ ಜಿಲ್ಲೆಯು ಬೆಂಗಳೂರಿನಿಂದ ೨೦೨ ಕಿ.ಮೀ. ಅಂತರದಲ್ಲಿದ್ದು, ದಕ್ಷಿಣ ಕರ್ನಾಟಕದ ಪ್ರಾರಂಭಿಕ ಜಿಲ್ಲೆ ಹಾಗೂ ಮೈದಾನಪ್ರದೇಶದ ಕೇಂದ್ರಸ್ಥಾನ, ಐತಿಹಾಸಿಕ ಹಿನ್ನಲೆಯನ್ನು ಹೊಂದಿರುವ ಪ್ರದೇಶವಾಗಿದ್ದು, ಅಶೋಕನ ಆಳ್ವಿಕೆಯಿಂದ ಪ್ರಾರಂಭಗೊಂಡು ಮೈಸೂರು ಟಿಪ್ಪುಸುಲ್ತಾನನ ಆಳ್ವಿಕೆಯವರೆಗೂ ಪ್ರಖ್ಯಾತಿ ಹೊಂದಿರುವ ಮತ್ತು ವಿಶೇಷವಾಗಿ ಮದಕರಿ ನಾಯಕನ ಆಳ್ವಿಕೆಗೆ ಒಳಪಟ್ಟಿದ್ದ 'ಪಾಳೇಪಟ್ಟಾಗಿತ್ತು'. ಇಂದಿಗೂ ಚಿತ್ರದುರ್ಗದ ಕೋಟೆ ಪ್ರಖ್ಯಾತ ಪ್ರೇಕ್ಷಣೀಯ ಸ್ಥಳವಾಗಿದೆ. ಈ ಜಿಲ್ಲೆಯು ಹಲವು ಜನಾಂಗಗಳ ಸಾಂಸ್ಕೃತಿಕ ತೊಟ್ಟಿಲಾಗಿದೆ. ಅಧ್ಯಯನದ ದೃಷ್ಟಿಯಿಂದ ಈ ಜಿಲ್ಲೆಯನ್ನು ಆಯ್ಕೆ ಮಾಡಿದ್ದು, ಈ ಜಿಲ್ಲೆಯ ಮಾಹಿತಿ ಈ ಕೆಳಕಂಡಂತಿದೆ. ೨೦೧೧ರ ಜನಗಣತಿಯಂತೆ ಒಟ್ಟು ಜನಸಂಖ್ಯೆ

೧೬,೫೯,೪೫೬ ಇವರಲ್ಲಿ ಪುರುಷರು ೮,೪೦,೮೪೩ ಮತ್ತು ಸ್ತ್ರೀಯರು ೮,೧೮,೬೧೩. ಪರಿಶಿಷ್ಟ ಜಾತಿಯ ಒಟ್ಟು ಜನಸಂಖ್ಯೆ ೩,೮೯,೧೧೭ರಷ್ಟಿದ್ದುಇದರಲ್ಲಿ ಪುರುಷರು ೧,೯೬,೮೧೯, ಮಹಿಳೆಯರು ೧,೯೨,೨೯೮. ಪರಿಶಿಷ್ಟ ಪಂಗಡದವರ ಒಟ್ಟು ಜನಸಂಖ್ಯೆ ೩,೦೨,೫೫೪ ಇವರಲ್ಲಿ ಪುರುಷರು ೧,೫೨,೯೩೨ ಇದ್ದರೆ, ಸ್ತ್ರೀಯರು ೧,೪೯,೪೧೫ರಷ್ಟಿದೆ. ಈ ಜಿಲ್ಲೆಯ ಒಟ್ಟು ಸಾಮಾನ್ಯ ಕುಟುಂಬಗಳ ಸಂಖ್ಯೆ ೩,೫೭,೦೦೩ ಇವರಲ್ಲಿ ಗ್ರಾಮೀಣ ಕುಟುಂಬಗಳು ೨,೮೩,೬೬೯ ಹಾಗೂ ನಗರಗಳಲ್ಲಿ ವಾಸವಾಗಿರುವ ಕುಟುಂಬಗಳು ೭೩,೩೩೪ರಷ್ಟಿದ್ದಾರೆ. ಈ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನಿಂದ ಆಯ್ಕೆ ಮಾಡಿಕೊಂಡಿರುವ ಅಧ್ಯಯನದ ಕಾರ್ಯಕ್ಷೇತ್ರಗಳ ತಾಂಡಗಳು: ೧) ಸಿಂಗೇನಹಳ್ಳಿ ಲಂಬಾಣಿ ತಾಂಡ, ಒಟ್ಟು ಜನಸಂಖ್ಯೆ ೧೬೦ ಜನ ೨) ತಂಡಗತಾಂಡ ಒಟ್ಟು ೫೬೦ ಜನ ೩) ಕೃಷ್ಣಾಪುರ ಲಂಬಾಣಿ ತಾಂಡ ಒಟ್ಟು ೨೬೧ ಜನ ೪) ಹನುಮನಹಟ್ಟಿ ತಾಂಡ ಒಟ್ಟು ೩೧೦ ಜನ ೫) ಅಲಘಟ್ಟ ತಾಂಡ ಒಟ್ಟು ೪೩೦ ಜನ ಆಯ್ಕೆಗೆ ಒಳಪಡಿಸಿರುವ ಐದು ತಾಂಡಗಳ ಒಟ್ಟು ಜನಸಂಖ್ಯೆ-೧೭೨೧, ಇವರಲ್ಲಿ ಪುರುಷರು ೯೨೨ ಮಹಿಳೆಯರು ೭೯೯.

**ಕುಟುಂಬ ವ್ಯವಸ್ಥೆ:** ಸಮೀಕ್ಷಿಸಿದ ಎಲ್ಲಾ ತಾಂಡಗಳಲ್ಲಿನ ಕುಟುಂಬ ವ್ಯವಸ್ಥೆಯು ವಿಭಕ್ತ ರಚನೆಯಾಗಿದ್ದು ಒಟ್ಟು ೬೫ ಸಂಖ್ಯೆಯಲ್ಲಿದ್ದರೆ ಅವಿಭಕ್ತ ಕುಟುಂಬಗಳ ಸಂಖ್ಯೆ ಅತಿ ಕಡಿಮೆ ಇದ್ದು ಕೇವಲ ಐದು ಕುಟುಂಬಗಳು ಮಾತ್ರ ಕಂಡುಬರುತ್ತದೆ. ಪಿತೃಪ್ರಾಧಾನ್ಯತೆ, ಪಿತೃ ವಂಶೀಯತೆ ಮತ್ತು ಪಿತೃ ಸ್ಥಳಿಯತೆಯನ್ನು ಅನುಸರಿಸುತ್ತಿದ್ದರು, ಶಿಕ್ಷಣ, ಅಧಿಕಾರ, ವಲಸೆ ಪ್ರಕ್ರಿಯೆಗಳ ಪರಿಣಾಮದಿಂದಾಗಿ ನವಸ್ಥಳೀಯ ಕುಟುಂಬಗಳನ್ನು ಕೂಡ ಕಾಣಬಹುದಾಗಿದೆ.

**ವೈವಾಹಿಕ ಸ್ಥಿತಿ:** ಒಟ್ಟು ೭೦ ಕುಟುಂಬಗಳಲ್ಲಿ ಕಂಡುಬರುವ ವೈವಾಹಿಕ ಮಾಹಿತಿ ಈ ರೀತಿ ಇದೆ. ವಿವಾಹಿತರು ೧೨೧ ಅವಿವಾಹಿತರು ೮೫, ವಿಧುರರು ೧೫ ಮತ್ತು ವಿಧವೆಯರು ೬ ಸಂಖ್ಯೆಯಲ್ಲಿದ್ದಾರೆ. ಬಂಜಾರ ಸಮುದಾಯಗಳಲ್ಲಿ ಮೈದುನ ವಿವಾಹ, ನಾದಿನಿ ವಿವಾಹಗಳು, ಹಾಗೂ ವಿಧವಾ ವಿವಾಹಗಳು ಅಸ್ಥಿತ್ವದಲ್ಲಿದ್ದರು ಹೊಸದುರ್ಗಾ ತಾಲ್ಲೂಕಿನ ಎಲ್ಲಾ ಐದು ತಾಂಡಗಳಲ್ಲಿ ಈ ಆಚರಣೆ ಅಷ್ಟಾಗಿ ಕಂಡುಬರುವುದಿಲ್ಲ.

**ಬಂಧುತ್ವ ಸಂಬಂಧಗಳು:** ಅಧ್ಯಯನಕ್ಕೆ ಒಳಪಡಿಸಿರುವ ಐದು ತಾಂಡಗಳಲ್ಲಿ ಬಂಧುತ್ವ ವ್ಯವಸ್ಥೆ ಇಂದಿಗೂ ಸಾಂಪ್ರಾದಾಯಿಕವಾಗಿ ಆಚರಣೆಯಲ್ಲಿದ್ದು ಒಳಬಾಂಧವ್ಯದ ಜೊತೆಗೆ ಹೊರಬಾಂಧವ್ಯದ ಪಂಗಡವನ್ನು ಕಾಣಬಹುದಾಗಿದೆ. ಈ ಸಮುದಾಯದಲ್ಲಿ ಒಟ್ಟು ೨೫

ಪಂಗಡಗಳು ಮತ್ತು ೫೨ ಗೋತ್ರಗಳು ಕಂಡುಬರುತ್ತವೆ. ಇವೆಲ್ಲವೂ ಐತಿಹಾಸಿಕವಾಗಿ ಮುಂದುವರಿದುಕೊಂಡು ಬಂದಿರುವ ಸಾಮಾನ್ಯ ನಿಯಮಗಳೇ ಆಗಿವೆ.

**ಶೈಕ್ಷಣಿಕ ಮಾಹಿತಿ:** ಅಧ್ಯಯನಕ್ಕೆ ಒಳಪಡಿಸಿಕೊಂಡಿರುವ ತಾಂಡಗಳ ಒಟ್ಟು ೧೭೨೧ ಜನಸಂಖ್ಯೆಯಲ್ಲಿ ಕಂಡುಬಂದಿರುವ ಶೈಕ್ಷಣಿಕ ಮಾಹಿತಿ ಒಟ್ಟು ವಿದ್ಯಾವಂತರು ೨೩೭, ಪ್ರಾಥಮಿಕ ಶಿಕ್ಷಣ ೧೦೮ ಜನ, ಪ್ರೌಢಶಿಕ್ಷಣ ೪೮ ಜನ, ಪಿ.ಯು.ಸಿ ಶಿಕ್ಷಣ ૩೫ ಜನ, ಪದವಿ ಶಿಕ್ಷಣ ೧೩, ವೃತ್ತಿ ಶಿಕ್ಷಣ ೦೫, ಹೊಸದುರ್ಗಾ ತಾಲ್ಲೂಕು ಲಂಬಾಣಿ ತಾಂಡಗಳಲ್ಲಿ ಶಿಕ್ಷಣ ಮಟ್ಟವು ದಿನೇ ದಿನೇ ಹೆಚ್ಚಾಗುತ್ತಿದ್ದು ಸಾಕ್ಷರತೆ ಪ್ರಗತಿಯಲ್ಲಿದೆ ಸರ್ಕಾರದ ಸವಲತ್ತುಗಳನ್ನು ಈ ಸಮುದಾಯಗಳ ಯುವಕ ಯುವತಿಯರು ಪ್ರಜ್ಞಾಪೂರ್ವಕ ವಾಗಿ ಸದುಪಯೋಗ ಪಡಿಸಿಕೊಳ್ಳುತ್ತಿರುವುದು ಒಂದು ಉತ್ತಮ ಬೆಳವಣಿಗೆಯೇ ಸರಿ.

**ಸಮುದಾಯ ಸಂಸ್ಕೃತಿ:** ಆಯ್ಕೆ ತಾಲ್ಲೂಕಿನ ಸಮುದಾಯಗಳ ಸಂಸ್ಕೃತಿಯು ಹೆಚ್ಚು ಕಡಿಮೆ ಸಾಮಾನ್ಯ ರೀತಿಯಲ್ಲಿಯೇ ಇದೆ. ಊಟೋಪಚಾರ, ಉಡುಗೆ–ತೊಡುಗೆ, ಹಬ್ಬ–ಹರಿದಿನಗಳು, ಇತ್ಯಾದಿಗಳೆಲ್ಲವೂ ಭಾರತಾದಾದ್ಯಂತ ಕಂಡುಬರುವ ಎಲ್ಲಾ ಲಂಬಾಣಿ ತಾಂಡಗಳಂತೆ ಇಲ್ಲಿಯೂ ಕಂಡುಬರುತ್ತದೆ. ಆದರೆ ತಾಂಡಗಳ ಚಾರಿತ್ರಿಕ ಹಿನ್ನೆಲೆ ನೋಡುವುದಾದರೆ ವಲಸೆ ಪ್ರಕ್ರಿಯೆ, ರೀತಿ–ರಿವಾಜು, ಪರಿವರ್ತನೆಗಳೆಲ್ಲವನ್ನು ಪರಿಶೀಲಿಸಿದಾಗ ಶೇ. ೩೦ರಷ್ಟು ಮೌಖಿಕ ಪರಂಪರೆಗಳು ಇದಕ್ಕೆ ಪೂರಕವಾದರೆ ಶೇ. ೪೦ರಷ್ಟು ಮಾಹಿತಿಯನ್ನು ತಾಂಡಗಳ ಸಂಪ್ರದಾಯಿಕ ವ್ಯವಸ್ಥೆಯಿಂದ ಕಂಡುಬರುತ್ತದೆ. ಉಳಿದಂತೆ ಕುಶಲ ಕಲೆ ಸಂಸ್ಕೃತಿಯಿಂದ ಶೇ. ೨೦ರಷ್ಟು ಮತ್ತು ಚಿತ್ರಕಲಾ ಸಂಸ್ಕೃತಿಯಿಂದ ಶೇ. ೧೦ರಷ್ಟು ಮಾಹಿತಿ ಸಂಶೋಧನೆಗೆ ಲಭ್ಯವಾಗಿದೆ.

**ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕು ಅಧ್ಯಯನ ಕ್ಷೇತ್ರ ತಾಂಡಗಳು**

ಚಿಕ್ಕಮಗಳೂರು ಜಿಲ್ಲೆ ೧೯೪೭ರವರೆಗೆ ಕೊಡಗು ಪ್ರಾಂತೀಯಕ್ಕೆ ಒಳಪಟ್ಟಿತ್ತು. ನಂತರ ಸ್ವತಂತ್ರ ಜಿಲ್ಲೆಯಾಗಿ ಮಾರ್ಪಾಟಾಗಿತ್ತು. ಇದು ಮಲೆನಾಡು ಪ್ರದೇಶವಾಗಿದ್ದು, ದಟ್ಟಾರಣ್ಯ ಪ್ರದೇಶವಾಗಿ ಐತಿಹಾಸಿಕ ಹಿನ್ನಲೆಯನ್ನು ಹೊಂದಿದ್ದು, ಧಾರ್ಮಿಕ ಪ್ರಖ್ಯಾತಿ ಸ್ಥಳಗಳನ್ನು ಒಳಗೊಂಡಿದೆ. ದತ್ತಪೀಠ, ಬಾಬಾಬುಡನ್‌ಗಿರಿ, ಶೃಂಗೇರಿ ಶಾರದ ಪೀಠ, ಹೊರನಾಡು ಧಾರ್ಮಿಕ ಕ್ಷೇತ್ರ ಸೇರಿದಂತೆ ಕುದುರೆಮುಖ, ಕೆಮ್ಮಣ್ಣು ಗುಂಡಿ ಘಟ್ಟಪ್ರದೇಶವನ್ನು ಹೊಂದಿದೆ. ಈ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧,೩೭,೯೬೧ರಷ್ಟಿದ್ದು, ಇದರಲ್ಲಿ ಪುರುಷರು ೫,೬೬,೬೨೨, ಸ್ತ್ರೀಯರು ೫,೭೧,೩೩೯ರಷ್ಟಿದ್ದಾರೆ. ಇಲ್ಲಿನ ಗ್ರಾಮೀಣ ಜನಸಂಖ್ಯೆ ೧,೮೬,೯೬೭

ಇವರಲ್ಲಿ ಪುರುಷರು ೯೩,೨೧೯, ಸ್ತ್ರೀಯರು ೯೩,೭೪೮ ಹಾಗೂ ಜಿಲ್ಲೆಯ ಪರಿಶಿಷ್ಟ ಜಾತಿ ಒಟ್ಟು ಜನಸಂಖ್ಯೆ ೨,೫೩,೬೫೧, ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆ ೪೪,೯೭೦ರಷ್ಟಿದೆ. ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಕ್ಷೇತ್ರತಾಂಡಗಳೆಂದರೆ: ತಾಂಡಗಳ ಹೆಸರು ೧) ಎಂ.ಎನ್ ತಾಂಡ– ೪೧೬ ಜನ ೨) ಬಸವನಹಳ್ಳಿ ತಾಂಡ–೭೬೪ ಜನ ೩) ಸಿ.ಎಲ್.ತಾಂಡ–೨೨೮ ಜನ ೪) ನಿಡುವಳ್ಳಿತಾಂಡ–೨೭೨ ಜನ ೫) ಉಪ್ಪಿನಹಳ್ಳಿ ತಾಂಡ– ೫೦೦ ಜನ ಹೀಗೆ ಒಟ್ಟು ೫ ತಾಂಡಗಳ ಜನಸಂಖ್ಯೆ ೨೧೮೦ ಇವರಲ್ಲಿ ಪುರುಷರು ೧೧೦೦ ಮಹಿಳೆಯರು ೧೦೮೦.

**ಕುಟುಂಬಗಳ ಸ್ಥಿತಿ:** ಚಿಕ್ಕಮಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಆಯ್ಕೆ ಮಾಡಿಕೊಂಡಿರುವ ತಾಂಡಗಳ ಸಂಪ್ರದಾಯಿಕ ಮುಖಂಡರು ಮತ್ತು ಜನಸಾಮಾನ್ಯರು ವಾಸಿಸುವ ಕುಟುಂಬಗಳ ವಿಧದ ಬಗ್ಗೆ ಹೇಳುವುದಾದರೆ ನಾಯಕ, ಡಾವೋ ಮತ್ತು ಕಾರಬಾರಿಗಳು ವಿಭಕ್ತ ಕುಟುಂಬಗಳಲ್ಲಿ ವಾಸಿಸುತ್ತಾರೆ. ಇವರ ಸಂಖ್ಯೆ ಒಟ್ಟು ೬೫ ಉಳಿದ ೫ ಕುಟುಂಬಗಳು ಮಾತ್ರ ಅವಿಭಕ್ತ ವ್ಯವಸ್ಥೆಯನ್ನು ಉಳಿಸಿಕೊಂಡಿವೆ.

**ವಿವಾಹದ ಮಾಹಿತಿ:** ಒಟ್ಟು ೭೦ ಕುಟುಂಬಗಳಲ್ಲಿ ವಿವಾಹಿತರು ೧೯೨, ಅವಿವಾಹಿತರು ೧೫೧, ವಿಧುರರು ೪, ವಿಧವೆಯರು ೯, ಬಹುವಿವಾಹ ಪದ್ಧತಿಯು ಸಂಪ್ರದಾಯಿಕವಾಗಿ ಅಸ್ಥಿತ್ವದಲ್ಲಿದ್ದರು ಬದಲಾದ ದಿನಗಳಲ್ಲಿ ವಲಸೆ ಪ್ರಕ್ರಿಯೆಯಿಂದಾಗಿ ಬಹುಪತಿತ್ವ ಮತ್ತು ಬಹುಪತ್ನಿತ್ವ ಪದ್ಧತಿಗಳು ಕಡಿಮೆಯಾಗುತ್ತಿವೆ.

ಚಿಕ್ಕಮಗಳೂರು ಜಿಲ್ಲೆಯು ಮಲೆನಾಡು ಪರಿಸರವಾಗಿದ್ದು ಸಾಮಾಜಿಕ ಸಂಬಂಧಗಳು ನೈಸರ್ಗಿಕವು, ಸಹಜ ಸ್ವರೂಪವು ಆಗಿರುತ್ತದೆ.ವಿಶೇಷವಾಗಿ ಘಟ್ಟ ಪ್ರದೇಶಗಳಲ್ಲಿನ ತಾಂಡ ಸಮುದಾಯಗಳಲ್ಲಿ ವಿವಾಹಗಳು ಸಂಪ್ರದಾಯಕವಾಗಿ ನೆರವೇರುತ್ತಿವೆ. ಒಳಬಾಂದವ್ಯ ವಿವಾಹಗಳು ಹೆಚ್ಚಾಗಿದ್ದರು ಕುಲ ಹೊರಬಾಂಧವ್ಯ ಮತ್ತು ತಾಂಡ ಬಾಂಧವ್ಯ ವ್ಯವಸ್ಥೆಯನ್ನು ಕಾಣಬಹುದಾಗಿದೆ.

**ಶೈಕ್ಷಣಿಕ ಮಾಹಿತಿ:** ಬಹುಪಾಲು ತಾಂಡಗಳು ಶಿಕ್ಷಣದಿಂದ ಅಭಿವೃದ್ಧಿಯನ್ನು ಹೊಂದುತ್ತಿವೆ. ಉಳಿದ ಎರಡು ಜಿಲ್ಲೆಗಳಿಗೆ ಹೋಲಿಸಿದರೆ ಇಂದಿನ ಸಾಕ್ಷರತೆ ಮಟ್ಟ ಉತ್ತಮವಾಗಿದೆ. ಕ್ಷೇತ್ರಾಧ್ಯಯನದಲ್ಲಿ ದೊರೆತ ಮಾಹಿತಿಯಂತೆ ಒಟ್ಟು ಐದು ತಾಂಡಗಳ ಶೈಕ್ಷಣಿಕ ಮಾಹಿತಿ ಈ ರೀತಿ ಇದೆ. ಒಟ್ಟು ೨೧೮೦ ಜನರಲ್ಲಿ ಒಟ್ಟು ವಿದ್ಯಾವಂತರು ೨೫೦ ಜನರಿದ್ದಾರೆ, ಪ್ರಾಥಮಿಕ ಶಿಕ್ಷಣ ಹೊಂದಿರುವವರು ೧೧೦ ಜನ, ಪ್ರೌಢಶಿಕ್ಷಣ ೫೪

ಜನ, ಪಿ.ಯು.ಸಿ.೩೬, ಪದವಿ ೧೮, ವೃತ್ತಿ ಶಿಕ್ಷಣ ೯ ಜನ, ಉಳಿದ ಸಂಖ್ಯೆಯ ಜನರು ಯಾವುದೇ ನಿರ್ದಿಷ್ಟ ಶಿಕ್ಷಣವನ್ನು ಪಡೆದಿರುವುದಿಲ್ಲ.

**ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಳ್ಳಿ ತಾಲ್ಲೂಕಿನ ಅಧ್ಯಯನ ಕ್ಷೇತ್ರಗಳು:** ಚಿಕ್ಕಬಳ್ಳಾಪುರ ಜಿಲ್ಲೆ ೨೦೦೭ರಲ್ಲಿ ಅಸ್ತಿತ್ವಕ್ಕೆ ಬಂದಿರುವ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಯಾಗಿದೆ. ಇದು ಆರು ತಾಲ್ಲೂಕುಗಳನ್ನು ಒಳಗೊಂಡಿದ್ದು, ಉತ್ತರ ಬೆಂಗಳೂರು ಪ್ರಾಂತ್ಯಕ್ಕೆ ಒಳಪಟ್ಟಿದೆ. ರಾಷ್ಟ್ರೀಯ ಹೆದ್ದಾರಿ ೭ರ ಸಂಪರ್ಕವನ್ನು ಹೊಂದಿ ಪಕ್ಕದ ಆಂಧ್ರಪ್ರದೇಶದ ಗಡಿಭಾಗವಾಗಿ ದ್ವಿಭಾಷಿಕರನ್ನು ಹೊಂದಿರುವ ವಿಭಿನ್ನ ಜನಾಂಗಗಳ ವಾಸ್ತವ್ಯ ತಾಣವಾಗಿದೆ. ಜಿಲ್ಲೆಯು ವಿಶೇಷವಾಗಿ ಮುದ್ದೇನಹಳ್ಳಿಯ ವಿಶ್ವೇಶ್ವರಯ್ಯ ಜನ್ಮ ಸ್ಥಳ, ಕರ್ನಾಟಕದ ಊಟಿಎಂದೇ ಹೆಸರಾದ ನಂದಿಬೆಟ್ಟವನ್ನು ಹೊಂದಿದೆ. ಇಲ್ಲಿ ಚಿತ್ರಾವತಿ ಮತ್ತು ಅರ್ಕಾವತಿ ಎಂಬ ನದಿಗಳ ಉಗಮಸ್ಥಾನವಾಗಿದೆ. ಐತಿಹಾಸಿಕವಾಗಿ ಬೋಗೋನಂದೀಶ್ವರ, ಯೋಗನಂದೀಶ್ವರ ಎಂಬ ದೇವಾಲಯಗಳು ರಾಜಪ್ರಭುತ್ವದಲ್ಲಿ ನಿರ್ಮಾಣಗೊಂಡಿರುತ್ತವೆ. ಈ ಜಿಲ್ಲೆಯ ಒಟ್ಟು ಜನಸಂಖ್ಯೆ ೧೨,೫೫,೧೦೪. ಇವರಲ್ಲಿ ಪುರುಷರು ೬,೩೬,೪೩೭, ಸ್ತ್ರೀಯರು ೬,೧೮,೬೬೭ರಷ್ಟಿದ್ದಾರೆ. ಜಿಲ್ಲೆಯ ಒಟ್ಟು ಪರಿಶಿಷ್ಟ ಜಾತಿ ಜನಸಂಖ್ಯೆ ೩೮,೬೫೭. ಇವರಲ್ಲಿ ಪುರುಷರು ೧೯,೨೦೩ ಮತ್ತು ಸ್ತ್ರೀಯರು ೧೮,೮೫೪ರಷ್ಟಿದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡದ ಒಟ್ಟು ಜನಸಂಖ್ಯೆಯು ೧೬,೭೩ರಷ್ಟಿದ್ದು, ಇವರಲ್ಲಿ ಪುರುಷರು ೮,೫೪೨ ಮತ್ತು ಸ್ತ್ರೀಯರು ೮,೦೮೧ರಷ್ಟಿದ್ದಾರೆ. ೧) ಲಕ್ಷಣತಾಂಡ ೭೫ ಜನ, ೨) ಸಿದ್ಧನಪಳ್ಳಿ ತಾಂಡ ೬೦ ಜನ, ೩) ಮರವಪಲ್ಲಿ ತಾಂಡ ೩೫೦ ಜನ, ೪) ಪಾರ್ವತಿಪುರ ತಾಂಡ ೪೬೦ ಜನ, ೫) ಕ್ಯೂಯಾಲಗುಟ್ಟ ತಾಂಡ ೧೦೦ ಜನ ಒಟ್ಟು ಜನಸಂಖ್ಯೆ ೧೦೪೫ ಇವರಲ್ಲಿ ಪುರುಷರು ೫೪೫ ಜನ ಸ್ತ್ರೀಯರು ೫೦೦ ಜನ ಈ ತಾಂಡಗಳಿಂದ ಅಧ್ಯಯನಕ್ಕಾಗಿ ಒಟ್ಟು ೬೦ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

**ಕುಟುಂಬದ ಮಾಹಿತಿ:** ಅಧ್ಯಯನದ ೫ ತಾಂಡಗಳಲ್ಲಿ ಬಹುಪಾಲು ವಿಭಕ್ತ ಕುಟುಂಬಗಳೇ ಕಂಡುಬಂದು ಪಿತೃಪ್ರಧಾನ ಮತ್ತು ಪಿತೃವಂಶೀಯ ಪದ್ಧತಿ ಕಂಡುಬರುತ್ತದೆ. ಅವಿಭಕ್ತ ಕುಟುಂಬಗಳ ಸಂಖ್ಯೆ ಅತಿ ಕಡಿಮೆಯಾಗಿದ್ದು ಕೇವಲ ಒಂದೆರಡು ಕುಟುಂಬಗಳಷ್ಟೇ ಕಂಡುಬರುತ್ತದೆ. ಉದ್ಯೋಗ, ಶಿಕ್ಷಣ ಮತ್ತು ವ್ಯಾಪಾರಕ್ಕಾಗಿ ಪಕ್ಕದ ಪೇಟೆಗಳಿಗೆ ವಲಸೆ ಹೋಗುತ್ತಿರುವುದರಿಂದ ಮೂಲ ಕುಟುಂಬಗಳ ಸಂಪರ್ಕ ಕಡಿಮೆಯಾಗುತ್ತಿವೆ.

**ವಿವಾಹದ ಮಾಹಿತಿ:** ಬಹುಪಾಲು ಕುಟುಂಬಗಳು ಒಳಬಾಂಧವ್ಯ, ವಿವಾಹ ಪದ್ಧತಿಯನು ಅನುಸರಿಸುತ್ತಿದ್ದು ಪಕ್ಕದ ಆಂಧ್ರಪ್ರದೇಶದ ಪ್ರಭಾವಕ್ಕೆ ಒಳಗಾಗಿ ಹೊರಬಾಂಧವ್ಯ ಮತ್ತು

ಹೊರ ಸಮೂಹಗಳೊಡನೆ ವಿವಾಹಗಳು ಸೇರ್ಪಡೆಯಾಗುತ್ತಿವೆ. ಕಾಲಾಂತರದಲ್ಲಿ ಕಿತ್ತುತಿನ್ನುವ ಬಡತನದಿಂದ ಎಳೆ ಪ್ರಾಯದ ಮಕ್ಕಳು ಕಣ್ಮರೆಯಾಗುತ್ತಿವೆ.

**ಶೈಕ್ಷಣಿಕ ಮಾಹಿತಿ:** ಬಹುಪಾಲು ತಾಂಡಗಳು ಶಿಕ್ಷಣದಿಂದ ವಂಚಿತವಾಗಿವೆ. ತಾಂಡದಿಂದ ಶಾಲೆಗಿರುವ ಅಂತರ ಹೆಣ್ಣು, ಗಂಡು ಮಕ್ಕಳಿಗಿರುವ ತಾರತಮ್ಯ ನೀತಿ ನಿಯಮಗಳು ಸಾರಿಗೆ ಸಂಪರ್ಕದ ಕೊರತೆ ಮತ್ತಿತರ ಕಾರಣಗಳಿಂದಾಗಿ ಇವರು ಶೈಕ್ಷಣಿಕ ಪ್ರಗತಿಯನ್ನು ಸಾಧಿಸಲಾಗಿಲ್ಲ. ಉಳಿದ ಎರಡು ಜಿಲ್ಲೆಗಳಿಗೆ ಪರಾಮರ್ಶಿಸಿದಾಗ ಚಿಕ್ಕಬಳ್ಳಾಪುರ ಜಿಲ್ಲೆಯ, ಭಾಗೇಪಲ್ಲಿ ತಾಲ್ಲೂಕಿನ ತಾಂಡಗಳ ಸಾಕ್ಷರತೆಯ ಮಟ್ಟ ಹಿಂದುಳಿದಿರುವಿಕೆಯಾಗಿದ್ದು ಹೆಚ್ಚಿನ ಪ್ರಗತಿಯನ್ನು ಸಾಧಿಸಲು ಸಾಧ್ಯವಾಗಿಲ್ಲ.

**ಅಧ್ಯಯನದ ಮಹತ್ವ**

ಬಂಜಾರ ಸಮುದಾಯ ಸಾಕಷ್ಟು ಸಂಶೋಧನಾ ಅಧ್ಯಯನಗಳಿಗೆ ಒಳಗಾಗಿದ್ದರೂ ಎಲ್ಲಾ ಬಂಜಾರ ಸಮುದಾಯಗಳನ್ನಾ ಸಮಗ್ರವಾಗಿ ಯಾವುದೇ ಸಂಶೋಧನೆ ನಿರ್ಧಿಷ್ಟವಾಗಿ ಮಾಡಲಾಗದು. ಭಾರತದ ಭೌಗೋಳಿಕ ಹಿನ್ನೆಲೆಯಲ್ಲಿ ಬೇರೆ ಬೇರೆ ಪ್ರಾಂತ್ಯಗಳಲ್ಲಿ ನೆಲೆಸಿರುವ ಈ ಸಮುದಾಯದ ಆಳ ಅಧ್ಯಯನಗಳು ವಿರಳವಾಗಿರುತ್ತವೆ. ಈ ಹಿನ್ನೆಲೆಯಲ್ಲಿ ದಕ್ಷಿಣ ಭಾರತವನ್ನು ಸಾಮಾನ್ಯೀಕರಿಸಿ ಕರ್ನಾಟಕವನ್ನು ಕೇಂದ್ರೀಕರಿಸಿಕೊಂಡು ಭೌಗೋಳಿಕವಾಗಿ ದಕ್ಷಿಣ ಪ್ರಾಂತ್ಯವನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಂಡು ಹೆಚ್ಚಿನ ಸಮುದಾಯಗಳಿರುವ ಮೂರು ಜಿಲ್ಲೆಗಳನ್ನ ಆಯ್ಕೆ ಮಾಡಿಕೊಂಡು ಸಾಂಸ್ಕೃತಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಒಂದು ಮಾನವಶಾಸ್ತ್ರೀಯ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಈ ಸಂಶೋಧನೆಯ ಮಹತ್ವ ಈ ಕೆಳಕಂಡಂತೆ ಕಾಣಬಹುದಾಗಿದೆ.

೧. ಬಂಜಾರರ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಅವಲೋಕಿಸುವುದು.

೨. ಒಂದು ಮಲೆನಾಡು ಪ್ರದೇಶ ಹಾಗೂ ಬಯಲು ಪ್ರದೇಶಗಳಲ್ಲಿನ ಬಂಜಾರ ಸಮುದಾಯಗಳನ್ನ ತುಲನಾತ್ಮಕವಾಗಿ ನೋಡುವುದಾಗಿದೆ.

೩. ಗಡಿ ಪ್ರದೇಶಗಳ ಸಮುದಾಯಗಳು ಅಂದರೆ ಬಾಗೇಪಲ್ಲಿ ತಾಲ್ಲೂಕಿನ ತಾಂಡಗಳು ಭಾಷಿಕವಾಗಿ ನೆರೆಯ ಆಂಧ್ರಪ್ರದೇಶದ ಸಾಂಸ್ಕೃತಿಕ ಜೀವನಕ್ಕೆ ಪರಾಮರ್ಶಿತವಾಗಿರುತ್ತದೆ ಎಂಬ ವಿಷಯವನ್ನು ತಿಳಿಯುವುದಾಗಿದೆ.

೪. ಬಂಜಾರರ ವೇಷಭೂಷಣ, ಆಚಾರ-ವಿಚಾರ ಇವುಗಳ ಪರಸ್ಪರತೆ ಅಂಶಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

೫. ಸರ್ಕಾರದ ಸವಲತ್ತುಗಳ ಸದುಪಯೋಗದಲ್ಲಿ ಬಂಜಾರ ಸಂಘ-ಸಂಸ್ಥೆಗಳು ತಾಂಡ ಅಭಿವೃದ್ಧಿ ನಿಗಮಗಳು ಯಾವ ರೀತಿ ಮತ್ತು ಎಷ್ಟರ ಮಟ್ಟಿಗೆ ಬಂಜಾರರ ಬದುಕಿಗೆ ನೆರವಾಗಿವೆ ಮತ್ತು ಸಹಕರಿಸಿವೆ ಎಂಬ ವಿಷಯಗಳನ್ನ ತಿಳಿಯುವ ಪ್ರಯತ್ನ ಮಾಡಲಾಗಿದೆ.

## ೧.೫. ಅಧ್ಯಯನದ ವಿಧಾನ

ಕುಲಶಾಸ್ತ್ರೀಯ ಅಧ್ಯಯನ ವಿಧಾನವು 'ಸಾಮಾಜಿಕ ಮಾನವಶಾಸ್ತ್ರ' ಅಧ್ಯಯನ ವಿಧಾನಗಳಲ್ಲಿ ಒಂದು ಭಾಗವೆಂದು ಕರೆಯಬಹುದು. ಯಾವುದೇ ಒಂದು ಕುಲ, ಜಾತಿ, ಸಮುದಾಯ ಅಥವಾ ಜನಾಂಗದ ಜೀವನ ವಿಧಾನದ ಬಗೆಗೆ ಇರುವ ಕುಲಮೂಲ ಕಥನಗಳು, ಪುರಾಣಗಳು, ಐತಿಹ್ಯಗಳು, ಜನಪದ ಕಥೆಗಳು, ಉಡುಗೆ-ತೊಡುಗೆಗಳು, ಆಚರಣೆ-ಸಂಪ್ರದಾಯಗಳು, ನಂಬಿಕೆಗಳು, ವಿಧಿ ನಿಷೇಧಗಳು, ಧಾರ್ಮಿಕ ಪದ್ಧತಿಗಳು, ಆಹಾರ ಪದ್ಧತಿಗಳು, ಉಡುಗೆ ತೊಡುಗೆಗಳು, ವೃತ್ತಿಗಳು, ದೈವಗಳ ಆರಾಧನೆ, ವೈವಾಹಿಕ ಸಂಬಂಧಗಳು, ಕೌಟುಂಬಿಕ ಸಂಬಂಧಗಳು, ಬದುಕಿನ ನೀತಿ-ನಿಯಮಗಳು, ಸಾಮಾಜಿಕ ಮತ್ತು ಸಾಮುದಾಯಿಕ ನಿಯಂತ್ರಣದ ವಿಧಾನಗಳು, ನ್ಯಾಯ ಪಂಚಾಯಿತಿ ಹಾಗೂ ಕಲೆ, ಸಾಹಿತ್ಯ ಮುಂತಾದವುಗಳು ಆ ಸಮುದಾಯದ ಸಾಂಸ್ಕೃತಿಕ ಚಿತ್ರಣವನ್ನು ಅನಾವರಣ ಮಾಡುತ್ತಿವೆ. ಹಾಗಾಗಿ ಸಮುದಾಯದ ಅಧ್ಯಯನದಲ್ಲಿ ಇವುಗಳು ಪ್ರಮುಖ ಅಂಶಗಳಾಗುತ್ತವೆ. ಈ ಎಲ್ಲ ಅಂಶಗಳನ್ನು ಒಟ್ಟಾರೆಯಾಗಿ 'ಸಂಸ್ಕೃತಿ' ಎಂದು ಕರೆಯಲಾಗುತ್ತೆ. ಸಂಸ್ಕೃತಿ ಜೀವನದ ಎಲ್ಲಾ ಅಂಶಗಳನ್ನು ಒಳಗೊಂಡಿರುತ್ತದೆ. ಆ ಕಾರಣಕ್ಕೆ ಮಾನವಶಾಸ್ತ್ರಜ್ಞರು ಸಂಸ್ಕೃತಿಯನ್ನು 'ಜೀವನದ ಒಂದು ವಿಧಾನ'(Culture is a way of life) ಎಂದು ಕರೆದಿದ್ದಾರೆ.

ಮಾನವಶಾಸ್ತ್ರದ ಅಧ್ಯಯನದ ವಿಧಾನಗಳಲ್ಲಿ ಕ್ಷೇತ್ರಕಾರ್ಯ ವಿಧಾನವು ಒಂದು.ಈ ಕ್ಷೇತ್ರದಲ್ಲಿ ಒಬ್ಬ ತಜ್ಞ ಎನ್ನಿಸಿಕೊಳ್ಳಬೇಕಾದರೆ ಆತನಿಗೆ ಕ್ಷೇತ್ರಕಾರ್ಯದ ಗರಿಷ್ಠ ಅನುಭವ ಇರಲೇಬೇಕು. ಆಗ ಸಮುದಾಯಗಳ ನಿಜ ಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವುದಕ್ಕೆ ಸಾಧ್ಯ. ಹಾಗಾಗಿ ಪ್ರಸ್ತುತ ಅಧ್ಯಯನದಲ್ಲಿ ಕ್ಷೇತ್ರಕಾರ್ಯ ವಿಧಾನವನ್ನೇ ಪ್ರಮುಖ ಆಕರವನ್ನಾಗಿ ಮಾಡಿಕೊಳ್ಳಲಾಗಿದೆ. ಇದರಿಂದ ಸಮುದಾಯದ ಪರಂಪರೆ ಮತ್ತು ಪ್ರಸ್ತುತದ ಸ್ಥಿತಿಗತಿಯನ್ನು ಅರ್ಥ ಮಾಡಿಕೊಳ್ಳಬಹುದು. ಅಲ್ಲದೆ ಇಂತಹ ಹಿಂದುಳಿದ ಬಂಜಾರ ಸಮುದಾಯಗಳಿಗೆ ಕ್ಷೇತ್ರಕಾರ್ಯದ ಅನಿವಾರ್ಯತೆ ಇನ್ನು ಹೆಚ್ಚಾಗಿರುತ್ತದೆ. ಈ ಅಧ್ಯಯನ ವಿಧಾನಕ್ಕಾಗಿ ಮಾನವಶಾಸ್ತ್ರದ ಸಂಶೋಧನ ವಿಧಾನಗಳಾದ ಸಂದರ್ಶನ, ಅವಲೋಕನ,

ಪ್ರಶ್ನಾವಳಿ ವಿಧಾನ ಮುಂತಾದ ವಿಧಾನಗಳನ್ನು ಅನುಸರಿಸಲಾಗಿದೆ. ಕೊಟ್ಟಿರುವ ಅವಧಿಯಲ್ಲಿ ಮಾಡಬಹುದಾದ ಅಧ್ಯಯನ ಸ್ವರೂಪ ಮತ್ತು ವ್ಯಾಪ್ತಿಯನ್ನು ಅಧ್ಯಯನ ಸಮಿತಿಯಲ್ಲಿ ರೂಪಿಸಲಾಯಿತು. ಆ ಪ್ರಕಾರ ಅಧ್ಯಯನ ಕೈಗೊಳ್ಳಲಾಗಿದೆ.

ಈ ವಿಧಾನಕ್ಕಾಗಿ ಮೊದಲಿಗೆ ದಕ್ಷಿಣ ಕರ್ನಾಟಕದ ಜಿಲ್ಲೆಗಳನ್ನು ಗುರ್ತಿಸಿಕೊಂಡು ಇಲ್ಲಿನ ಮೂರು ಜಿಲ್ಲೆಗಳ ಮೂರು ತಾಲ್ಲೂಕುಗಳನ್ನು ಸಂಬಂಧಿಸಿದ ಕಛೇರಿಗಳಿಂದ ಮಾಹಿತಿ ಸಂಗ್ರಹಿಸುವ ಕಾರ್ಯವನ್ನು ಆರಂಭಿಸಿದೆನು. ಇದಕ್ಕಾಗಿ ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬಂಜಾರರ ಅಭಿವೃದ್ಧಿ ನಿಗಮ, ಅಂಕಿಸಂಖ್ಯೆಯ ಇಲಾಖೆ, ಮುಂತಾದ ಇಲಾಖೆಗಳಿಂದ ಅಧ್ಯಯನಕ್ಕೆ ಸಂಬಂಧಿಸಿದ ಪ್ರಾಥಮಿಕ ಮಾಹಿತಿಯನ್ನು ಕಲೆಹಾಕಲಾಯಿತು. ಇವುಗಳ ಜೊತೆಗೆ ಈ ಸಮುದಾಯಗಳಿಗೆ ಸಂಬಂಧಿಸಿದ ಸಂಘಟನೆಗಳು, ಸಂಘ-ಸಂಸ್ಥೆಗಳನ್ನು ಭೇಟಿ ಮಾಡಿ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಇಲ್ಲಿ ಎರಡು ಪ್ರಕಾರದ ಸಂಘ-ಸಂಸ್ಥೆಗಳನ್ನು ಬಳಸಿಕೊಳ್ಳಲಾಗಿದೆ. ಒಂದು ಸಮುದಾಯದ ಸಂಘ ಸಂಸ್ಥೆಗಳು. ಮತ್ತೊಂದು ಈ ಸಮುದಾಯದ ಅಭಿವೃದ್ಧಿಯ ಹೆಸರಿನಲ್ಲಿ ಹುಟ್ಟಿಕೊಂಡಿರುವ ಸರಕಾರ ಮತ್ತು ಖಾಸಗಿ ಸಂಸ್ಥೆಗಳು ಸೇರಿವೆ.

ಈ ಮೇಲಿನ ಆಕರಗಳಿಂದ ಮುಖ್ಯವಾಗಿ ಬಂಜಾರರು ನೆಲೆಸಿರುವ ಪ್ರಮಾಣವನ್ನು ಗುರುತಿಸಿಕೊಳ್ಳಲಾಯಿತು. ಅಂದರೆ ಇವರು ಯಾವ ಪ್ರದೇಶದಲ್ಲಿ, ಯಾವ ತಾಲ್ಲೂಕಿನಲ್ಲಿ, ಯಾವ ಗ್ರಾಮದಲ್ಲಿ ಹೆಚ್ಚಾಗಿ ನೆಲೆಸಿದ್ದಾರೆ ಹಾಗೂ ಕಡಿಮೆ ಪ್ರಮಾಣದಲ್ಲಿ ನೆಲೆಸಿದ್ದಾರೆ ಎನ್ನುವುದನ್ನು ಮೊದಲಿಗೆ ಗುರುತಿಸಿಕೊಳ್ಳಲಾಯಿತು. ಇದರಿಂದ ಈ ಸಮುದಾಯದ ಬದುಕಿನ ಕೆಲವು ಆಯಾಮಗಳು ತಿಳಿದುಬಂದವು. ಪ್ರಮುಖವಾಗಿ ನೆಲೆ ಮತ್ತು ವೃತ್ತಿಗೆ ಇರುವ ಸಂಬಂದಗಳು ಖಚಿತವಾದವು. ಅನಂತರ ಅಧ್ಯಾಯನಕ್ಕಾಗಿ ಸ್ಥಳಗಳನ್ನು ಗುರುತಿಸಿ ಕೊಂಡೆನು. ಜನಸಂಖ್ಯೆ ಕಡಿಮೆ ಇರುವ ಮತ್ತು ಹೆಚ್ಚು ಇರುವ ಸ್ಥಳಗಳನ್ನು ಮುಖ್ಯವೆಂದು ಗ್ರಹಿಸಿ ಈ ವಿಂಗಡಣೆಯನ್ನು ಮಾಡಿಕೊಳ್ಳಲಾಯಿತು. ಈ ಪರಿಕಲ್ಪನೆಯಿಂದ ಪ್ರತಿ ಜಿಲ್ಲೆಯಿಂದ ಕನಿಷ್ಠ ಒಂದು ತಾಲ್ಲೂಕುಗಳನ್ನು ಹಾಗೂ ಗರಿಷ್ಠ ಮೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಆ ಪ್ರತಿ ತಾಲ್ಲೂಕಿನಲ್ಲಿ ಕನಿಷ್ಠ ಕ್ಷೇತ್ರಕಾರ್ಯ ನಡೆಸಿ ಐದು ತಾಂಡಗಳಲ್ಲಿ ಅಧ್ಯಯನಕ್ಕೆ ಸಂಬಂಧಿಸಿದ ಸಮುದಾಯದ ಕೌಟಂಬಿಕ ವಿವರಗಳನ್ನು ಪಡೆಯಲಾಯಿತು. ಈ ವಿಧಾನಕ್ಕಾಗಿ ಸಮುದಾಯದ ಸಮಗ್ರವಾದ ಮಾಹಿತಿಯನ್ನು ಪಡೆಯಬಹುದಾದ ಪ್ರಶ್ನಾವಳಿಯನ್ನು ಮಾನವಶಾಸ್ತ್ರ ವಿದ್ವಾಂಸರ ಸಮಿತಿಯಲ್ಲಿ ಚರ್ಚಿಸಿ

ರಚಿಸಲಾಯಿತು. ಈ ಪ್ರಶ್ನಾವಳಿಯನ್ನೆ ಕ್ಷೇತ್ರಕಾರ್ಯದಲ್ಲಿ ಅನುಸರಿಸಲಾಯಿತು. ಇಲ್ಲಿ ಅನುಸರಿಸಿದ ಪ್ರಶ್ನಾವಳಿಯ ಮಾದರಿಗಳು ಎರಡು ಪ್ರಕಾರದಿಂದ ಕೂಡಿವೆ. ಒಂದು ಪ್ರತಿಯೊಂದು ಕುಟುಂಬದ ಸಮಗ್ರ ವಿವರವನ್ನು ಪಡೆಯುವುದು. ಮತ್ತೊಂದು ಈ ಸಮುದಾಯದ ಚಾರಿತ್ರಿಕ ಹಿನ್ನಲೆಯನ್ನು, ಜನನದಿಂದ ಮರಣದವರೆಗೆ ನಡೆಯುವ ಆಚರಣೆ ಸಂಪ್ರದಾಯಗಳನ್ನು, ವೃತ್ತಿಗಳ ವಿವರಗಳನ್ನು, ಸಂಘ-ಸಂಸ್ಥೆಗಳ ವಿವರಗಳನ್ನು ಹೀಗೆ ಮುಂತಾದ ವಿವರಗಳನ್ನು ಪಡೆಯಬಹುದಾದ ಪ್ರಶ್ನಾವಳಿಯನ್ನು ಸಿದ್ದಪಡಿಸಿಕೊಂಡು ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಪ್ರಶ್ನಾವಳಿಗಳ ಬಳಕೆ ಬಿನ್ನವಾಗಿದೆ.ಪ್ರಮುಖವಾಗಿ ತಾಂಡಗಳಲ್ಲಿ ನೆಲೆಸಿರುವ ಜನಸಂಖ್ಯೆಯನ್ನು ಆದರಿಸಿ ತುಂಬಲಾಗಿದೆ. ಹೆಚ್ಚು ಜನಸಂಖ್ಯೆ ಇರುವ ತಾಂಡಗಳನ್ನು ಪ್ರಮುಖವೆಂದು ಗ್ರಹಿಸಿ ಹೆಚ್ಚು ಕೌಟುಂಬಿಕ ವಿವರವನ್ನು ಪಡೆಯಬಹುದಾದ ಪ್ರಶ್ನಾವಳಿಗಳನ್ನು ತುಂಬಲಾಗಿದೆ. ಎರಡನೆ ಪ್ರಶ್ನಾವಳಿಯ ಮಾಹಿತಿಗಾಗಿ ತಾಂಡದ ಹಿರಿಯರನ್ನು, ಶಿಕ್ಷಣವಂತರನ್ನು, ಮಹಿಳೆಯರನ್ನು ಮತ್ತು ಯುವಕರನ್ನು ಗುಂಪಾಗಿ ಸೇರಿಸಿ ಚರ್ಚೆ ಮುಖಾಂತರ ಮಾಹಿತಿಯನ್ನು ಪಡೆಯಲಾಗಿದೆ. ಈ ಸಮುದಾಯ ಸಹ ಸಂದರ್ಶನ ಮಾಡಿ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಎಲ್ಲ ಮಾಹಿತಿಯನ್ನು ಸಂಯುಕ್ತಗೊಳಿಸಿ ಸಮುದಾಯವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

ದಕ್ಷಿಣ ಕರ್ನಾಟಕದ ಮೂರು ಜಿಲ್ಲೆಯಲ್ಲಿ ಮೂರು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಒಟ್ಟಾರೆ ಹದಿನೈದು ತಾಂಡಗಳಲ್ಲಿ ಕಾರ್ಯ ಮಾಡಲಾಗಿದೆ. ಇಲ್ಲಿ ಸುಮಾರು ೨೦೦ ಜನ ಸಮುದಾಯದ ಹಿರಿಯರು ತಮ್ಮ ತಾಂಡಗಳ ಬಗ್ಗೆ ಅರಿವು ಇರುವವರನ್ನು ಸಂದರ್ಶನ ಮಾಡಿ ಸಮಗ್ರ ಮಾಹಿತಿ ಪಡೆಯಲಾಯಿತು. ೨೦೦ ಕುಟುಂಬಗಳ ಸಮೀಕ್ಷೆಯನ್ನು ಮಾಡಿದ್ದೇವೆ. ಸಂದರ್ಶನ ಮಾಡಿದ ವ್ಯಕ್ತಿಗಳ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. ಸಮುದಾಯಕ್ಕೆ ಸೇರಿದ ಸಂಘಟನೆಗಳು ಹಾಗೂ ಹಿರಿಯ ತಜ್ಞರೊಡನೆ ಗುಂಪಾಗಿ ಚರ್ಚಿಸಿ, ಕೆಲವರೊಡನೆ ಸಂದರ್ಶನ ನಡೆಸಿ ಅವರ ಅಭಿಪ್ರಾಯವನ್ನು ದಾಖಲಿಸಿಕೊಳ್ಳಲಾಗಿತು. ಈ ಸಮುದಾಯ ಹುಟ್ಟು, ಧಾರ್ಮಿಕ ಪದ್ಧತಿ, ಆಚರಣೆಗಳು ಹಾಗೂ ನಂಬಿಕೆಗಳು. ಸಂಪ್ರದಾಯಿಕ ವೃತ್ತಿ, ರೂಢಿ-ಸಂಪ್ರದಾಯಗಳು, ನೀತಿ-ನಿಯಮಗಳು ಮುಂತಾದವುಗಳ ಮಾಹಿತಿಯನ್ನು ಪಡೆಯಲಾಯಿತು.

ಒಟ್ಟಾರೆ ಈ ಸಮುದಾಯಗಳ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಶೈಕ್ಷಣಿಕ ಹಾಗೂ ಧಾರ್ಮಿಕ ವಿಷಯಗಳ ಬಗ್ಗೆ ಹಾಗೂ ಇತರ ಸಮುದಾಯಗಳೊಡನೆ ಇರುವ ಸಂಬಂಧಗಳ

ಬಗ್ಗೆಯ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಈ ಬಗ್ಗೆ ಕ್ಷೇತ್ರಕಾರ್ಯ ಕೈಗೊಂಡ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ.

**ಸಂಶೋಧನಾ ಮಾದರಿ ವಿಧಾನ**

ಮಾನವಶಾಸ್ತ್ರೀಯ ಅಧ್ಯಯನಗಳಲ್ಲಿ ಜನಾಂಗೀಯ ಅಧ್ಯಯನವು ಒಂದು ಪ್ರಮುಖ ಅಂಗವಾಗಿದೆ.ಜನಾಂಗೀಯ ಅಧ್ಯಯನ ಕ್ಷೇತ್ರದ ಜಾನಪದ ಕಕ್ಷೆಯಲ್ಲಿ ಬರುವುದು. ಜಾನಪದ ಸಮಾಜವು ಪರಂಪರಾನುಗತವಾದ ಮೌಖಿಕ ಸಂಸ್ಕೃತಿಯ ಪ್ರತಿನಿಧಿಯಾಗಿದೆ. ಯಾವುದೇ ಪ್ರೌಢ ಸಂಸ್ಕೃತಿಯ ಅಥವಾ ಸಾಹಿತ್ಯದ ಪ್ರಭಾವ ಇದರ ಮೇಲೆ ಆಗಿರುವುದಿಲ್ಲ. ತಮ್ಮದೇ ಆದೆ ಕಟ್ಟುಪಾಡುಗಳ ಹಿನ್ನಲೆಯಲ್ಲಿ ಜಾನಪದೀಯ ಬದುಕು ಬೆಳೆದಿರುತ್ತದೆ. ಪ್ರಸ್ತುತ ಅಧ್ಯಯನದ ವಿಧಾನವು ಮಾಹಿತಿ ಸಂಗ್ರಹಣೆ, ಮಾಹಿತಿ ವಿಶ್ಲೇಷಣೆ ಹಾಗೂ ಕ್ರೂಢೀಕರಣ ಪ್ರಕ್ರಿಯೆಯನ್ನು ಒಳಗೊಂಡಿದೆ. ಅಧ್ಯಯನಕ್ಕೆ ಪೂರಕವಾದ ಸಾಹಿತ್ಯ ಗ್ರಂಥಗಳು, ಪುರಾವೆಗಳು, ಐತಿಹ್ಯಗಳು ಮತ್ತು ದಾಖಲೆಗಳ ಕೂಲಂಕುಷ ಪರಿಶೀಲನೆಯ ಪ್ರಯತ್ನವಾಗಿದೆ.

**ಮಾಹಿತಿ ಸಂಗ್ರಹಣಾ ವಿಧಾನ**

ಅಧ್ಯಯನಕ್ಕೆ ಪೂರಕವಾದ ಸಾಕಷ್ಟು ಮಾಧ್ಯಮಿಕ ಮೂಲ ಮಾಹಿತಿಗಳು ಲಭ್ಯವಿರುವುದಾದರೂ ಹಾಗು ದೊರೆಯುವ ಮಾಹಿತಿಯಲ್ಲಿ ಕೆಲವು ಉತ್ಪ್ರೇಕ್ಷಿತ ಮಾಹಿತಿಯಾಗಿರುವುದರಿಂದ ಮೂಲತಃ ಪ್ರಾಥಮಿಕ ಮಾಹಿತಿ ಸಂಗ್ರಹಣೆಯ ಕಾರ್ಯ ಕೈಗೊಳ್ಳಲಾಯಿತು. ಮಾರ್ಗದರ್ಶಕರ ಮಾರ್ಗಸೂಚಿ ಹಾಗೂ ನಿರ್ದೇಶನದಂತೆ ಕರಡು ಪ್ರಶ್ನಾವಳಿಯನ್ನು ಮಾನವಶಾಸ್ತ್ರೀಯ ಹಿನ್ನಲೆಯಲ್ಲಿ ರಚಿಸಿಕೊಂಡು ಪೂರ್ವಾಭಾವಿ ಅವಲೋಕನವನ್ನು ಅಳವಡಿಸಿ ಕ್ಷೇತ್ರಾಧ್ಯಯನವನ್ನು ಕೈಗೊಳ್ಳಲಾಗಿದೆ.

ಅಧ್ಯಯನಕ್ಕೆ ಅಗತ್ಯವಾದ ಮಾಹಿತಿ ಸಂಗ್ರಹ ಮಾಡಲಾಗಿದೆ. ಸಂಗ್ರಹಿಸಲಾದ ಮಾಹಿತಿಯನ್ನು ಪುನರ್‌ಪರಿಶೀಲಿಸಿ ಮಾನವಶಾಸ್ತ್ರೀಯ ವಿಧಾನದ ಮೂಲಕ ಪರಿಶೀಲಿಸಿ, ವಿಂಗಡಿಸಿ ವಿಮರ್ಶಿಸಿಸಲಾಗಿದೆ. ಆದುದರಿಂದ ಅಧ್ಯಯನವು ಮುಖ್ಯವಾಗಿ ಮಾಹಿತಿ ಆಧಾರಿತ ಅಧ್ಯಯನವಾಗಿದೆ. ಅಲ್ಲದೆ ಈ ತಾಂಡಗಳಲ್ಲಿನ ವಿಶೇಷ ಮನುಕುಲಶಾಸ್ತ್ರೀಯ ವಿವರಣೆಯ ಬಗ್ಗೆ ಹೆಚ್ಚು ಗಮನಹರಿಸಲಾಗಿದೆ. ಇದು ಒಂದು ಜನಾಂಗದ ಮಾನವಶಾಸ್ತ್ರೀಯ ಅಧ್ಯಯನವಾಗಿರುವುದರಿಂದ, ಜನಪದ ಸಾಹಿತ್ಯದ ನೆರವು ಪಡೆದುಕೊಳ್ಳುವುದು ಅನಿವಾರ್ಯ ಹಾಗೆಯೇ ಇತರ ಸಮಾಜ ವಿಜ್ಞಾನಗಳಾದ ಸಮಾಜೋ ಐತಿಹಾಸಿಕ ಮಾಹಿತಿ ಕೂಡ

ಅಗತ್ಯವಾದುದರಿಂದ ಸಂಶೋಧನಾ ವಿಧಾನ ಅಂತರಶಾಸ್ತ್ರೀಯ ವಿಧಾನವಾಗಿದೆ. ಈ ಹಿನ್ನಲೆಯಲ್ಲಿ ಸಂಶೋಧನಾ ವಿಧಾನ ತಾತ್ವಿಕ, ಅಂತರ್‌ಶಾಸ್ತ್ರೀಯ ಹಾಗೂ ವೈಜ್ಞಾನಿಕ ವಿಧಾನಗಳಾದ ಸಂದರ್ಶನ, ಸಮೀಕ್ಷೆ, ಪ್ರಶ್ನಾವಳಿ ರಚನೆ, ವಿವರಣಾತ್ಮಕ ಹಾಗೂ ವಿಶ್ಲೇಷಣಾತ್ಮಕ ವಿಧಾನಗಳ ಸಂಮಿಶ್ರಣವಾಗಿದೆ.

**ಅಧ್ಯಯನದ ಮಿತಿ**

ಕರ್ನಾಟಕದಲ್ಲಿ ಹಲವಾರು ಬುಡಕಟ್ಟು ಜನಾಂಗದವರಿದು, ಬಂಜಾರರು (ಲಂಬಾಣಿಗಳ) ಎದ್ದು ಕಾಣುತ್ತಾರೆ. ರಂಗುರಂಗಿನ ಬಟ್ಟೆಯನ್ನು, ಮೈತುಂಬ ಆಭರಣಗಳನ್ನು ಧರಿಸಿರುವ ಈ ಬಂಜಾರ ಮಹಿಳೆಯರನ್ನು ನೋಡಿದರೆ ಸಾಕು ಅವರ ಸಂಸ್ಕೃತಿ ಎದ್ದು ಕಾಣುತ್ತದೆ. ಬಂಜಾರರು ಮೂಲತಃ ಉತ್ತರ ಭಾರತದ ರಾಜಪುರಾಣ (ರಾಜಸ್ಥಾನ) ಮೂಲದವರಾಗಿದ್ದು ಈ ಸಮುದಾಯ ಜನರು ಯಾವುದೇ ಕಾರಣದಿಂದ ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಹರಡಿಕೊಂಡಿದ್ದಾರೆ. ಭಾರತದ ತುಂಬೆಲ್ಲಾ ವಾಸವಾಗಿದ್ದಾರೆ. ೨೦೦ ವರ್ಷಗಳ ಹಿಂದೆ ವ್ಯಾಪಾರದ ನಿಮಿತ್ತ ಭಾರತಕ್ಕೆ ಬಂದು ಪರಿಸರಿಸಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹರಡಿಕೊಂಡಿರುವ ಬಂಜಾರರು (ಲಂಬಾಣಿ) ಭಾರತದಲ್ಲಿ ೫ ಕೋಟಿಕ್ಕಿಂತಲೂ ಹೆಚ್ಚು ಇದ್ದಾರೆ. ದೇಶದ ಬೇರೆ ಬೇರೆ ಪ್ರಾದೇಶಿಕ/ರಾಜ್ಯಗಳಲ್ಲಿ ಬಂಜಾರರನ್ನು ಒಂದು ಬಾರಿ ಲಂಬಾಣಿ.ಲಂಬಾಡಿ, ಸುಕಾಲಿ, ಲಬಾನ, ಬಾಜಿಗರ, ಸಿಂಕಿ, ಗುವಾಲಿಯಾ, ಲಮಾಣಿ, ಸುರಾಲಿ, ಸುಗಾಲಿ, ಬಂಜಾರಾ, ಮದುರಾ, ಲೋಬಾನ, ಸಿಂಗಾಡಿಯಾ ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತದೆ. ಸಾಮಾಜಿಕವಾಗಿ, ಆರ್ಥಿಕ ಹಾಗೂ ಸಾಂಸ್ಕೃತಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಪ್ರಾದೇಶಿಕವಾಗಿ ಬೇರೆ ಬೇರೆ ಉದ್ಯೋಗ/ಕಸುಬುಗಳಲ್ಲಿ ತೊಡಗಿದ್ದರಿಂದಾಗಿ ಅವರನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗಿದೆ.

ಬಂಜಾರರು ದೇಶೀಯ ಬುಡಕಟ್ಟಿನಲ್ಲಿ ವಿಶೇಷ ಜಾತಿರವರೆಂದು ಗುರುತಿಸಿಕೊಂಡು ತಮಗೆ ತಾವೇ ಗೋರ, ಗೋರಾ ಬಂಜಾರರೆಂದು ಗುರುತಿಸಿಕೊಳ್ಳುತ್ತಾರೆ. ಅವರು ತಮ್ಮದೇ(ದೇವರ) ಸಂಪ್ರದಾಯ ದೇವತೆಗಳಾದ ತುಲಭ ಭವಾನಿ, ಬನಶಂಕರಿ ದೇವತೆಯ ಆಚರಣೆಗಳಿರುತ್ತವೆ. ಅನುವಂಶೀಯ ವೃತ್ತಿಯಾಗಿ ಉಪ್ಪಿನ ಲವಣ ವ್ಯಾಪಾರ ಮಾಡುವುದರಿಂದ ಬಂಜಾರ ಎಂದು ಅದು ಬಂಜಾರರು ಗುರುತಿಸಿಕೊಳ್ಳುತ್ತಾರೆ. ಬೇಟೆಗಾರಿಕೆ, ಗೇಣಿದಾರರಾಗಿ, ಕೆಲವು ಮಂದಿ ಬಂಜಾರರು ಭೂಮಾಲೀಕರಾಗಿ, ಬಹುಪಾಲು ಲಂಬಾಣಿ(ಬಂಜಾರರು) ಭೂರಹಿತ ಕಾರ್ಮಿಕರಾಗಿದ್ದಾರೆ. ಕೆಲವರು ಕೇಂದ್ರ ಮತ್ತು ರಾಜ್ಯ ಹಾಗೂ ಖಾಸಗಿ ಕ್ಷೇತ್ರಗಳಲ್ಲಿ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಬಂಜಾರರು(ಲಂಬಾಣಿ) ಗ್ರಾಮಗಳಿಂದ ದೂರದಲ್ಲಿ ವಾಸವಾಗಿದ್ದಾರೆ. ತಮ್ಮ ವಾಸಸ್ಥಾನ ಗಳಿಗೆ ತಾಂಡೋ(ತಾಂಡಾ) ಎಂದು ಕರೆಯುತ್ತಾರೆ. ತಾಂಡಾಗಳನ್ನು ಕಟ್ಟಿಕೊಂಡು ವಾಸಿಸುವ ಬಂಜಾರರು ಗ್ರಾಮಗಳಿಂದ ಪ್ರತ್ಯೇಕ ವಾಸ ಮಾಡುವುದರಿಂದ, ಪ್ರತ್ಯೇಕ ಸಂಸ್ಕೃತಿಯನ್ನು ಹೊಂದಿದ್ದಾರೆ. ಪ್ರಾದೇಶಿಕವಾಗಿ ಸಾಂಸ್ಕೃತಿಕ ಪ್ರಭಾವಕ್ಕೆ ಒಳಗಾಗಿದ್ದರೂ, ತನ್ನದೇ ಆದ ವಿಶಿಷ್ಟತೆ, ವಿಭಿನ್ನತೆಯ ಪರಂಪರೆಯನ್ನು ಕಾಪಾಡಿ ಮತ್ತು ಉಳಿಸಿಕೊಂಡು ಬಂದವರಾಗಿದ್ದಾರೆ.

ಕರ್ನಾಟಕ ರಾಜ್ಯದಲ್ಲೂ ಬಂಜಾರರು ಗಣನೀಯ ಸಂಖ್ಯೆಯಲ್ಲಿ ಹರಡಿಕೊಂಡಿದ್ದಾರೆ. ಕರ್ನಾಟಕದ ಹಿನ್ನಲೆಯಲ್ಲಿ ಸೂಕ್ಷ್ಮ ಇತಿಹಾಸವನ್ನು ತಿಳಿಯುವುದು ಮುಖ್ಯವಾಗಿದೆ. ಕರ್ನಾಟಿಕ್ ಎಂಬ ಶಬ್ದದ ಉಲ್ಲೇಖ ಕ್ರಿ.ಪೂ. ೩ ಮತ್ತು ೪ನೇ ಶತಮಾನದಲ್ಲಿನ ಪಾಣಿನಿ ಸಂಸ್ಕೃತ ವ್ಯಾಕರಣ ಗ್ರಂಥದಲ್ಲಿ ಕಂಡು ಬರುತ್ತದೆ. ಕರ್ನಾಟಕ ಎಂಬ ಪದವು ಮಹಾಭಾರತದ ಕುಂಭಕೋಣಂ ಆವೃತ್ತಿಯಲ್ಲಿದೆ. ಇದರಲ್ಲಿ ಕುಂತಳ/ಉನ್ನತ್ಮಕ ಎಂಬ ಪದವು ಕರ್ನಾಟಕ ಪದಕ್ಕೆ ಪರ್ಯಾಯವಾಗಿ ಬಳಕೆಯಾಗಿದ್ದು, ಕರ್ನಾಟಕಕ್ಕೆ ಕ್ರಿ.ಪೂ ವರ್ಷದ ಇತಿಹಾಸವಿದೆ. ಉದ್ಯಾತ್ಮಕ ಎಂದರೆ– ಎತ್ತರದ ನೆಲ ಎಂದು ಅರ್ಥ.

ಮಾರ್ಕಂಡೇಯ ಪುರಾಣ, ಭಾಗವತ್, ವರಾಹಮಿಹಿರನ ಬೃಹತ್ ಸಂಹಿತೆಯ ಉಲ್ಲೇಖದಂತೆ ಕರ್ನಾಟಕವು ಗಣ್ಯವಾಗಿ ಕಂಡುಬಂದಿದೆ. ಕನ್ನಡ ಎಂಬುದು ಈ ನಾಡಿನ ಹೆಸರಾಗಿದ್ದು, ಅದೇ ಸಂಸ್ಥಾನದಲ್ಲಿ ಕರ್ನಾಟಕ ಆಯಿತ್ತು. ಕರಿ+ನಾಡು – ಕಪ್ಪು ಮಣ್ಣಿನ ನೆಲ, ಜಲ ಎಂಬ ಕಾರಣದಿಂದಲೆ ಕರುನಾಡು ಎಂಬ ಹೆಸರಿನಿಂದ ಕರ್ನಾಟಕವಾಯಿತ್ತೆಂದು ಭಾಷ್ಯಾಂಕಾರರ ಅಭಿಪ್ರಾಯವಾಗಿತ್ತು. ಕರುನಾಡು ಎಂದರೆ – ದೊಡ್ಡ ಜಲ ಅಥವಾ ಉತ್ತರ ಪ್ರದೇಶ ಎಂಬುದರಿಂದಲೇ ಕರ್ನಾಟಕ ಎಂಬ ಹೆಸರು ಬಂದಿದೆ. ಕರ್ನಾಟಕದ ಬಹುಭಾಗವು ದಖ್ಖನ್‌ನ ಪ್ರಸ್ಥಭೂಮಿಯಲ್ಲಿನ ಉತ್ತರದ ನೆಲವೇ ಭೂಮಿಯೇ ಆಗಿರುತ್ತದೆ.

ಈಗಿನ ಕರ್ನಾಟಕವು ರಾಜ್ಯವು ೧೨° ಡಿಗ್ರಿ ಮತ್ತು ೧೮° ಡಿಗ್ರಿ ಉತ್ತರ ಅಕ್ಷಾಂಶ ಮತ್ತು ೭೪° ಡಿಗ್ರಿ ಹಾಗೂ ೭೮° ಡಿಗ್ರಿ ರೇಖಾಂಶ ನಡುವೆ ಇದೆ. ರಾಜ್ಯದ ಬಹುಭಾಗ ದಖ್ಖನ್ ಪ್ರಸ್ಥಭೂಮಿ ಮೇಲೆ ಇದ್ದರು ಸಹ ಪಶ್ಚಿಮದಲ್ಲಿ ಕರಾವಳಿ ಘಟ್ಟಪ್ರದೇಶಗಳು ಇವೆ. ಈ ಪಟ್ಟಿಯಲ್ಲಿ ಎತ್ತರವಾದ ಸಹ್ಯಾದ್ರಿ ಬೆಟ್ಟಗಳಿಂದ ಪ್ರತ್ಯೇಕಿಸಲ್ಪಟ್ಟಿದೆ. ಈ ಪರ್ವತಾವಳಿಗಳು ಸಮುದ್ರ ಮಟ್ಟವಾದ ೬೦೦೦ ಅಡಿಗೂ ಎತ್ತರವಾದ ಕೆಲವು ಶಿಖರಗಳಿವೆ.

ಕರ್ನಾಟಕ ರಾಜ್ಯವು ೩೦ ಜಿಲ್ಲೆಗಳಿಂದ ಕೂಡಿದ್ದು, ಇದನ್ನೂ ಉತ್ತರದ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಜಿಲ್ಲೆಗಳೆಂದು ಕರೆಯಲಾಗಿದ್ದು, ಎರಡು ಪ್ರಾದೇಶಿಕ ಘಟಕಗಳಾಗಿ

ವಿಂಗಡಿಸಲಾಗಿದೆ. ಬಂಜಾರ ಜನಾಂಗದ ಅಧ್ಯಾಯನಕ್ಕಾಗಿ, ಅದರಲ್ಲೂ ಮಾನವಶಾಸ್ತ್ರೀಯ ಅಧ್ಯಾಯನಕ್ಕಾಗಿ ಕರ್ನಾಟಕದ ೩೦ ಜಿಲ್ಲೆಯಲ್ಲಿ, ದಕ್ಷಿಣ ಕರ್ನಾಟಕ ಜಿಲ್ಲೆಗಳಾದ ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ, ಚಿಕ್ಕಮಗಳೂರು, ತುಮಕೂರು, ಕೋಲಾರ, ಚಿಕ್ಕಬಳ್ಳಾಪುರ, ಮಂಗಳೂರು, ಉಡುಪಿ, ಹಾಸನ, ಬೆಂಗಳೂರು, ಬೆಂಗಳೂರು ಗ್ರಾಮಾಂತರ, ರಾಮನಗರ, ಮಂಡ್ಯ, ಮೈಸೂರು, ಚಾಮರಾಜನಗರ ಮತ್ತು ಮಡಿಕೇರಿ ಸೇರಿದಂತೆ ೧೭ ಜಿಲ್ಲೆಗಳು ದಕ್ಷಿಣ ಕರ್ನಾಟಕವನ್ನು ಪ್ರತಿನಿಧಿಸುತ್ತವೆ.

ದಕ್ಷಿಣ ಕರ್ನಾಟಕವು ದಕ್ಷಿಣದಲ್ಲಿ ಕೇರಳ, ತಮಿಳುನಾಡು ರಾಜ್ಯಗಳಿಂದ ಆವೃತ್ತವಾಗಿದ್ದು, ಪೂರ್ವದಲ್ಲಿ ಆಂಧ್ರಪ್ರದೇಶ, ಪಶ್ಚಿಮದಲ್ಲಿ ಅರಬ್ಬೀಸಮುದ್ರದ ಪಶ್ಚಿಮಘಟ್ಟ ಕರಾವಳಿ ಪ್ರದೇಶದಿಂದ ಆವೃತ್ತಗೊಂಡಿವೆ. ವಿಭಿನ್ನ ಭೌಗೋಳಿಕ ವಾತಾವರಣವನ್ನು ಹೊಂದಿದೆ. ದಕ್ಷಿಣ ಕರ್ನಾಟಕವು ೧೨° ಡಿಗ್ರಿ ಅಕ್ಷಾಂಶದಿಂದ ೧೪½° ಡಿಗ್ರಿ ಅಕ್ಷಾಂಶದವರೆಗೆ ಹಾಗೂ ೭೩° ರೇಖಾಂಶದಿಂದ ೭೮½° ಡಿಗ್ರಿ ರೇಖಾಂಶದವರೆಗೆ ಹರಡಿಕೊಂಡಿದೆ. ಅದರಿಂದ ಹಿತಕರವಾದ ವಾತಾವರಣವನ್ನೂ ಹೊಂದಿದೆ.

ಬಂಜಾರರು ಕರ್ನಾಟಕಕ್ಕೆ ವಲಸೆ ಬಂದವರಾಗಿದ್ದು, ೧೯೭೫ರ ಹಾವನೂರು ವರದಿ ಯಲ್ಲಿನ ಸಂಖ್ಯೆ-೨ ಪ್ರಕಾರ ೩.೫೩.೮೮೨ ಬಂಜಾರ(ಲಂಬಾಣಿ) ಇದ್ದರು. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ವಾಸವಾಗಿದ್ದಾರೆ. ಚಿತ್ರದುರ್ಗ, ಬಿಜಾಪುರ, ಬಳ್ಳಾರಿ, ಶಿವಮೊಗ್ಗ ಜಿಲ್ಲೆ, ಅತಿಹೆಚ್ಚು ಜನ ಬಂಜಾರರು ವಾಸವಾಗಿದ್ದಾರೆ. ಮೈಸೂರು, ಮಂಡ್ಯ, ಕೊಡಗು, ದಕ್ಷಿಣ ಕನ್ನಡ ಜಿಲ್ಲೆ ಅತಿ ಕಡಿಮೆ ಜನರು ನೆಲೆಸಿದ್ದಾರೆ. ದಕ್ಷಿಣ ಕರ್ನಾಟಕದ ಜಿಲ್ಲೆಯಾದ ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಚಿಕ್ಕಮಗಳೂರು ಜಿಲ್ಲೆ ಅತಿಹೆಚ್ಚು ಜನರು ನೆಲೆಸಿದ್ದಾರೆ. ಇವರ ವಾಸ ವಿಶೇಷವಾಗಿ ನಗರ ಗ್ರಾಮಗಳಿಂದ ದೂರವಾಗಿ ತಾಂಡಾಗಳಲ್ಲಿ ವಾಸಿಸುತ್ತಾರೆ.

ಉತ್ತರದ ರಾಜಸ್ಥಾನದಿಂದ ದಕ್ಷಿಣಕ್ಕೆ ಕಾರಣಾಂತರದಿಂದ ಬಂಜಾರರು ವಲಸೆ ಬಂದು ೧೯ ಶತಮಾನದವರೆಗೆ ಅಲೆಮಾರಿಗಳಾಗಿಯೇ ಜೀವನ ಸಾಗಿಸುತ್ತಾ ಬಂದಿದ್ದಾರೆಂದು ಐತಿಹಾಸಿಕ ದಾಖಲೆಯಿಂದ ತಿಳಿದುಬಂದಿದೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ವಾಸವಾಗಿದ್ದಾರೆ. ನಗರದಲ್ಲಿ ವಾಸಮಾಡಿ ವ್ಯಾಪಾರ ಇಲ್ಲವೆ ವ್ಯವಹಾರ ನಡೆಸುವವರನ್ನು ಉರಬಂಜಾರ, ಮಾರವಾಡಿ ಎಂಬುದಾಗಿಯೂ, ಗ್ರಾಮಗಳು ಮತ್ತು ತಾಂಡಾಗಳಲ್ಲಿ ಕೃಷಿ ಕಾರ್ಮಿಕರಾಗಿ ಸೇವೆ ಸಲ್ಲಿಸುವವರನ್ನು ಕಾಡು ಬಂಜಾರ ಎಂದು ಸಾಮಾಜಿಕವಾಗಿ ಗುರುತಿಸುತ್ತಾರೆ. ಹಾಗೂ ಕರ್ನಾಟಕದ ಮಣಿಪುರಿಗಳೆಂದು ರಾಜಸ್ಥಾನದ ಮಾರವಾಡಿಗಳೆಂದು ಕರೆಯಿಸಿ ಕೊಂಡಿದ್ದಾರೆ.

ಬಂಜಾರ, ಬಣಜಾರ ಎಂಬುದು ಅವರು ಮೂಲತಃ ವ್ಯಾಪಾರಿಗಳು ವರ್ತಕರಾಗಿದ್ದರೆಂಬುದನ್ನೂ ಸೂಚಿಸುತ್ತದೆ. ಆಹಾರಧಾನ್ಯ ಅಥವಾ ದವಸಧಾನ್ಯಗಳ ವ್ಯವಹಾರವನ್ನು ಕೈಗೊಂಡಿದ್ದರಿಂದ ಬಣಜಾರ ಅಥವಾ ವಣಜಾರ ಎಂಬ ಹೆಸರುಗಳಿಂದ ಕರೆಯಲಾಗಿದೆ. ಬಂಜಾರರು ಆಡುವ ಭಾಷೆಯನ್ನೂ(ಲಂಬಾಣಿ/ಬಂಜಾರಿ/ಸುಗಾಲಿ) ಗೋರಟೋಲಿ ಎಂಬ ಪಂಜಾಬಿ/ಗುಜರಾತಿ ಭಾಷೆಯಿಂದ ಕೂಡಿದೆ. ಇದು ಇಂಡೋ ಆರ್ಯನ್ ಭಾಷಾ ವರ್ಗಕ್ಕೆ ಸೇರಿದೆ. ಇವರ ಭಾಷೆಯೂ ದಕ್ಷಿಣ ಭಾರತದ ಭಾಷಾ ವರ್ಗವಾದ ದ್ರಾವಿಡ ಭಾಷೆ ಪ್ರಭಾವಕ್ಕೆ ಒಳಗಾಗಿದೆ. ಕೆಲವು ಭಾಷೆಯ ಜೊತೆಗೆ ಸಮಿಶ್ರಣಗೊಂಡಿದೆ. ದಿನನಿತ್ಯ ಬಳಸುವ ಪದಗಳು ಇಂಡೋ ಆರ್ಯನ ಪದಗಳಾಗಿವೆ. ಯಾವುದೇ ಸಮೂಹ ಅಥವಾ ಸಮಾಜದ ಸಂಸ್ಕೃತಿ ಅಧ್ಯಯನವೆಂದರೆ, ಭಾಷೆಯ ಅಧ್ಯಾಯದಿಂದ ಕಾರಣ ಲಂಬಾಣಿ/ಬಂಜಾರ ಸಂಸ್ಕೃತಿಗೆ ಸಂಬಂಧಿಸಿದ ಅನೇಕ ಸಮಸ್ಯೆಗಳನ್ನು, ವಿಚಾರಗಳನ್ನು ಸಾಂಸ್ಕೃತಿಕ ನೆಲೆಗಟ್ಟಿನಲ್ಲಿ ಅಧ್ಯಯನ ಮಾಡಬಹುದಾಗಿದೆ.

ಬಂಜಾರ ತಾಂಡಾ ವಾಸಸ್ಥಾನಗಳು, ತಾಂಡಾ ಗ್ರಾಮಕ್ಕೆ ಅಂಟಿಕೊಂಡಿರುತ್ತವೆ. ಆ ತಾಂಡ್ಯಗಳನ್ನು ಗ್ರಾಮದ ಹೆಸರಿಂದ ಗುರುತಿಸಲಾಗುತ್ತದೆ. ಇವರು ವಾಸಿಸುವ ಪ್ರದೇಶಗಳನ್ನು ಲಂಬಾಡಿ ತಾಂಡ/ಬಂಜಾರರ ತಾಂಡ ಎಂದೂ ತಾಂಡವಾಸಿಗಳಾದ ಬಂಜಾರರು ತಮ್ಮದೇ ಆದ ಸಾಮಾಜಿಕ ನೀತಿ ಸಂಪ್ರದಾಯ ಅಥವಾ ಆಚರಣೆಗಳನ್ನು ಹೊಂದಿದ್ದಾರೆ. ಬಂಜಾರ ಬುಡಕಟ್ಟಿನಲ್ಲಿ ಮೂರು ವಿಭಾಗಗಳಿದ್ದು ಮಾಥುರ, ಲಂಬೋಸ್, ಬುರ್ರೋಸ್ ಎಂಬುದಾಗಿದೆ. ಇವರು ಭಾರತದ ತುಂಬಾ ಹರಡಿದ್ದು ತಮ್ಮನ್ನು ಗೋರಮಾಡಿ, ಗೋರವಟ್, ಗೋರ ಮತ್ತು ಗೋರಬಂಜಾರಾಗಳೆಂದು ಕರೆದುಕೊಳ್ಳುತ್ತಾರೆ. ಬೇರೆ ಬೇರೆ ರಾಜ್ಯ/ಪ್ರಾಂತ್ಯಗಳಲ್ಲಿ ಬೇರೆ ಬೇರೆ ಹೆಸರಿನಿಂದ ಕರೆಯಲಾಗುತ್ತಿದ್ದು ಅವು ಬಂಜಾರಾ, ಬಂಜಾರಿ, ಲಮಾನ, ಲಂಬಾಡಾ, ಲಂಬಾಡಿ, ಲವಾನ, ಲಬಾನ. ಲಬಾನಿ, ಇತ್ಯಾದಿ. ಬಂಜಾರ ಸಮುದಾಯಕ್ಕೆ ಸಮಾನರೂಪದ ಸಮುದಾಯಗಳಾಗಿ ಕಂಜರಭಾಟ, ಹಬುರ, ನಾಥ, ಸೃಷ್ಟಿ, ಬೇರಿಯಾ ಮೊಘಲ್ ರಜಪೂತ ವಂಶದ ಮೂಲದವರೆಂದು ಗುರುತಿಸಿ ಕೊಂಡಿದ್ದಾರೆ.

ಬಂಜಾರರು ಕುಟುಂಬದ ಹಿರಿಯರ ಬಗ್ಗೆ ಹೆಚ್ಚು ಕಾಳಜಿ ಹೊಂದಿದ್ದು ಹಬ್ಬ-ಹರಿದಿನಗಳಲ್ಲಿ ಇವರಿಗೆ ಆದ್ಯತೆ ನೀಡಿ ಗೌರವಿಸುತ್ತಾರೆ. ದೀಪಾವಳಿಯಲ್ಲಿ ಆಚರಿಸುವ ಹಿರಿಯರ ಪೂಜೆ ಅಥವಾ ಪೂರ್ವಜರ ಆರಾಧನೆ ಬಹುಮುಖವಾದ ಧಾರ್ಮಿಕ ವಿಧಿಯಾಗದೆ ಇದನ್ನು ಹಿರಿಯರ ಪೂಜೆ ಎಂದು ಕರೆಯುತ್ತಾರೆ. ಹಿರಿಯರಿಗೆ ಮಾಂಸ

ಮತ್ತು ಸಾರಾಯಿಯನ್ನು ನೈವೇಧ್ಯವಾಗಿ ಅರ್ಪಿಸುತ್ತಾರೆ. ಬಂಜಾರರಲ್ಲಿ ಹಲವು ಬಗೆಯ ವೈವಾಹಿಕ ಪದ್ಧತಿಗಳು ರೂಢಿಯಲ್ಲಿವೆ. ವಿಧವಾ ವಿವಾಹ, ವಿಚ್ಛೇದಿತ ವಿವಾಹ, ಮೈದುನರ ವಿವಾಹ ಹಾಗೂ ಬಹುಪತಿತ್ವ ಆಚರಣೆಯಲ್ಲಿದ್ದು ಹೆಣ್ಣಿನ ತಾಯಿ–ತಂದೆರವರಿಗೆ 'ತೆರಾ' ಕೊಟ್ಟು ಮದುವೆ ಮಾಡಿಕೊಳ್ಳುವ ವಾಡಿಕೆಯಿದೆ. ವಿಧವೆಯರಿಗೆ ಪುನರ್‌ವಿವಾಹ ಆಗುವ ಸಾಮಾನ್ಯವಾಡಿಕೆಯಿದೆ.

ಬಂಜಾರದಲ್ಲಿ ಮಗುವಿನ ಜನನ ಸಂದರ್ಭವು ಕೇವಲ ತಂದೆ ತಾಯಿಗಳಿಗೆ ಅಷ್ಟೇ ಸಂತೋಷವಾಗದೆ, ತಾಂಡಾದ ಜನರಿಗೆಲ್ಲಾ ಸಂತೋಷ ಸಂಗತಿಯಾಗಿದೆ. ಗಂಡು ಮಗುವಿನ ಹೆರಿಗೆ ಆದಾಗ ನಗಾರಿ ಬಾರಿಸಿ ತಾಂಡಾದ ಜನರಿಗೆ ಸುದ್ದಿ ಮುಟ್ಟಿಸುತ್ತಾರೆ. ಹೆರಿಗೆಯ ಸಮಯದಲ್ಲಿ ಹೆರಿಗೆ ನೋವು ಮರೆಸಲು ವೃದ್ಧ ಮಹಿಳೆಯರು ಹಾಡುಗಳನ್ನು ಹಾಡುತ್ತಾರೆ. ಹೆರಿಗೆಗೆ ಪ್ರತ್ಯೇಕ ಗುಡಿಸಲನ್ನು ನಿರ್ಮಿಸುತ್ತಾರೆ.

ಬಂಜಾರ ಮಹಿಳೆಯವರು ರಂಗುರಂಗಿನ ಬಟ್ಟೆಯನ್ನು, ಮೈ ತುಂಬಾ ಆಭರಣಗಳನ್ನು ಧರಿಸುವವರಾಗಿದ್ದು, ಇವರ ಪೋಷಾಕುಗಳು ಕಲಾತ್ಮಕವಾಗಿರುತ್ತವೆ. ಕುಪ್ಪಸ, ಲಂಗ ಮತ್ತು ಮೇಲು ಹೊದಿಕೆ ವಿಶೇಷವಾಗಿದೆ. ಮಹಿಳೆಯರು ಹುಟ್ಟು ಕವಿಯತ್ರಿಯಾಗಿದ್ದು, ನಿಂತಲೇ ಅಥವಾ ಕುಳಿತಲ್ಲೇ ಸ್ವಂತ ಹಾಡುಗಳನ್ನು ಹಾಡಬಲ್ಲರು ಮತ್ತು ರಚಿಸಬಲ್ಲರು. ಬಂಜಾರರ ಹಾಡು ಕುಣಿತಗಳಿಗೆ ಅವರದೇ ಆದ ವೈಶಿಷ್ಟ್ಯಗಳಿವೆ. ರಂಗುರಂಗಿನ ಅವರ ಬಟ್ಟೆಗಳು ಆಕರ್ಷಕ, ಅವರ ಹಾಡು ಮತ್ತು ಕುಣಿತ, ಕೇಳುಗರ ಹಾಗೂ ನೋಡುಗರ ಮನಸ್ಸು ಅಥವಾ ಭಾವನೆ ಸೂರೆಗೋಳ್ಳುತ್ತವೆ. ಬಂಜಾರರ ಕಲೆ ವಿಶಿಷ್ಟವಾಗಿದ್ದು ರಂಗೋಲಿ, ಕಸೂತಿ, ಕೋಲಾಟ, ಬಯಲಾಟಗಳು ಪ್ರಮುಖ ಕಲಾ ಪ್ರಕಾರಗಳಾಗಿವೆ. ಅವುಗಳಿಗೆ ತಮ್ಮದೇ ಆದ ವೈಶಿಷ್ಟ್ಯ ಗಳಿರುವುದನ್ನು ಮುಂದಿನ ಅಧ್ಯಾಯಗಳಲ್ಲಿ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಾದ್ಯಂತಹ ಹರಡಿಕೊಂಡಿರುವ ಬಂಜಾರ ಸಮುದಾಯವನ್ನು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯವೂ ಹಾಗೂ ಸಂಶೋಧಕರ ಕಾಲ, ಕಾರ್ಯವ್ಯಾಪ್ತಿ ಪರಿಗಣಿಸಿ, ದಕ್ಷಿಣ ಕರ್ನಾಟಕವನ್ನು ಕೇಂದ್ರೀಕರಿಸಿಕೊಂಡು ಇಲ್ಲಿ ಕಂಡುಬರುವ ೧೭ ಜಿಲ್ಲೆ ಗಳಲ್ಲಿ ಚಿತ್ರದುರ್ಗ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ನೆಲೆಸಿರುವ ಬಂಜಾರ ಸಮುದಾಯಗಳನ್ನು ಅನುಭಾವಾತ್ಮಕ ಕಾರ್ಯವಿಧಾನದ ಮೂಲಕ ಅಧ್ಯಯನ ಮಾಡುವ ಉದ್ದೇಶ ಹೊಂದಲಾಗಿದೆ.

ಈ ಅಧ್ಯಯನದಲ್ಲಿ ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯದ ಪರಿಸರ, ಸಂಸ್ಕೃತಿ, ಸಾಂಸ್ಕೃತಿಕ ಸಾಮಾಜಿಕ ಸಂಮಿಲನ, ಬಂಧುತ್ವ, ವಿವಾಹ, ಕುಟುಂಬ, ವೇಷಭೂಷಣ, ವೃತ್ತಿ ಬದಲಾವಣೆ ಮತ್ತು ಅಭಿವೃದ್ಧಿ, ಧಾರ್ಮಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಮಾನವಶಾಸ್ತ್ರೀಯ ದೃಷ್ಟಿಕೋನ ಹಾಗೂ ಕುಲಶಾಸ್ತ್ರೀಯ ವಿಧಾನವನ್ನು ಆಧರಿಸಿ ಅಧ್ಯಯನ ಮಾಡಲಾಗುವುದು.

ಬಂಜಾರರ ಬುಡಕಟ್ಟಿನ ವಿವಿಧ ಮುಖಗಳಿಗೆ ಸಂಬಂಧಪಟ್ಟಂತೆ ನಡೆದಿರುವ ಸಂಶೋಧನಾ ಅಧ್ಯಯನಗಳು ವಿರಳವಾಗಿದ್ದು, ಮಾನವಶಾಸ್ತ್ರೀಯ ವಿಧಾನ ಅಳವಡಿಸಿ ಅಧ್ಯಯನ ನಡೆಯದೆ ಇರುವುದರಿಂದ ಇಂತಹ ಪ್ರಯತ್ನವನನ್ನು ಆಧರಿಸಿ ಮಾನವಶಾಸ್ತ್ರೀಯ ಅಥವಾ ಜನಾಂಗಶಾಸ್ತ್ರೀಯ ಅಧ್ಯಯನವನ್ನು ಮಾಡುವುದು ಒಂದು ಪ್ರಮುಖ ಅಂಶವಾಗಿದೆ. ಸಾಂಸ್ಕೃತಿಕ ಪರಿವರ್ತನೆಯು ಸಾಗಿಬಂದ ಹಾದಿಯನ್ನು ತಿಳಿಯಲು ಈ ಅಧ್ಯಯನದ ಅವಶ್ಯಕತೆ ಇದೆ.

**ಓರಿಸ್ಸಾ ರಾಜ್ಯದಲ್ಲಿ ಬಂಜಾರ ಸಮುದಾಯ**

ಓರಿಸ್ಸಾದಲ್ಲಿ 'ಲಬಾನ್' ಎಂದು ಅಧಿಸೂಚಿಸಲಾಗಿದೆ. ೧೯೮೧ರ ಜನಗಣತಿಯ ಪ್ರಕಾರ ಅವರ ಒಟ್ಟು ಜನಸಂಖ್ಯೆ ೧೯೯(೫೫೯ ಪುರುಷರು, ಮತ್ತು ೫೬೦ ಮಹಿಳೆಯರು) ಇವರು ಉತ್ತರ ಪ್ರದೇಶದಿಂದ ವಲಸೆ ಬಂದವರೆಂದು ನಂಬಲಾಗಿದೆ. ಒರಿಸ್ಸಾ ರಾಜ್ಯದಲ್ಲಿನ ಸಂಮ್‌ಬಲ್‌ಪುರ (Sambalpur) ಮತ್ತು ಕಲಹಂದಿ ಜಿಲ್ಲೆಗಳಲ್ಲಿ ಲಂಬಾಣಿ ಸಮುದಾಯದವರು ಹರಡಿಕೊಂಡಿದ್ದಾರೆ. ಬಂಜಾರ ಭಾಷೆಯನ್ನು ಮಾತನಾಡುವ ಇವರು ಇತರೆ ಸಮುದಾಯ ದವರೊಂದಿಗೆ ವ್ಯವಹರಿಸುವಾಗ ಓರಿಯಾ ಭಾಷೆಯನ್ನು ಬಳಸುತ್ತಾರೆ. ಒರಿಸ್ಸಾದಲ್ಲಿನ ಬಂಜಾರರು ಮುಖ್ಯವಾಗಿ ಸಸ್ಯಹಾರಿಗಳಾಗಿರುತ್ತಾರೆ. ಆದಾಗ್ಯೂ, ವಿಶೇಷ ಸಂದರ್ಭಗಳಲ್ಲಿ ಮಾಂಸಾಹಾರವನ್ನು ಉಪಯೋಗಿಸುತ್ತಾರೆ. ಗೋಧಿ ಮತ್ತು ಅಕ್ಕಿ ಆಹಾರದ ಮುಖ್ಯ ಧಾನ್ಯಗಳಾಗಿದ್ದು ಬಾಧ್ಯ ತೈಲ(Mahna seed oil (dulitel)ವನ್ನು ಅಡುಗೆ ತಯಾರಿಸಲು ಬಳಸುತ್ತಾರೆ. ಒರಿಸ್ಸಾದ ಲಬಾನ್ ಜನಾಂಗದಲ್ಲಿ ಅನೇಕ ಗೋತ್ರಗಳಿವೆ. ಅವುಗಳೆಂದರೆ; ಕೊರ್‌ರ(Korra) ಜಾಹರ್‌ಬಾಲೆ(Jharbale) ಓರ್‌ಟಿಯಾ(Ortia) ಬನೂದ್(Banod) ಕೆರುತ್(Kerut) ಮೌರ್(Mur) ಮೋಚ(Mocha) ಭಾಕಿಯ(Bhakia) ಲಸ್‌ರಿಯಾ(Lasria) ಬ್ಲೋಂಟ್(Blhot) ಜಾತ್‌ಹಾಲ್(Jothot), ಬಾರ್ ಮೌಂಟ್(Barmaot) ಬಾಡೌಟ್(Badaot) ಸನ್‌ಗಾರ್(Sangra), ಬೋರಾ(Bora) ಪರಹಿಯಾ(Parhia) ಮುರ್‌ಆಹೌಟ್(Murhaot) ಮತ್ತು ನೂರ್‌ಹೌಟ್(Murhaot), ಮುಂತಾದವು. ನಾಯಿಕ(Nayak) ಚೌಹಾನ್ ಮತ್ತು ಗೋತ್ರಗಳನ್ನು

ಅಡ್ಡಹೆಸರಾಗಿ(Surnames) ಬಳಸುತ್ತಾರೆ. ಮಹಿಳೆಯರು ಸಿಂಧೂರ ಗಾಜಿನ ಬಳೆಗಳು ಮತ್ತು ಸಾಂಪ್ರದಾಯಿಕವಾದ ಕುಪ್ಪಸ(Blouse) Kahariಗಳನ್ನು ತೊಡುತ್ತಿದ್ದರು. ಹಾಗೂ ಮಧುವೆಯ ಸಂಕೇತವಾಗಿ ಪುರುಷರು ಕಿವಿ ಉಂಗುರ(earrings)ವನ್ನು ತೊಡುತ್ತಾರೆ. ವಿಧವೆ, ವಿಧುರ ಮತ್ತು ವಿಚ್ಛೇದಿತರಿಗೆ ಪುನರ್ ವಿವಾಹಕ್ಕೆ ಅವಕಾಶವಿತ್ತು. ಒರಿಸ್ಸಾದ ಕೆಲವು ಬಂಜಾರರು ಭೂಮಿಯನ್ನು ಹೊಂದಿದವರಾಗಿದ್ದು ಇತರರು ಭೂರಹಿತರಾಗಿದ್ದರು. ಹೀಗೆ ಭೂರಹಿತರಾದ ಇವರು ತಮ್ಮ ಜೀವನಾಧಾರಕ್ಕಾಗಿ ಕೃಷಿಕಾರ್ಮಿಕರಾಗಿ ದುಡಿಯುತ್ತಿದ್ದರು. ಅಷ್ಟೇ ಅಲ್ಲದೆ ಬಹುತೇಕ ಬಂಜಾರರು ತಮ್ಮ ಸಾಂಪ್ರದಾಯಿಕ ವೃತ್ತಿಯಾದ ಉಪ್ಪಿನ ವ್ಯಾಪಾರವನ್ನು ಮಾಡುತ್ತಿದ್ದರು. ಮಹಿಳೆಯರು ಸೂಜಿ ಕೆಲಸದಲ್ಲಿ (Needlework) ಪರಿಣಿತರಾಗಿದ್ದು ಅದರಿಂದ ಬರುವ ಆದಾಯವನ್ನು ತಮ್ಮ ಕುಟುಂಬಗಳ ನಿರ್ವಹಣೆ ನೀಡುತ್ತಿದ್ದರು. ಹೀಗೆ ಸೂಚಿ ಕೆಲಸದಿಂದ ಬರುವ ಆದಾಯವು ತಮ್ಮ ಕುಟುಂಬಗಳಿಗೆ ಕೊಡುಗೆಯಾಗಿತ್ತು. ಒರಿಸ್ಸಾದಲ್ಲಿನ ಬಂಜಾರ ಸಾಂಪ್ರದಾಯಿಕ ಜಾನಪದ ಗೀತೆಗಳನ್ನು ಹಾಡುವುದು ಆಚರಣೆಯಲ್ಲಿತ್ತು. ವಿಶೇಷ ದಿನಗಳಲ್ಲಿ ಮತ್ತು ಹಬ್ಬಗಳಲ್ಲಿ ಪುರುಷ ಬಂಜಾರರು ನೃತ್ಯಗಳನ್ನು ಮಾಡುತ್ತಿದ್ದರು. ಹಿಂದು ಹಬ್ಬಗಳಾದ – ದುಸ್ಸೇರಹ್(Dusserah) ದಿವಾಳಿ(Diwali) ಹೋಳಿ(Holi) ಪೋಷ್ ಸಂಕ್ರಾಂತಿ(Posh Sankranthi) ಹರೇಲಿ ಅಮಾವಾಸ್ಯೆ (Hareli Amawashya) ನೌಖಾನಿ(Noakhi) ಮುಂತಾದವುಗಳನ್ನು ಆಚರಿಸುತ್ತಿದ್ದರು. ಗ್ರಾಮದಲ್ಲಿನ ನೀರಿನ ಸೌಕರ್ಯವನ್ನು ಸ್ಮಶಾನದ ಸ್ಥಳಗಳನ್ನು ಇತರೆ ಹಿಂದೂ ಜಾತಿಗಳೊಂದಿಗೆ ಹಂಚಿಕೊಳ್ಳುತ್ತಿದ್ದರು. ಇವರು ಔಪಚಾರಿಕ ಶಿಕ್ಷಣದ ಬಗ್ಗೆ ಸಕಾರಾತ್ಮಕ ಮನೋಭಾವವನ್ನು ಹೊಂದಿರಲಿಲ್ಲ. ಆಗಾಗಿ ೧೯೮೧ರ ಜನಗಣತಿಯ ಪ್ರಕಾರ ಇವರ ಸಾಕ್ಷರತೆ ಕೇವಲ ಶೇಕಡ ೧೧.೮೩ರಷ್ಟು ಮಾತ್ರ ಆಗಿತ್ತು. (ಪುರುಷರು ಶೇಕಡ ೨೦.೨೨ ಮತ್ತು ಶೇಕಡ ೩.೭೫ರಷ್ಟು ಮಹಿಳೆಯರು). ಇವರು ಸ್ಥಳೀಯವಾಗಿ ಲಭ್ಯವಿದ್ದ ಔಷಧಿಗಳನ್ನು ಅವಲಂಬಿಸಿದ್ದರು. ಬಂಜಾರರಲ್ಲಿ ಕೆಲವರು ಸಮಗ್ರ ಗ್ರಾಮೀಣ ಉದ್ಯೋಗ(IREP) ಯೋಜನೆಯ ಮೂಲಕ ಸ್ವ-ಉದ್ಯೋಗಿಗಳಾಗಿದ್ದರು. ಈ ಸಮುದಾಯವು ಸಮೂಹ ಮಾಧ್ಯಮಗಳು ಮತ್ತು ಸಂಪರ್ಕಗಳು, ಪೌಷ್ಟಿಕತೆಯ ಯೋಜನೆಗಳು, ಮತ್ತು ನ್ಯಾಯಬೆಲೆ ಅಂಗಡಿ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುತ್ತಿದ್ದರು.

**ಹರಿಯಾಣ ರಾಜ್ಯದ ಬಂಜಾರ ಸಮುದಾಯ**

ಕ್ರೂಕ್‌ರವರ ಪ್ರಕಾರ ಬಂಜಾರರು ಹರಿಯಾಣದ ಎಲ್ಲಾ ಜಿಲ್ಲೆಗಳನ್ನು ಹಂಚಿಕೆಯಾಗಿದ್ದರು. ಅಷ್ಟೇ ಅಲ್ಲದೆ ಪಕ್ಕದ ರಾಜ್ಯಗಳಾದ ಹಿಮಾಚಲ ಪ್ರದೇಶ, ಪಂಜಾಬ್ ಮತ್ತು ಕೇಂದ್ರಾಡಳಿತ ಪ್ರದೇಶಗಳಾದ ದೆಹಲಿ ಮತ್ತು ಚಂಡಿಗಡಗಳಲ್ಲಿಯೂ ಈ ಸಮುದಾಯದವರು ಕಂಡುಬರುತ್ತಾರೆ.

೧೯೮೧ರ ಜನಗಣತಿಯ ಪ್ರಕಾರ ಹರಿಯಾಣ ರಾಜ್ಯದಲ್ಲಿ ಬಂಜಾರರ ಒಟ್ಟು ಜನಸಂಖ್ಯೆ ೩೭೪೦. ಈ ಪೈಕಿ ೧೯೯೯ ಪುರುಷರು ಮತ್ತು ೧೭೪೧ ಮಹಿಳೆಯರು. ಸಾಮಾನ್ಯವಾಗಿ ಇವರು ಗ್ರಾಮೀಣ ಸಮಾಜದಲ್ಲಿ ಕಂಡುಬರುವ ಸಮುದಾಯವಾಗಿದೆ. ತರಕಾರಿ, ಕಾಳುಗಳು ಮತ್ತು ಗೋಧಿ ಚಪಾತಿ ಇವರ ಮುಖ್ಯ ಆಹಾರ ಪದಾರ್ಥಗಳು, ಮೊಟ್ಟೆಯನ್ನು ಸಸ್ಯಹಾರವೆಂದೇ ಪರಿಗಣಿಸಿದ್ದಾರೆ. ವಿಶೇಷ ದಿನಗಳಲ್ಲಿ ಮಾಂಸವನ್ನು ಸೇವಿಸುತ್ತಾರೆ.

ಆಹಾರ ಕ್ರಮವನ್ನು ಗಮನಿಸಿದಾಗ ಮಾಂಸ ಆಹಾರದಿಂದ ಸಸ್ಯಾಹಾರಕ್ಕೆ ಮಾರ್ಪಡಾಗುತ್ತಿರುವುದು ಕಂಡುಬರುತ್ತದೆ. ಸಾಸಿವೆ, ಅಗಸೆ ಬೀಜ(Linseed) ಮತ್ತು ಇತರೆ ತಂಪುಪಾನಿಯಗಳನ್ನು(Other soft drinks) ಕುಡಿಯುತ್ತಾರೆ. ಪುರುಷ ಬಂಜಾರರು ವಿಶೇಷ ದಿನಗಳಲ್ಲಿ ಮಧ್ಯಪಾನೀಯಗಳನ್ನು ಕುಡಿಯುವುದು ವಾಡಿಕೆಯಲ್ಲಿದೆ.

ಹರಿಯಾಣ ರಾಜ್ಯದಲ್ಲಿನ ಬಂಜಾರರನ್ನು ವಿಸ್ತಾರವಾಗಿ ನಾಲ್ಕು ಉಪ-ಗುಂಪುಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ ಬರತಿಯ(Bartiya) ಮುಚ್ಚಹಾಲ್(Muchhal) ಸುತಾರಿಯ (Sutariya) ಮತ್ತು ಬಡಿ(Badi) ಇವುಗಳನ್ನು ವಿವಾಹದ ನಿಯಂತ್ರಣವನ್ನು ಮಾಡುವ ಸಲುವಾಗಿ ಪುನಃ ಚಿಕ್ಕ ಹೊರಸಮೂಹಗಳಾಗಿ/ಗೋತ್ರಗಳಾಗಿ(exogamous Claus-gots) ವಿಭಾಗಿಸಬಹುದಾಗಿದೆ. ಇಲ್ಲಿಯ ಬಂಜಾರರು ಏಕಪತ್ನಿತ್ವ ಪದ್ಧತಿಯ ವಿವಾಹವನ್ನು ಅನುಸರಿಸುತ್ತಾರೆ. ಪ್ರೌಢವಸ್ಥರಾದವರು ವಿವಾಹವು ಹಿರಿಯರ ಸಂದಾನದ ಮುಖಾಂತರ ನಡೆಯುತ್ತದೆ. ವರದಕ್ಷಿಣೆಯು ನಗದು ಮತ್ತು ವಸ್ತುಗಳು-ಎರಡು ರೂಪದಲ್ಲಿಯು ಕೊಡಲಾಗುತ್ತದೆ. ಇವರಲ್ಲಿ ಮೈದುನ ವಿವಾಹ ಮತ್ತು ನಾದಿನಿ ವಿವಾಹ-(ಎರಡೂ ಕೂಡ) ಪದ್ಧತಿಗಳಿಗೆ ಅವಕಾಶವಿದ್ದು ಪಿತೃ ಸ್ಥಳೀಯವಾದ ಪದ್ಧತಿಯಾಗಿದೆ. ವಿವಾಹವನ್ನು ವರ ಮತ್ತು ವಧುವಿನ ಮನೆಗಳೆರಡರಲ್ಲಿಯೂ ನೆರವೇರಿಸಲಾಗುತ್ತದೆ. ಹರಿಯಾಣ ರಾಜ್ಯದ ಬಂಜಾರರಲ್ಲಿ ಗಮನಿಸಬಹುದಾದ ಮತ್ತೊಂದು ಆಸಕ್ತಿದಾಯಕ ವಿಷಯವೆಂದರೆ, ಅವಿಭಕ್ತ ಕುಟುಂಬ ಮತ್ತು ಕೇಂದ್ರ ಅಣು ಕುಟುಂಬ ವ್ಯವಸ್ಥೆಯಿದ್ದು, ಇತ್ತೀಚೆಗೆ ಅಣು ಕುಟುಂಬಗಳ ಸಂಖ್ಯೆ ಗಣನೀಯವಾಗಿ ಹೆಚ್ಚಾಗುತ್ತಿದೆ. ತಂದೆ ಮರಣ ಹೊಂದಿದ ನಂತರ ಹಿರಿಯ ಮಗ ಕುಟುಂಬದ ಮುಖ್ಯಸ್ಥನಾಗುತ್ತಾನೆ. ಮಹಿಳೆಯರು ಕಾರ್ಮಿಕರಾಗಿ ದುಡಿಯುತ್ತಾರೆ. ಅಷ್ಟೇ ಅಲ್ಲದೆ ಬಳೆ ಮತ್ತು ಅದೇ ರೀತಿಯ ಇತರೆ ವಸ್ತುಗಳನ್ನು ಮಾರಾಟ ಮಾಡುತ್ತಾಳೆ ಹಾಗೂ ದನಗಳಿಗೆ ಹುಲ್ಲು/ಮೇವು ಮತ್ತು (ಒಲೆ ಹುರಿಸಲು ಬೇಕಾದ) ಸೌದೆಯನ್ನು ಸಂಗ್ರಹಿಸಿ ತರುತ್ತಾರೆ.

ಅಷ್ಟೇ ಅಲ್ಲದೆ ಮಹಿಳೆಯರು ಸಾಮಾಜಿಕ, ಧಾರ್ಮಿಕ ಸಂಸ್ಕಾರಗಳಲ್ಲಿ ಭಾಗವಹಿಸುತ್ತಾರೆ. ಗರ್ಭಿಣಿಯರು ಏಳು ತಿಂಗಳಿರುವಾಗ ದೇವತೆಗಳನ್ನು ಆರಾಧಿಸುವ ಮೂಲಕ ಹೆರಿಗೆ ಪೂರ್ವದ(pre-delivery) ಧಾರ್ಮಿಕ ಸಂಸ್ಕಾರವನ್ನು ಆಚರಿಸುತ್ತಾರೆ. ಆ ಸಮಯದಲ್ಲಿ ಅನ್ನವನ್ನು ಮಕ್ಕಳಿಗೆ ಸಾಮೂಹಿಕವಾಗಿ ನೀಡುತ್ತಾರೆ. ಒಂದು–ಕಾಲು ತಿಂಗಳವರೆಗೂ (One and a quarter months) ಹುಟ್ಟಿದ ಸೂತಕವೆಂದು ಆಚರಿಸಲಾಗುತ್ತದೆ. ಹೆರಿಗೆಯ ನಂತರದ ಸಂಸ್ಕಾರಗಳಾದ– ಚತ್ನಿ(Chathi) ಮತ್ತು ದಸೂತ್ನ(Dasuthan)ಗಳನ್ನು ಕೂಡ ಇವರು ಆಚರಿಸುತ್ತಾರೆ. ಹರಿಯಾಣದ ಬಂಜಾರರು ಶವವನ್ನು ಹೂಳುತ್ತಾರೆ. ಆದರೆ ಎಂಟು ವರ್ಷಗಳೊಳಗಿನ ಮಕ್ಕಳು ಮರಣ ಹೊಂದಿದರೆ, ಅವರ ಶವಗಳನ್ನು ಸುಡುತ್ತಾರೆ. ಹಾಗೂ ೧೩ ದಿನಗಳವರೆಗೆ ಶೋಕಾಚರಣೆಯಲ್ಲಿರುತ್ತದೆ.

ಹರಿಯಾಣದ ಬಂಜಾರ ಸಮುದಾಯದ ಬಹುತೇಕ ಸದಸ್ಯರು ಚಿಕ್ಕ ಪುಟ್ಟ ವ್ಯಾಪಾರಿ ಗಳಾಗಿದ್ದಾರೆ. ನಗರಗಳಲ್ಲಿ ಬಿದುರಿನ ವಸ್ತುಗಳನ್ನು ಮಾರಾಟ ಮಾಡುತ್ತಾರೆ. ತರಕಾರಿ ಮತ್ತು ಚಹಾ ಮಾರಾಟ ಮಾಡುವುದು ಅವರುಗಳ ಸ್ವಯಂ ಉದ್ಯೋಗಗಳಾಗಿವೆ. ಅವರಲ್ಲಿ ಕೆಲವೇ ಬೆರಳೆಣಿಕೆಯಷ್ಟು ಮಾತ್ರ ಬಿಳಿ–ಪಟ್ಟಿಯ ಮತ್ತು ಸರ್ಕಾರಿ ಸೇವೆಗಳಲ್ಲಿ ದುಡಿಯುತ್ತಿದ್ದಾರೆ. ಅಷ್ಟೇ ಅಲ್ಲದೆ ತಯಾರಿಕೆ(Manufacturing), Processing ಹಾಗೂ ಗೃಹ ಕೈಗಾರಿಕೆ ಮುಂತಾದ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. ಮುಂದುವರಿದು ಕೃಷಿ ಮತ್ತು ವಾಣಿಜ್ಯ ಕೃಷಿ(Plantation) ತೋಟಗಳಲ್ಲಿ ಕಾರ್ಮಿಕ ಕಾರ್ಯನಿರ್ವಹಿಸುತ್ತಿದ್ದರು. ಬ್ಯಾಸ್ಕೇಟ್ ತಯಾರಿ ಸುವುದು, ಚಾಪೆ ತಯಾರಿಸುವುದು ಸಿರ್‌ಕಿ ತಯಾರಿಸುವುದು ಬಿದಿರಿನ ಚಾಪೆ(Bambo curtains) ಮುಂತಾದವುಗಳ ತಯಾರಿಕೆಯಲ್ಲಿ ಕರಕುಶಲತೆಯ ಕೌಶಲ್ಯವನ್ನು ಹೊಂದಿದ್ದರು. ಡೊಹಾಲ್(Dhol/Dholak) ಅವರ ಸಂಗೀತ ಮುಖ್ಯ ವಾದ್ಯವಾಗಿತ್ತು. ಹಾಗೂ ಮಹಿಳೆಯರು ನೃತ್ಯಗಳಲ್ಲಿ ಭಾಗವಹಿಸುತ್ತಿದ್ದರು.

ಹರಿಯಾಣದ ಬಂಜಾರರಲ್ಲಿ ಜಾತಿ ಪಂಚಾಯ್ತಿಯು ಅತ್ಯುತ್ತಮವಾಗಿ ಸಂಘಟಿತವಾಗಿತ್ತು. ಜಾತಿ ಪಂಚಾಯತ್ತಿಯ ಕಾರ್ಯಕಾರಿ ಸಮಿತಿಗೆ ಸದಸ್ಯರನ್ನು ಧ್ವನಿ ಮತದ ಮೂಲಕ ಆಯ್ಕೆ ಮಾಡುತ್ತಿದ್ದರು. ಮಕ್ಕಳಿಗೆ ಶಿಕ್ಷಣ ನೀಡುವುದು, ವಿವಿಧ ರೀತಿಯ ವಿವಾದಗಳನ್ನು ಬಗೆಹರಿಸುವುದು ಮತ್ತು ಸಮುದಾಯದ ಕಲ್ಯಾಣ ಕಾರ್ಯಗಳು ಜಾತಿ ಪಂಚಾಯ್ತಿ ಪ್ರಮುಖ ಕಾರ್ಯಗಳಾಗಿದ್ದವು. ಸಮುದಾಯದ ನಿಯಮಗಳನ್ನು ಉಲ್ಲಂಘಿಸಿದ ಸದಸ್ಯರನ್ನು ಸಾಮಾಜಿಕವಾಗಿ ಬಹಿಷ್ಕಾರಿಸುವುದು ಮತ್ತು ದಂಡವಿಧಿಸುವ ಶಿಕ್ಷೆಯನ್ನು ಜಾತಿ ಪಂಚಾಯ್ತಿಯು ವಿಧಿಸುತ್ತಿತ್ತು.

ಬಂಜಾರರು ಹಿಂದೂ ಧರ್ಮದಲ್ಲಿ ನಂಬಿಕೆಯನ್ನು ಹೊಂದಿದ್ದವರು. ಬೆರಿವಾಲಿ ದೇವಿ(Beriwali Devi) ಮತ್ತು ಗುರುಗಾನ್ ವಾಲಿ ಮಟ(Gurgaon Wali Mata) ಮುಂತಾದ ಪ್ರಾದೇಶಿಕ ಆಹಾರ ಕ್ರಮಗಳನ್ನು ಅನುಸರಿಸುತ್ತಿದ್ದರು. ತಮಗಿಂತಲೂ ಮೇಲ್ವರ್ಗದವರಿಂದ ಕಚ್ಚಾ ಮತ್ತು ಪಕ್ಕಾ ಆಹಾರಗಳನ್ನು ಸ್ವೀಕರಿಸುತ್ತಿದ್ದರು. ಆದರೆ ತಮಗಿಂತ ಕೆಳವರ್ಗಗಳಿಂದ ಸ್ವೀಕರಿಸುತ್ತಿರಲಿಲ್ಲ. ಆದಾಗ್ಯೂ ಈ ರೀತಿಯ ಭಿನ್ನತೆಯು ಕ್ಷೀಣವಾಗುತ್ತಿದೆ. ಇತರೆ ಸಮುದಾಯ ಗಳೊಂದಿಗೆ ಕುಡಿಯುವ ನೀರಿನ ಬಾವಿಗಳು, ಶಾಲೆಗಳು, ಸ್ಮಶಾನ ಮುಂತಾದ ಸೌಲಭ್ಯಗಳನ್ನು ಹಂಚಿಕೊಳ್ಳುತ್ತಾರೆ. ಬಂಜಾರ ಸಮುದಾಯದವರು ಹುಡುಗರ ವಿಧ್ಯಾಭ್ಯಾಸಕ್ಕೆ ಹೆಚ್ಚಿನ ಆದತ್ಯೆ ನೀಡುತ್ತಿದ್ದರು. ಬಡತನದ ಕಾರಣಕ್ಕಾಗಿ ಶಾಲೆಯಿಂದ ಹೊರಗುಳಿಯುತ್ತಿದ್ದರು.

**ಹಿಮಾಚಲ ಪ್ರದೇಶ ರಾಜ್ಯದ ಬಂಜಾರ ಸಮುದಾಯ**

ಹಿಮಾಚಲ ಪ್ರದೇಶದ ರಾಜ್ಯದಲ್ಲಿ ಬಂಜಾರರನ್ನು ಲಬನ ಅಥವಾ ಲವನ ಎಂದು ಕರೆಯಲಾಗುತ್ತದೆ. ವ್ಯಾಪಾರ ಮತ್ತು ತಿರುಗಾಡುತ್ತಾ ವ್ಯಾಪಾರ ಮಾಡುವುದು ಇವರ ಸಾಂಪ್ರಾದಾಯಿಕ ವೃತ್ತಿಯಾಗಿತ್ತು. ಹಿಮಾಚಲ ಪ್ರದೇಶ ರಾಜ್ಯದ ಬಂಜಾರರು ತಮ್ಮ ಮೂಲ ವನ್ನು ರಜಪೂತರೊಂದಿಗೆ ಗುರ್ತಿಸಿಕೊಳ್ಳುತ್ತಾರೆ ಹಾಗೂ ರಾಜಸ್ಥಾನ ಮತ್ತು ಹರಿಯಾಣ ರಾಜ್ಯಗಳಿಂದ ವಲಸೆ ಬಂದಿರಬಹುದೆಂದು ನಂಬಿದ್ದಾರೆ. ಬಂಜಾರರಲ್ಲಿ ಹಿಂದೂ, ಸಿಕ್ ಮತ್ತು ಮುಸಲ್ಮಾನರೂ ಇದ್ದಾರೆ. ಹಿಂದೂ ಮಸಿಕ್ ಬಂಜಾರರಲ್ಲಿ ಅಂತರ್ ಜಾತಿಯ ವಿವಾಹವಿದೆ. ಆದರೆ ಮುಸಲ್ಮಾನ ಬಂಜಾರರು ತಮ್ಮದೇ ಆದ ಹೊರ ಸಮೂಹದ ವಿವಾಹ ಪದ್ಧತಿಯನ್ನೂ ಅನುಸರಿಸುತ್ತಾರೆ. ಹಿಂದೆ ಬಾಲ್ಯವಿವಾಹವೇ ಪ್ರಧಾನವಾಗಿತ್ತು ಆದರೆ ಇಂದು ಸಂಧಾನದ ಮೂಲಕ ವಯಸ್ಕರ ವಿವಾಹ ಪದ್ಧತಿಯನ್ನು ಮಾಡಲಾಗುತ್ತದೆ. ಕುಟುಂಬದ ಹೊರಗಿನ ಆರ್ಥಿಕ ಚಟುವಟಿಕೆಗಳಲ್ಲಿ ಬಂಜಾರ ಮಹಿಳೆಯರು ಭಾಗವಹಿ ಸುತ್ತಾರೆ. ಅಷ್ಟೇ ಅಲ್ಲದೆ ಅವರು ಮಹಿಳಾ ಸಂಘಟನೆಯಲ್ಲಿ(ಮಹಿಳಾ ಮಂಡಲ Mahila Mandals) ಸದಸ್ಯತ್ವ ಪಡೆಯಲು ಪ್ರಾರಂಭಿಸಿದ್ದಾರೆ. ಸಮುದಾಯವು ನಂಬಿರುವ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳ ಪ್ರಕಾರ ಜೀವನ-ಚಕ್ರವನ್ನು ಪೂರೈಸುತ್ತಾರೆ. ಅವರು ಮುಖ್ಯವಾಗಿ ಧಾನ್ಯಗಳು, ಉಪ್ಪು ಮತ್ತು ಜಾನುವಾರುಗಳ ವ್ಯಾಪಾರವನ್ನು ಮಾಡುತ್ತಿದ್ದಾರೆ. ಆದರೆ ಕೃಷಿಯ ಅವರ ಮುಖ್ಯ ಕಸುಬಾಗಿತ್ತು. ಇತ್ತೀಚಿಗೆ ವ್ಯವಹಾರ ಮತ್ತು ಸೇವೆಗಳು ಅವರ ಉಪ-ಕಸುಬುಗಳಾಗಿವೆ. ಸಮುದಾಯದ ಪರಿಷತ್ತು(Community Concils) ಜಾತಿ ಸಭಾ ಅಥವಾ ಬೈರಾದರಿ ಪಂಚಾಯ್ತಿ (Biradari panchayat) ಸಾಮಾಜಿಕ ಮತ್ತು ಆರ್ಥಿಕ ವಿಷಯಗಳ ವಿವಾದಗಳನ್ನು ಬಗೆಹರಿಸುತ್ತಿತ್ತು. ಬಾಂಬೆ ಪ್ರೆಸಿಡೆನ್ಸಿಯ ಗೆಜೆಟಿಯರ್

೧೮೯೩ರ ಭಾಗ I & Vರಲ್ಲಿ ತಿಳಿಸಿರುವಂತೆ ದಕ್ಷಿಣ ಭಾರತದಲ್ಲಿ ಲಂಬಾಂಡಿಗಳನ್ನು ಲಂಬಾಣಿಗಳೆಂದು ಕರೆಯಲಾಗಿದೆ. ಜಿ.ಎ.ಗಿರಿಸನ್ ಅವರು ಹೇಳುವಂತೆ ಪಶ್ಚಿಮ ಮತ್ತು ದಕ್ಷಿಣ ಭಾರತದಲ್ಲಿನ ಬಂಜಾರರೆನಿಸಿಕೊಂಡವರೆಲ್ಲರೂ ಸಾಮಾನ್ಯ ಹೆಸರಿನವರಾಗಿರುತ್ತಾರೆ. ಆದರೆ ಪದಗಳ ಪ್ರಯೋಗಗಳು ಬೇರೆಬೇರೆಯಾಗಿರುತ್ತವೆ.

### ೧.೬. ಅಧ್ಯಯನದ ಸ್ವರೂಪ

ದಕ್ಷಿಣ ಕರ್ನಾಟಕದ ಬಂಜಾರ ಸಮುದಾಯ: ಒಂದು ಮಾನವಶಾಸ್ತ್ರೀಯ ಅಧ್ಯಾಯನ ಎನ್ನುವ ಪರಿವಿಡಿಗೆ ಸಂಬಂಧಪಟ್ಟಂತೆ ಆರು ಅಧ್ಯಾಯಗಳಲ್ಲಿ ವಿಷಯಗಳನ್ನು ವಿಭಾಗಿಸಲಾಗಿದೆ. ಇದರಲ್ಲಿ ಮೊದಲನೆಯ ಅಧ್ಯಾಯನವು ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನಗಳು ಜೊತೆಗೆ ಅಧ್ಯಾಯನದ ಸ್ವರೂಪಗಳನ್ನು ವಿವರಿಸಲಾಗಿದೆ.

ಎರಡನೆಯ ಅಧ್ಯಾಯನವು ಬಂಜಾರ ಸಮುದಾಯ ಕುರಿತು ಮೂರು ಜಿಲ್ಲೆಗಳ ಮಾಹಿತಿಯೊಂದಿಗೆ ಜೀವನ ಪದ್ಧತಿಯನ್ನು ವಿವರಿಸಲಾಗಿದೆ.

ಮೂರನೆಯ ಅಧ್ಯಾಯನದಲ್ಲಿ ಬಂಜಾರ ಸಮುದಾಯದಲ್ಲಿ ಕಂಡುಬರುವ ಬಂಧುತ್ವ, ಕುಲಸಂಬಧಿ ಸೂಚಿಗಳನ್ನು ವಿವಾಹ ಪದ್ಧತಿಯಲ್ಲಿ ಪರಿವರ್ತನೆಯನ್ನು ವಿವರಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಬಂಜಾರರ ಆರ್ಥಿಕ ಜೀವನ ಕುರಿತಂತೆ ಸಾಕ್ಷರತೆ, ಕಸುಬು, ಆರ್ಥಿಕ ವ್ಯವಸ್ಥೆ, ನ್ಯಾಯ ಒಳಾಡಳಿತ ವ್ಯವಸ್ಥೆ ಕುರಿತು ಚರ್ಚಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಬಂಜಾರರು ಆಡುವ ಭಾಷೆ, ಸಾಹಿತ್ಯ, ಜನಪದ ಕಲೆಗಳ ಹಾಗೂ ಬಂಜಾರರ ನೃತ್ಯ ಕುರಿತು ವಿಶ್ಲೇಷಿಸಲಾಗಿದೆ.

ಆರನೆಯ ಅಧ್ಯಾಯನದಲ್ಲಿ ಬಂಜಾರ ಸಮುದಾಯದಲ್ಲಿ ಪರಿವರ್ತನೆಯ ಹಾದಿಯಲ್ಲಿ ಜೀವನಶೈಲಿ, ಕಲೆ, ಉಡುಗೆ ತೊಡುಗೆಗಳಲ್ಲಿ ಬದಲಾವಣೆ ಕುರಿತು ಆರ್ಥಿಕ ಪ್ರಗತಿಯನ್ನು ಕುರಿತು ವಿವರಿಸಲಾಗಿದೆ.

ಕೊನೆಯದಾಗಿ ಉಪಸಂಹಾರ, ಅನುಬಂಧಗಳು, ವಕ್ತೃಮಾಹಿತಿ, ಕ್ಷೇತ್ರಕಾರ್ಯ ಪ್ರಶ್ನಾವಳಿ ಮಾದರಿ, ವ್ಯಕ್ತಿ ಸಂದರ್ಶನ ಪ್ರಶ್ನಾವಳಿ ಮಾದರಿ, ಛಾಯಾಚಿತ್ರಗಳನ್ನು ನೀಡಲಾಗಿದೆ.

### ೧.೭. ಸಾಹಿತ್ಯ ಸಮೀಕ್ಷೆ

ಮಾನವಶಾಸ್ತ್ರಜ್ಞರು, ಸಮಾಜಶಾಸ್ತ್ರಜ್ಞರು ಮತ್ತು ಸಾಹಿತ್ಯದ ವಿದ್ಯಾರ್ಥಿಗಳು, ವಿದೇಶಿ ಪ್ರವಾಸಿಗರು ಮತ್ತು ವಿದ್ವಾಂಸರುಗಳು ಭಾರತೀಯ ಸಮಾಜದ ಆದಿವಾಸಿಗಳು ಮತ್ತು

ಜಾತಿಗಳನ್ನು ಕುರಿತು ವೈಜ್ಞಾನಿಕ ಅಧ್ಯಯನಗಳನ್ನು ನಡೆಸಿದ್ದಾರೆ. ಹಾಗೆಯೇ ಇಂತಹ ಅಧ್ಯಯನಗಳ ಪುನರ್ ವಿಮರ್ಶೆ ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

ಲಂಬಾಣಿ ಅಥವಾ ಬಂಜಾರು ಪರಂಪರಾಗತವಾಗಿ ಎತ್ತುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಸರಬರಾಜು ಮಾಡುತ್ತಿದ್ದರು. ದೇಶದ ನಾನಾ ಭಾಗಗಳಲ್ಲಿ ಈ ಜನರು ವಂಜಾರಿ (ಕಾಡುಗಳಲ್ಲಿ ಸಂಚರಿಸುವ) ಲಂಬಾಡಾ, ಲಮಾನಿ ಮತ್ತು ಲಭಾನ ಮುಂತಾದ ಹೆಸರುಗಳಿಂದ ಕರೆಯುತ್ತಿದ್ದರು. ಇವೆಲ್ಲ ಪದಗಳು ಸಂಸ್ಕೃತದ 'ಲವಣ'(ಉಪ್ಪು) ಪದದಿಂದ ಬಂದಿದೆ. ಪೂರ್ವದಿಂದಲೂ ಲಂಬಾಣಿಗಳು ತಮ್ಮ ಎತ್ತುಗಳ ಸಹಾಯದಿಂದ ಸರಬರಾಜು ಕಾರ್ಯವನ್ನು ಮಾಡಿ ಜೀವಿಸುತ್ತಿದ್ದಾರೆ. ಅವರು ಭಾರತದ ಯಾವ ಮೂಲನಿವಾಸಿ ಗಳೆಂಬುದನ್ನು ಹಾಗೂ ದೇಶದ ವಿವಿಧ ಭಾಗಗಳಲ್ಲಿ ಎಲ್ಲಿಂದ ಪ್ರಸರಿಸಿದರು ಎಂಬುದನ್ನು ಖಚಿತವಾಗಿ ಹೇಳಲು ಸಾಧ್ಯವಿಲ್ಲ. ಹೀಗೆ ಅನೇಕ ಅಂಶಗಳು ಈ ಅಧ್ಯಯನದಿಂದ ವ್ಯಕ್ತವಾಗುತ್ತವೆ. ಅದರಿಂದ ಹೀಗೆ ಹೊರ ಹೊಮ್ಮಿದ ಸಂಗತಿಗಳು ಪ್ರಸ್ತುತ ನಮ್ಮ ಅಧ್ಯಯನಕ್ಕೆ ಪೂರಕವಾದ ಅಂಶಗಳಾಗಿವೆ. ಎಡ್ಗರ್‌ಥರ್‌ಸ್ಟನ್ ಮತ್ತು ಕೆ. ರಂಗಚಾರಿ (೧೮೮೭)ಅವರು ತಮ್ಮ ಕ್ಯಾಸ್ಟ್ ಅಂಡ್ ಟ್ರೈಬ್ಸ್ ಆಫ್ ಸದರ್ನ್ ಇಂಡಿಯಾ ಸಂಪುಟದಲ್ಲಿ ಲಂಬಾಣಿ ಸಮುದಾಯದ ಕುರಿತು ಅತ್ಯುತ್ತಮ ಮಾಹಿತಿಯನ್ನು ಒದಗಿಸಿದ್ದಾರೆ. ಆದರೆ ಅವರು ಪ್ರಸ್ತಾಪಿಸಿರುವ ಐತಿಹಾಸಿಕ ಕಥೆಗಳ ಸಾರಾಂಶವು ವಾಸ್ತವತೆಗೆ ದೂರವಾಗಿವೆ. ಡಬ್ಲ್ಯೂ ಕ್ರೂಕ್ (೧೯೮೧) ಅವರು ದಂಡಿಯ ದಶಕುಮಾರ ಚರಿತೆಯಲ್ಲಿ ಬಂಜಾರ ತಾಂಡದಲ್ಲಿ ನಡೆಯುತ್ತಿದ್ದ ಕೋಳಿ ಕಾಳಗದ ಮಾಹಿತಿಯನ್ನು ಒದಗಿಸಿದ್ದಾರೆ ಹಾಗೂ ಕ್ರಿ.ಶ. ೧೧ ಮತ್ತು ೧೨ನೇ ಶತಮಾನದ ಸಂದರ್ಭದಲ್ಲಿ ಲಂಬಾಣಿ ಸಮುದಾಯದವರ ಇತಿಹಾಸವನ್ನು ಗುರ್ತಿಸಲು ಅನುಕೂಲವಾಗುವಂತೆ ಮಾಹಿತಿಗಳನ್ನು ದಾಖಲಿಸಿದ್ದಾರೆ.

ಹೆಚ್.ವಿ. ನಂಜುಂಡಯ್ಯ ಮತ್ತು ಎಲ್.ಕೆ. ಅಯ್ಯರ್ (೧೯೨೮) ಅವರು ದಿ ಮೈಸೂರು ಟ್ರೈಬ್ಸ್ ಅಂಡ್ ಕ್ಯಾಸ್ಟ್ ಎಂಬ ಅಧ್ಯಯನದಲ್ಲಿ ಲಂಬಾಣಿ ಅಥವಾ ಬಂಜಾರ ಸಮುದಾಯ ದವರನ್ನು ಕುರಿತು ವಿವರವಾದ ಚಿತ್ರಣವನ್ನು ನೀಡಿದ್ದಾರೆ. ಬಂಜಾರ ಮೂಲ, ಅವರ ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಚಾರಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ.

ಶ್ರೀ ಬಳಿರಾಮಜಿ, ಹೀರಾಮಣಜಿ, ರಾಠೋಡ ಮಾಂಡವೀಕರ (೧೯೩೬)ಅವರು ತಮ್ಮ "ಗೋಲೆ ಬಂಜಾರ ಲೋಕಾಂಚಾ ಇತಿಹಾಸ" ಕೃತಿಯಲ್ಲಿ ಲಂಬಾಣಿಯವರ ಇತಿಹಾಸವನ್ನೇ ಮೂಲ ಉದ್ದೇಶವಾಗಿಟ್ಟುಕೊಂಡು ಬರೆದಿದ್ದಾರೆ. ಆದರೆ ಅವರು ಸಾಂಸ್ಕೃತಿಕ ಅಂಶಗಳ ಕುರಿತು ಯಾವುದೇ ಪ್ರಸ್ತಾಪ ಮಾಡದೇ ಇರುವುದರಿಂದ ಅಧ್ಯಯನವು

ಅಪೂರ್ಣವೆಂದೇ ಭಾವಿಸಬಹುದು. ಆದಾಗ್ಯೂ ಬಂಜಾರದ ಐತಿಹಾಸಿಕ ಹಿನ್ನಲೆಯನ್ನು ಗುರ್ತಿಸಲು ಪೂರಕವಾದ ಅಧ್ಯಯನ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಪುಷ್ಪಲತಾ ರಾಂಪುರೆ (೧೯೭೫) ಅವರು ಲಂಬಾಣಿಗರಲ್ಲಿ ಮೌಖಿಕವಾಗಿ ಉಳಿದಿರುವ ಜನಪದ ಗೀತೆಗಳನ್ನು ಸಂಗ್ರಹಿಸಿ ಅವುಗಳ ಸಮೂಹಗಳ ಮೇಲೆ ಬೆಳಕನ್ನು ಚೆಲ್ಲಿದ್ದಾರೆ ಹಾಗೂ ಸಾಂಸ್ಕೃತಿಕ ಚಿತ್ರಣವನ್ನು ಸೊಗಸಾಗಿ ಚಿತ್ರಿಸಿದ್ದಾರೆ. ಆದಾಗ್ಯೂ ಲಂಬಾಣಿ ಸಮುದಾಯದ ಸಮಗ್ರ ಸಂಸ್ಕೃತಿಯನ್ನು ಚಿತ್ರಣವನ್ನು ನಾವು ಇಲ್ಲಿ ಕಾಣುವುದಿಲ್ಲ. ಆದರೂ ಜನಪದ ಗೀತೆಗಳ ಒಟ್ಟು ದರ್ಶನವು ಅಧ್ಯಯನಕಾರರ ಗಮನವನ್ನು ಸೆಳೆಯುತ್ತದೆ. ಹೀಗಾಗಿ ಈ ಕೃತಿಯು ಸಹ ಪರೋಕ್ಷವಾಗಿ ಸಂಶೋಧನೆಗೆ ಸಹಕಾರಿಯಾಗಿದೆ.

ಬಿ.ಜಿ. ಹಳಬರ (೧೯೮೬) ಅವರ "Lamani Economic and Society inchange" ಎಂಬ ಸಂಶೋಧನಾ ಅಧ್ಯಯನದಲ್ಲಿ ಲಂಬಾಣಿಗರ ಜೀವನ ವಿಧಾನಕ್ಕೆ ಸಂಬಂಧಿಸಿದ ಅನೇಕ ಪ್ರಮುಖ ಸಂಗತಿಗಳು ಲಭ್ಯವಾಗುತ್ತವೆ. ಧಾರವಾಡ ಜಿಲ್ಲೆಯ ಎರಡು ಲಂಬಾಣಿ ತಾಂಡ್ಯಗಳನ್ನು ಕ್ಷೇತ್ರಕಾರ್ಯ ಮಾಡಿ ಅವರ ಆರ್ಥಿಕ ಬದಲಾವಣೆಯ ಮೇಲೆ ಸಾಮೂಹಿಕ ಪರಿಣಾಮವನ್ನು ಗುರುತಿಸಿದ್ದಾರೆ. ಅಧ್ಯಯನದ ಮುಖ್ಯ ಉದ್ದೇಶವು ಆರ್ಥಿಕ ಬದಲಾವಣೆ ಯಾಗಿರುವುದರಿಂದ ಇತರೆ ಅಂಶಗಳು ಕೇವಲ ಪ್ರಾಸ್ತಾವಿಕವೆನಿಸಿವೆ. ಆದಾಗ್ಯೂ ಈ ಅಧ್ಯಯನವು ಮಾನವಶಾಸ್ತ್ರ ಚೌಕಟ್ಟಿನಡಿ ನಡೆದಿರುವುದು ಪ್ರಸ್ತುತ ನಮ್ಮ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸುವುದರಲ್ಲಿ ಯಾವುದೇ ಸಂಶಯವಿಲ್ಲ.

ವಿ.ಎಚ್. ಬಾರಿಕೇರಿ ಅವರು ಲಂಬಾಣಿಯವರ ಭಾಷೆಯ ಕುರಿತು ಅಧ್ಯಯನ ಮಾಡಿದ್ದು ಭಾಷೆಯ ದೃಷ್ಟಿಯಿಂದ ಇದು ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ. ಬೆನಕನಹಳ್ಳಿ ಜಿ.ನಾಯಕ ಅವರು ಸ್ಥೂಲವಾಗಿ ಲಂಬಾಣಿಗರ ಕೆಲವು ಸ್ವಾರಸ್ಯಕರ ಜನಪದ ಗೀತೆಗಳಲ್ಲಿ ನಿರೂಪಿಸಿದ್ದು, ಇದು ಕೇವಲ ಲಂಬಾಣಿ ಗೀತೆಗಳ ಪಕ್ಷಿನೋಟವಾಗಿದೆ. ಆದ್ದರಿಂದ ಲಂಬಾಣಿಗರ ಸಮಗ್ರ ಬದುಕನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಅಮರಸಿಂಗ್ ರಾಠೋಡ (೧೯೭೧) ಅವರು ತಮ್ಮ ಅಧ್ಯಯನದಲ್ಲಿ ಲಂಬಾಣಿಗರ ಸ್ಥೂಲ ಪರಿಚಯ ಮಾಡುವುದಲ್ಲದೇ, ಲಂಬಾಣಿ ಮತ್ತು ರಜಪೂತರ ಸಾಮ್ಯತೆಯನ್ನು ಚಿತ್ರಿಸಿದ್ದಾರೆ. ಗುರ್ಜರ, ಮಾರವಾಡಿ ಮತ್ತು ಲಂಬಾಣಿಗರು ಒಂದೇ ಮೂಲದಿಂದ ಬಂದವರು ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಲಂಬಾಣಿ ಭಾಷೆಯ ವ್ಯಾಕರಣವನ್ನು ಕುರಿತ ಈ ಅಧ್ಯಯನವು ಭಾಷಾಶಾಸ್ತ್ರಜ್ಞರಿಗೆ ಉಪಯುಕ್ತವಾಗಿದೆ.

ಡಾ. ಶೇಖರನಾಯ್ಕ (೨೦೦೨) ಅವರು ಲಂಬಾಣಿಗಳ ಮೂಲ, ಐತಿಹಾಸಿಕ ಹಿನ್ನಲೆ, ಅವರ ಸಾಮಾಜಿಕ ವ್ಯವಸ್ಥೆ, ಪಂಚಾಯ್ತಿಯ ರಚನೆ, ಪಂಗಡ ವೃತ್ತಿಗಳು, ಕಸುಬುಗಳು ಮಹಿಳೆಯರ ಸ್ಥಾನಮಾನ, ಕಲೆ, ಕಸೂತಿ, ಧರ್ಮ-ಧರ್ಮದ ಆಚರಣೆಗಳು ಜಾನಪದ, ಲಂಬಾಣಿ ಮತ್ತು ಇತರೆ ಸಮಾನಾರ್ಥಕ ಪದಗಳು-ಪರ್ಯಾಯ ಪದಗಳು, ಮುಂತಾದ ಅಂಶಗಳ ಬಗ್ಗೆ ಬೆಳಕನ್ನು ಚೆಲ್ಲಿದ್ದಾರೆ ಹಾಗೂ ಪ್ರಸ್ತುತ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ.

ಖಂಡೋಬಾ (೧೯೯೧) ಅವರು ಲಂಬಾಣಿಗಳ ಪರಂಪರೆ, ಸಾಂಪ್ರದಾಯಿಕ ಇತಿಹಾಸ, ಆಂತರಿಕ ಸಮಾಜ ರಚನೆ, ಕಸುಬು, ಕಲೆ ನಾಗರೀಕತೆ, ಸಾಮಾಜಿಕ ಮತ್ತು ಕೌಟುಂಬಿಕ ವ್ಯವಸ್ಥೆ ಜನನ-ಮರಣ, ವಿವಾಹ, ಸಂಸ್ಕಾರ ಪದ್ಧತಿ, ವೇಷ-ಭೂಷಣ, ಆಚಾರ-ವಿಚಾರ ಮತ್ತು ಹವ್ಯಾಸ ಮುಂತಾದ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ಲಂಬಾಣಿಗಳ ಮೇಲೆ ಸಮಗ್ರ ಚಿತ್ರಣವನ್ನು ನೀಡಿರುವ ಈ ಅಧ್ಯಯನವು ಪ್ರಸ್ತುತ ಅಧ್ಯಯನಕ್ಕೆ ಅತ್ಯಂತ ಉಪಯುಕ್ತವಾಗಿರುತ್ತದೆ.

ಚಿದಾನಂದಮೂರ್ತಿ(೧೯೬೭) ಅವರು ಲಂಬಾಣಿಗಳ ಇತಿಹಾಸ ಹಾಗೂ ಸಾಮಾಜಿಕ ಜೀವನವನ್ನು ತಮ್ಮ 'ಲಂಬಾಣಿ ಜನ ಮತ್ತು ಅವರ ಭಾಷೆ' ಎಂಬ ಲೇಖನವು ಭಾಷಾ ದೃಷ್ಟಿಯಿಂದ ಅತ್ಯುಪಯುಕ್ತವಾಗಿದೆ. ಸಣ್ಣರಾಮ (೧೯೯) ಅವರು ಲಂಬಾಣಿ ಸಮುದಾಯದ ಮೂಲ, ಗೋತ್ರರಚನೆ, ಅವರಲ್ಲಿ ಮಹಿಳೆಯರಿಗಿರುವ ಸ್ಥಾನಮಾನ, ಸಂಪ್ರದಾಯ ಆಚರಣೆಗಳು, ಹಬ್ಬ-ಹರಿದಿನ, ಧಾರ್ಮಿಕ ವಿಧಿ-ವಿಧಾನ ಕಲೆ, ಜಾನಪದ, ಜನಪದ ಸಾಹಿತ್ಯ, ನ್ಯಾಯ ಪಂಚಾಯತಿ, ಇತ್ಯಾದಿ ಅಂಶಗಳ ಬಗ್ಗೆ ವಿಶ್ಲೇಷಿಸಿದ್ದಾರೆ.

ವೈ. ರೂಪ್ಲಾನಾಯಕ್ (೧೯೯೮) ಅವರು ಲಂಬಾಣಿಗರಲ್ಲಿನ ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅದೇ ರೀತಿ ಕೃಷ್ಣಮೂರ್ತಿ (೨೦೦೦) ಅವರು "ಚಿತ್ರದುರ್ಗ ಜಿಲ್ಲೆಯಲ್ಲಿ ಲಂಬಾಣಿಗಳಲ್ಲಿನ ಅಪರಾಧಿಗಳು ಮತ್ತು ಸಂಪ್ರದಾಯಗಳು" ಎಂಬ ಅಧ್ಯಯನವು ಲಂಬಾಣಿಗಳ ಸಾಮಾಜಿಕ ಸಂಘಟನೆಯ ಮೇಲೆ ಕೇಂದ್ರೀಕರಿಸಿದೆ. ಡಾ. ಡಿ.ಬಿ.ನಾಯಕ (೧೯೯೪) ಅವರು ಲಂಬಾಣಿಗರ ಐತಿಹಾಸಿಕ ಹಿನ್ನೆಲೆಯನ್ನು ಕೂಲಂಕುಷವಾಗಿ ಚರ್ಚಿಸಿದ್ದಾರೆ. ಅಷ್ಟೇ ಅಲ್ಲದೆ ಅವರಲ್ಲಿನ ಸಾಮಾಜಿಕ ಪರಿವರ್ತನೆಯನ್ನು ವಿಶ್ಲೇಷಿಸುವ ಪ್ರಯತ್ನ ನಡೆಸಿದ್ದಾರೆ ಹಾಗೂ ಎ.ಕೊರ್‍ರಾ ಬಾಲಾನಾಯಕ್ (೧೯೯೬) ಅವರು ತಮ್ಮ "ಬಂಜಾರ ಧರ್ಮದ ಸಾಮಾನ್ಯ ಜ್ಞಾನ" ಎಂಬ ಅಧ್ಯಯನದಲ್ಲಿ

ಬಂಜಾರರ ಮೂಲ ಗೋತ್ರಗಳ ಬಗ್ಗೆ ತಿಳಿಸಿದ್ದಾರೆ. ಲಾರೆನ್ಸ್ ಡಿಸೋಜಾ ಎನ್.ಡಿ (೧೯೯೭) ಅವರು ಲಂಬಾಣಿಗರ ದೈನಂದಿನ ಜೀವನ ವಿಧಾನ, ಜೀವನ ಮೌಲ್ಯಗಳು, ಗುಂಪಾಗಿ ಜೀವಿಸುವ ವೈಶಿಷ್ಟ್ಯತೆ, ಬೌದ್ಧಿಕ ಹಾಗು ಭೌತಿಕ ವಿಷಯಗಳ ಬಗ್ಗೆ ಸ್ಥೂಲವಾಗಿ ಪರಿಚಯಿಸಿದ್ದಾರೆ.

ಡಾ.ಹರಿಲಾಲ ಪವಾರ (೨೦೦೮) ಅವರು ಲಂಬಾಣಿ ಬುಡಕಟ್ಟಿನಲ್ಲಿ ಹೆಣ್ಣುಮಕ್ಕಳಿಗೆ ಹೆಚ್ಚಿನ ಪ್ರಾಮುಖ್ಯತೆ ಇದ್ದಂತೆ ಕಂಡುಬರುವುದಿಲ್ಲ ಎಂದು ಅಭಿಪ್ರಾಯಪಟ್ಟಿದ್ದಾರೆ. ಹಾಗೆಯೇ ಬಾಲಕಿಯರಿಗೆ ಪ್ರೌಢಶಿಕ್ಷಣದಿಂದ ಉನ್ನತ ಶಿಕ್ಷಣದವರೆಗೆ ಕಲಿಯುವಂತೆ ಪ್ರೇರೇಪಿಸಬೇಕು, ರಾಜಕೀಯ ಪ್ರಾತಿನಿಧ್ಯತೆಯ ನೀಡುವ ಅವಶ್ಯಕತೆ ಇದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಡಾ. ಮಹಾದೇವಿ ಬಾಯಿ (೧೯೯೫) ಅವರು ಲಂಬಾಣಿಗರು ತಮ್ಮ ಮೂಲ ಸಂಸ್ಕೃತಿಯನ್ನು ಎಷ್ಟರ ಮಟ್ಟಿಗೆ ಕಾಯ್ದು ಕೊಂಡಿದ್ದಾರೆ ಎಂಬುದನ್ನು ವಿಶದಪಡಿಸಿದ್ದಾರೆ. ಲಂಬಾಣಿಗರ ಜೀವನವಿಧಾನ ಮತ್ತು ಸಂಸ್ಕೃತಿ, ಸಮುದಾಯದ ಮಹಿಳೆಯರ ವರ್ಣರಂಜಿತ, ಉಡುಪುಗಳ ಮೂಲವನ್ನು ತಾರ್ಕಿಕವಾಗಿ ವಿಶ್ಲೇಷಿಸಿದ್ದಾರೆ. ಅಷ್ಟೇ ಅಲ್ಲದೆ ಭೌತಿಕ ಮತ್ತು ಅಭೌತಿಕ ವಸ್ತು ಪರಿಕರಗಳು ವಿಧಿ ನಿಷೇಧಗಳು, ಆಡಳಿತಾತ್ಮಕ ವ್ಯವಸ್ಥೆ, ವೈದ್ಯಪದ್ಧತಿ, ಅಭಿವ್ಯಕ್ತಿಯಾಗಿ ಸಾಹಿತ್ಯ ಪ್ರಕಾರಗಳು ಮುಂತಾದವುಗಳನ್ನು ಒರೆಗಲ್ಲಿಗಚ್ಚುವ ಪ್ರಯತ್ನ ಇವರ ಅಧ್ಯಯನದಲ್ಲಿ ಕಂಡುಬರುತ್ತದೆ. ಲಂಬಾಣಿಗರಲ್ಲಿ ಚಾಲ್ತಿಯಲ್ಲಿರುವ ಕೂಡಾವಳಿ, ಮೈದುನವಿವಾಹ, ವಿದವಾ ವಿವಾಹ ಪದ್ಧತಿಗಳನ್ನು ಸ್ತ್ರೀವಾದಿ ನೆಲೆಯಲ್ಲಿ ವಿವೇಚಿಸಿದ್ದಾರೆ. ಕುಲಶಾಸ್ತ್ರೀಯ ಚೌಕಟ್ಟಿನಲ್ಲಿ ಕೈಗೊಂಡಿರುವ ಪ್ರಸ್ತುತ ಅಧ್ಯಯನಕ್ಕೆ ಅತ್ಯುಪಯುಕ್ತ ಆಧಾರ ಅಧ್ಯಯನವಾಗಿದೆ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಪ್ರೊ. ಲಿಂಬ್ಯಾನಾಯ್ಕ ಮತ್ತು ಡಾ. ಎಮ್.ಜಿ.ಹುದ್ದಾರ ಅವರು 'ಲಂಬಾಣಿ ವಲಸೆ ಕುಟುಂಬಗಳ ಮಕ್ಕಳ ಶಿಕ್ಷಣ' ಎಂಬ ತಮ್ಮ ಸಂಶೋಧನಾ ಲೇಖನದಲ್ಲಿ ವಲಸೆ ಕುಟುಂಬದ ಲಂಬಾಣಿಗರ ಮಕ್ಕಳು ಶಿಕ್ಷಣದಿಂದ ಸಂಪೂರ್ಣ ವಂಚಿತರಾಗುತ್ತಿದ್ದಾರೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಶ್ರೀ ಬಸವರಾಜ ನೆಲ್ಲಿಸರ (೧೯೭೭) ಅವರು "ಲಂಬಾಣಿಗರು ಮತ್ತು ಬಗ್ಗರು" ಎಂಬ ಎರಡು ಬುಡಕಟ್ಟುಗಳ ಜಾನಪದೀಯ ಅಧ್ಯಯನವನ್ನು ಕೈಗೊಂಡಿದ್ದು, ಅವರ ಬದುಕಿಗೆ ಸಂಬಂಧಿಸಿದ ವಿಸ್ತೃತ ವಿವರಗಳನ್ನು ಆ ಅಧ್ಯಯನದಲ್ಲಿ ಪ್ರಸ್ತುಪಡಿಸಿದ್ದಾರೆ.

ಗೌರ್ನಮೆಂಟ್ ಆಫ್ ಕರ್ನಾಟಕ ಷೆಡ್ಯೂಲ್ಡ್ ಕ್ಯಾಸ್ಟ್ ಷೆಡ್ಯೂಲ್ಡ್ ಟ್ರೈಬ್ಸ್ ಆರ್ಡರ್ಸ್ ಬೆಂಗಳೂರು, ಸೋಷಿಯಲ್ ವೆಲ್‌ಫೇರ್ ಅಂಡ್ ಲೇಬರ್ ಡಿಪಾರ್ಟ್‌ಮೆಂಟ್ ೧೯೭೭ರ ಆದೇಶದನ್ವಯ ೧೯೫೬ ನವೆಂಬರ್ ಮೊದಲನೇ ದಿನದಂದು ಭಾಷಾವಾರು ಪ್ರಾಂತ್ಯಗಳ ರಚನೆಯ ಘೋಷಣೆಯಾಯಿತು. ರಾಷ್ಟ್ರದಲ್ಲಿ ರಾಜ್ಯಗಳ ಪುನರ್ ವಿಂಗಡನೆಗಳಾದವು. ಮೈಸೂರು ರಾಜ್ಯಕ್ಕೆ ಹೈದರಾಬಾದ್ ಪ್ರಾಂತ್ಯದ ಕೆಲವು ಭಾಗಗಳು ಸೇರಿದವು. ಮದ್ರಾಸ್ ಪ್ರಾಂತ್ಯದ ಕೆಲವು ಭಾಗಗಳು, ಬಾಂಬೆ ಪ್ರಾಂತ್ಯದ ಕೆಲವು ಭಾಗಗಳು ಸೇರಿದವು. ಮೈಸೂರು ರಾಜ್ಯಕ್ಕೆ ಈ ನಾಲ್ಕು ಭಾಗಗಳಿಂದ ಪ್ರಾಂತ್ಯಗಳಲ್ಲಿ ಲಂಬಾಣಿಗರನ್ನು ಆಯಾ ಪ್ರಾಂತ್ಯಗಳಲ್ಲಿ ಯಾವ ಹೆಸರಿನಿಂದ ಗುರ್ತಿಸಿದ್ದಾರೋ ಅವುಗಳನ್ನು ಮೈಸೂರು ರಾಜ್ಯವು ಪಾಲಿಸಿಕೊಂಡು ಬಂದಿತು. ಪ್ರಾಂತ್ಯ ನಿರ್ಬಂಧ ಇದ್ದರಿಂದ ಲಂಬಾಣಿ ಜನರನ್ನು ಬೇರೆ ಬೇರೆ ಹೆಸರುಗಳಿಂದ ಗುರ್ತಿಸಿದ್ದರು. ಎಸ್.ಸಿ. ಎಸ್.ಟಿ., ವರ್ಗಗಳ ಪಟ್ಟಿ ಆದೇಶ ೧೯೫೭ರ ಅನ್ವಯ ಸಂಬಂಧಿಸಿದಂತೆ ಯಾವುದೇ ರಾಜ್ಯ ಅಥವಾ ಜಿಲ್ಲೆ ಪ್ರಾಂತ್ಯಗಳಿಗೆ ಅನ್ವಯವಾಗಿ ಆನಂತರ ರಚಿಸಿದ ಯಾವುದೇ ಜಿಲ್ಲೆ ಪ್ರಾಂತ್ಯಗಳಿಗೂ ಸಹ ಅನ್ವಯವಾಗುತ್ತವೆ. ಕರ್ನಾಟಕದಲ್ಲಿ ಕೊಡಗು, ಬೆಳಗಾಂ, ಬಿಜಾಪುರ, ಧಾರವಾಡ, ಉತ್ತರ ಕನ್ನಡ, ದಕ್ಷಿಣ ಕನ್ನಡ, ಗುಲ್ಬರ್ಗ, ರಾಯಚೂರು, ಬೀದರ್ ಮತ್ತು ಮೈಸೂರು ಜಿಲ್ಲೆ, ಕೊಳ್ಳೆಗಾಲ ತಾಲ್ಲೂಕು ಈ ಜಿಲ್ಲೆಗಳನ್ನು ಹೊರತುಪಡಿಸಿ ಉಳಿದ ಎಲ್ಲಾ ಜಿಲ್ಲೆಗಳಲ್ಲಿರುವ ಬಂಜಾರನ್ನು ಪರಿಶಿಷ್ಟ ಜಾತಿ ಎಂದು ಪರಿಗಣಿಸಲಾಗುತ್ತಿತ್ತು. ಹೈದರಾಬಾದ್ ಪ್ರಾಂತ್ಯಗಳ ಜಿಲ್ಲೆಗಳಾದ ಗುಲ್ಬರ್ಗಾ, ರಾಯಚೂರು, ಬೀದರ್, ಬಾಂಬೆ ಪ್ರಾಂತ್ಯಗಳ ಜಿಲ್ಲೆಗಳಾದ ಧಾರವಾಡ, ಬೆಳಗಾಂ ಮತ್ತು ಬಿಜಾಪುರ, ಉತ್ತರ ಕನ್ನಡ ಜಿಲ್ಲೆಗಳ ಬಂಜಾರರನ್ನು ವಿಮುಕ್ತ ಜಾತಿ (ಡೀ ನೋಟಿಫೈಡ್ ಟ್ರೈಬ್ಸ್) ಪಟ್ಟಿಯಲ್ಲಿ ಸೇರಿದ್ದು, ಎಸ್.ಸಿ. ಎಸ್.ಟಿ. ವರ್ಗಗಳಿಗೆ ಕೊಡುವ ಯಾವ ಸವಲತ್ತುಗಳು ಅವರಿಗೆ ಸಿಗುತ್ತಿರಲಿಲ್ಲ. ಮೈಸೂರು ರಾಜ್ಯವು ಹೈದರಾಬಾದ್ ಪ್ರದೇಶ ಮತ್ತು ಬಾಂಬೆ ಪ್ರದೇಶಗಳಲ್ಲಿ ಆಯಾ ಸರ್ಕಾರಗಳು ಬಂಜಾರರನ್ನು ಹಿಂದುಳಿದ ಜಾತಿಗೆ ಸೇರಿಸಿದ್ದನ್ನು ಮುಂದುವರೆಸಿತು. ಒಂದೇ ಜಾತಿಗೆ ಸೇರಿದ ಬಂಜಾರರನ್ನು ಪ್ರಾದೇಶಿಕ ನಿರ್ಬಂಧ ಇದ್ದರಿಂದ ಆಯಾ ಪ್ರದೇಶಗಳನ್ನು ಬೇರೆ ಬೇರೆ ಹೆಸರುಗಳಿಂದ ಗುರ್ತಿಸಲಾಯಿತು. ಈ ಬಗೆಯ ಪ್ರಾಂತ್ಯ ಬೇದಭಾವಗಳು ೧೯೭೭ರ ಕಾಯ್ದೆ ತಿದ್ದುಪಡಿ ಜಾರಿಗೆ ಬರುವವರೆಗೂ ಬದಲಾವಣೆಯಾಗಿರಲಿಲ್ಲ. ೧೯೭೭ರ ತಿದ್ದುಪಡಿ ಕಾಯ್ದೆ ಒಂದು ಮೈಲಿಗಲ್ಲಾಗಿದ್ದು, ಕರ್ನಾಟಕ ಸರ್ಕಾರವು ಬಂಜಾರರನ್ನು ಪರಿಗಣಿಸುವ ರೀತಿ ಬದಲಾಯಿತು.

ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಆದೇಶ ತಿದ್ದುಪಡಿ ಕಾಯ್ದೆ ೧೯೭೬ರ ಅನ್ವಯ ಪ್ರದೇಶ ನಿರ್ಬಂಧನೆಯನ್ನು ತೆಗೆದಿದ್ದರೆಂದಾಗಿ ಪ್ರವರ್ತನಾ ಜಾರಿ ಸರ್ಕಾರಿ ಆದೇಶದ ಸಂಖ್ಯೆ: ನಂ. ಎಸ್.ಡಬ್ಲ್ಯೂ.ಎಲ್. ೮೬, ಎಸ್.ಎ.ಡಿ.೭೭, ದಿನಾಂಕ: ೦೨-೦೭-೧೯೭೭. ಪ್ರಸ್ತಾವನೆ: ಮೇಲಿನ ಒಂದನ್ನು ಓದಿಕೊಳ್ಳುವುದು. ಹಿಂದುಳಿದ ವರ್ಗ, ಹಿಂದುಳಿದ ಜನಾಂಗ, ಹಿಂದುಳಿದ ಜಾತಿ, ಹಿಂದುಳಿದ ಬುಡಕಟ್ಟು ಎಂದು ನಿರ್ದೇಶನ ಮಾಡಲಾಗಿದೆ. ಸರ್ಕಾರಿ ಆದೇಶ ೨ನ್ನು ಓದಿಕೊಳ್ಳುವುದು. ರಾಜ್ಯದ ವಿವಿಧ ಪ್ರದೇಶಗಳಲ್ಲಿ ಅನುಸೂಚಿತ ಜಾತಿ, ಅನುಸೂಚಿತ ವರ್ಗ ೨ರಲ್ಲಿ ಬರುವ ಹತ್ತೊಂಬತ್ತು ಜಾತಿಗಳನ್ನು ಸರಿಯಾದ ಸ್ಥಾನವನ್ನು ಸ್ಪಷ್ಟವಾಗಿ ಸೂಚಿಸಲಾಗಿದೆ. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಮೇಲಿನ ಮೂರನ್ನು ಓದಿಕೊಳ್ಳುವುದು. ಆದೇಶ ೦೨-೦೯-೧೯೭೬ರಂದು ಸಂಸತ್ತಿನಲ್ಲಿ ಪಾಸಾಗಿ ಅಂದಿನಿಂದಲೇ ಜಾರಿಗೆ ಬರುವಂತೆ ಕೇಂದ್ರ ಸರ್ಕಾರವು ಆದೇಶ ನೀಡಿತು. ಭಾರತ ಸರ್ಕಾರ ಗೃಹ ಸಚಿವಾಲಯ ನವದೆಹಲಿ ತನ್ನ ಘೋಷಣೆಯಲ್ಲಿ ಮೇಲೆ ನಾಲ್ಕನ್ನು ೧೯೭೭ರ ಜುಲೈ ೨೭ರಿಂದಲೇ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಆದೇಶ(ತಿದ್ದುಪಡಿ ೧೯೭೬) ಕಾಯ್ದೆಯನ್ನು ಜಾರಿಗೆ ಬರುವಂತೆ ಸೂಚಿಸಲಾಯಿತು. ಕೇಂದ್ರ ಸರ್ಕಾರದ ನಿರ್ದೇಶನಕ್ಕೆ ಅನುಗುಣವಾಗಿ ಕರ್ನಾಟಕ ಸರ್ಕಾರವು ಬಂಜಾರ್ ಜಾತಿಯನ್ನು ಈ ಕೆಳಗಿನಂತೆ ವರ್ಗೀಕರಿಸಲಾಗಿದೆ. ಕರ್ನಾಟಕ ರಾಜ್ಯದಲ್ಲಿ ವಾಸಿಸುತ್ತಿರುವ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಮತ್ತು ಉಪಜಾತಿ ಬುಡಕಟ್ಟುಗಳ ಪರ್ಯಾಯ ಪದಗಳ ಸ್ಪಷ್ಟನೆ ನೀಡಲಾಯಿತು. ಕರ್ನಾಟಕ ಸರ್ಕಾರವು ಕೆಲವೊಂದು ಜಾತಿಗಳು ಸದಸ್ಯರಿಂದ ತಾವು ಸಂವಿಧಾನದ ೩೪೧, ೩೪೨ನೇ ವಿಧಿಯನ್ವಯ ಅದರಡಿಯಲ್ಲಿ ರಾಷ್ಟ್ರಪತಿಗಳ ಆದೇಶ ಪಟ್ಟಿಯಲ್ಲಿರುವ ಜಾತಿ ಮತ್ತು ಬುಡಕಟ್ಟುಗಳಿಗೆ ಸೇರಿರುವುದಾಗಿಯೂ ಮತ್ತು ಆಯಾ ಜಾತಿಗಳ ಬುಡಕಟ್ಟುಗಳಿಗೆ ದೊರಕುವ ಸೌಕರ್ಯಗಳೀಗೆ ಅರ್ಹರಾಗಿರುತ್ತೇವೆ ಎಂಬ ಮನವಿಯನ್ನು ಸ್ವೀಕರಿಸಿ ಈ ಬಗ್ಗೆ ಕೇಂದ್ರ ಸರ್ಕಾರವನ್ನು ಜಾತಿ ಬುಡಕಟ್ಟುಗಳ ಸಮಾನ ಹೆಸರುಗಳ ಪರ್ಯಾಯ ಪದಗಳನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಪಟ್ಟಿಯಲ್ಲಿ ಸೇರಿಸಬೇಕೆಂದು ಕೋರಿಕೊಂಡಿತು. ಕೇಂದ್ರ ಸರ್ಕಾರ ಈ ಮನವಿಯನ್ನು ಮನ್ನಿಸಿ ಈ ಜಾತಿ ಬುಡಕಟ್ಟುಗಳಿಗೆ ಸೇರಿದ ಸಮನಾರ್ಥ ಹೆಸರು ಪರ್ಯಾಯ ಪದ ಉಪಜಾತಿ ಬುಡಕಟ್ಟುಗಳನ್ನು ಅನುಸೂಚಿತ ಜಾತಿ ಅನುಸೂಚಿತ ಬುಡಕಟ್ಟು ಎಂದು ಕರೆಯಬಹುದೆಂದು ದಿನಾಂಕ: ೨೭-೦೩-೧೯೮೦ರಂದು ಆದೇಶ ಹೊರಡಿಸಿತು. ಹಾಗೆ ಕರ್ನಾಟಕ ಸರ್ಕಾರವು ಮೂರನೇ ಕಲಂನಲ್ಲಿ ಬರುವ ಕೆಲವೊಂದು ಜಾತಿಗಳನ್ನು

ಅವುಗಳ ಸಮಾನಾರ್ಥ ಪದಗಳ ಉಪಜಾತಿ ಉಪ ಬುಡಕಟ್ಟುಗಳನ್ನು ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳ ಎರಡನೇ ಕಲಂಗೆ ಸೇರಿಸಿತು. ಅದರಲ್ಲಿ ಬಂಜಾರ್ ಲಬಾಡಿ, ಸುಗಾರಿಯಾ ಜಾತಿ ಪತ್ರಗಳನ್ನು ಜಾರಿ ಮಾಡುವ ಮೊದಲು ಯಾವುದೇ ವ್ಯಕ್ತಿಯು ರಾಷ್ಟ್ರಪತಿಗಳ ಆದೇಶದಲ್ಲಿ ಬರುವ ಎಲ್ಲಾ ನಿಯಮಗಳ ಪ್ರಕಾರ ಅರ್ಹನೆ ಎಂದು ಪರಿಶೀಲಿಸತಕ್ಕದ್ದು, ಅದರಲ್ಲೂ ರಾಷ್ಟ್ರಪತಿಗಳ ಆದೇಶದ ದಿನಾಂಕದಿಂದ ಆದೇಶದಲ್ಲಿ ನಮೂದಿಸಿದ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆಂದು ಎಂಬುವುದನ್ನು ಪರಿಶೀಲಿಸಬೇಕಾಗುತ್ತದೆ. ಜಾತಿ ಪತ್ರವನ್ನು ಜಾರಿಗೆ ಮಾಡಲು ಅಧಿಕಾರವಿರುವ ಅಧಿಕಾರಿಯು ಈ ಮೇಲಿನ ಅಂಶಗಳನ್ನು ಗಮನಿಸಿ ಅರ್ಹ ವ್ಯಕ್ತಿಗಳಿಗೆ ಮಾತ್ರ ಜಾತಿ ಪತ್ರಗಳನ್ನು ನೀಡಬಹುದಾಗಿತ್ತು. ಈ ನಿಟ್ಟಿನಲ್ಲಿ ಕರ್ನಾಟಕ ಸರ್ಕಾರವು ಆದೇಶವೊಂದನ್ನು ಹೊರಡಿಸಿ ಬಂಜಾರ್ ಲಂಬಾಣಿ ಜಾತಿಗಳಿಗೆ ಸಂಬಂಧಿಸಿದಂತೆ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಆದೇಶ (ತಿದ್ದುಪಡಿ ೧೯೭೬ರ) ಪ್ರದೇಶ ನಿರ್ಬಂಧ ರದ್ದುಪಡಿಸಿ ಈ ಜಾತಿಗಳನ್ನು ಕರ್ನಾಟಕ ರಾಜ್ಯಾದ್ಯಂತ ಪರಿಶಿಷ್ಟಜಾತಿ ಎಂದು ಪರಿಗಣಿಸಿದೆ. ಆನಂತರ ಭಾರತ ಸರ್ಕಾರದ ಗೃಹ ಸಚಿವಾಲಯವು ದಿನಾಂಕ; ೦೫-೧೦-೧೯೭೮ರ ತನ್ನ ಪತ್ರದ ಸಂಖ್ಯೆ: ಬಿ.ಸಿ. ೧೭೦೧೬/೩೭/೭೬/ಎಸ್.ಸಿ.ಎಸ್.ಟಿ.ಯಲ್ಲಿ ಲಂಬಾಣಿ, ಲಬಾಡಿ, ಸುಕಾಲಿ, ಸುಗಾಲಿ ಈ ಜಾತಿಗಳನ್ನು ಬಂಜಾರ್ ಲಂಬಾಣಿ ಜಾತಿಗಳ ಪರ್ಯಾಯ ಪದಗಳೆಂದು ಪರಿಗಣಿಸಲಾಗಿದೆ ಎಂದು ಸೂಚಿಸಿದೆ.

ಗೌರ್ನಮೆಂಟ್ ಆಫ್ ಕರ್ನಾಟಕ ರಿಪೋರ್ಟ್ ಆಫ್ ದಿ ಇಕ್ವಲೆಂಟ್ ನೇಮ್ಸ್ ಆಫ್ ನಾಮ್ಸ್ ಅಂಡ್ ಸಬ್‌ಜೆಕ್ಟ್ ಟ್ರೈಬ್ಸ್ ಇನ್ ದ ಎಸ್.ಸಿ.ಎಸ್.ಟಿ. (೧೯೮೦): ಮೇಲ್ಕಾಣಿಸಿದ ಬಂಜಾರ್ ಲಂಬಾಣಿ ಜಾತಿಗಳ ಪರ್ಯಾಯ ಸಮಾನ ಹೆಸರುಗಳನ್ನು ಗುರ್ತಿಸುವಲ್ಲಿ ಭಾರತ ಸರ್ಕಾರದ ಗೃಹ ಸಚಿವಾಲಯವು ಬಂಜಾರ್ ಲಂಬಾಣಿ ಜಾತಿಗಳ ಇತರ ಪರ್ಯಾಯ ಮತ್ತು ಸಮಾನ ಸಮುದಾಯದ ಜನರನ್ನು ಬಂಜಾರಿ, ವನಜಾತಿ, ಲಬಾಡಿ, ಗೋರೆ, ಗೋರಿಯಾರ್‌ಗಳು ಈ ಜಾತಿಗಳನ್ನು ಎ. ಗುಂಪಿನ ಹಿಂದುಳಿದ ಬುಡಕಟ್ಟು ಎಂದು ಪರಿಗಣಿಸಿದೆ. ಆದೇಶದ ಸಂಖ್ಯೆ: ನಂ. ಎಸ್.ಡಬ್ಲ್ಯೂ.ಎಲ್. ೬೬ ಬಿ.ಸಿ.ಎ. ೮೬, ದಿನಾಂಕ: ೧೩-೧೦-೧೯೮೬ರ ಸರ್ಕಾರಿ ಆದೇಶದಲ್ಲಿ ನಮೂದಿಸಲಾಗಿದೆ. ಆದರೆ ಕರ್ನಾಟಕ ಸರ್ಕಾರವು ಇತ್ತೀಚೆಗೆ ಬಂಜಾರಿ, ಬ್ರಜಾರಿಯಾ, ವನಜಾತಿ, ಲಬಾಡಿ, ಗೋರಿಯಾರ್ ಈ ಉಪಜಾತಿಗಳನ್ನು ಬಂಜಾರ್ ಲಂಬಾಣಿ ಜಾತಿಗಳ ಪರ್ಯಾಯ ಜಾತಿ ಸಮನಾರ್ಥ ಜಾತಿಗಳೆಂದು ಪರಿಗಣಿಸಲಾಗಿದೆ. ಜಾತಿ ಪತ್ರಗಳನ್ನು ಜಾತಿ ಮಾಡಲು

ಅಧಿಕಾರ ಇರುವ ತಹಸೀಲ್ದಾರರವರು ಸರ್ಕಾರಿ ಆದೇಶ ಸಂಖ್ಯೆ: ಎಸ್.ಡಬ್ಲ್ಯೂ.ಎಲ್. ೨೭೫/ಎಸ್.ಎ.ಡಿ. ೭೮, ದಿನಾಂಕ: ೨೭-೦೩-೧೯೭೮ರ ಆದೇಶವನ್ನು ಅನುಸರಿಸಿ ಲಬಾಡಿ, ಲಂಬಾಣಿ, ಸುಗಾಲಿ, ಸುಕಾಲಿ ಜಾತಿಗಳ ಜನರನ್ನು ರಾಷ್ಟ್ರಪತಿ ಆದೇಶದಲ್ಲಿರುವಂತೆ ಕರ್ನಾಟಕ ರಾಜ್ಯಾದ್ಯಂತ ಬಂಜಾರ್ ಲಂಬಾಣಿ ಜನರೆಂದು ಪರಿಗಣಿಸಿ, ಅವರಿಗೆ ಪರಿಶಿಷ್ಟ ಜಾತಿ ಪತ್ರವನ್ನು ಕೊಡಬೇಕೆಂಬುದಾಗಿ ಕರ್ನಾಟಕ ಸರ್ಕಾರ ಆದೇಶವನ್ನು ಹೊರಡಿಸಲಾಯಿತು. ಅನುಸೂಚಿಯ ಜಾತಿಗಳು ಅನುಸೂಚಿತ ಬುಡಕಟ್ಟುಗಳ ಅಮೆಂಡ್ ಮೆಂಟ್ ಆಕ್ಟ್ ೧೯೭೬ರ ಪ್ರಕಾರ ಬಂಜಾರ ಲಂಬಾಣಿ ಸಮುದಾಯವನ್ನು ಕೆಳಗೆ ಸೂಚಿಸಿರುವ ಕೆಲವು ಬಂಜಾರ್ ಸ್ಥಳೀಯ ಹೆಸರುಗಳ ಪ್ರಕಾರ ಷೆಡ್ಯೂಲ್‌ಗಳಲ್ಲಿ ಸೇರಿಸಿ ಕೇಂದ್ರ ಸರ್ಕಾರ ಪ್ರಕಟಿಸಿದೆ.

**೧೯೭೬ರ ಬುಡಕಟ್ಟು ತಿದ್ದುಪಡಿ ಕಾಯ್ದೆಯಂತೆ ಬಂಜಾರ ಸಮುದಾಯದವರನ್ನು ಗುರ್ತಿಸುವಿಕೆ**

| ಕ್ರ.ಸಂ. | ರಾಜ್ಯ | ಸ್ಥಳೀಯ ಹೆಸರುಗಳು | ಮೀಸಲಾತಿ |
|---|---|---|---|
| ೧. | ಆಂಧ್ರಪ್ರದೇಶ | ಸುಗಾಲೀಸ್, ಸುಕಾಲಿ, ಲಬಾಡೀಸ್ | ಪರಿಶಿಷ್ಟ ಪಂಗಡ |
| ೨. | ಬಿಹಾರ | ಬಂಜಾರ್, | ಪರಿಶಿಷ್ಟ ಪಂಗಡ |
| ೩. | ಗುಜರಾತ್ | ಚಾರಣ, ಚರಣ, ಗೀರ್ | ಪರಿಶಿಷ್ಟ ಪಂಗಡ |
| ೪. | ಒರಿಸ್ಸಾ | ಬಂಜಾರ್, ಬಂಜಾರಿ | ಪರಿಶಿಷ್ಟ ಪಂಗಡ |
| ೫. | ಪಶ್ಚಿಮ ಬಂಗಾಳ | ನಟ್, ತುರಿ, ತೂರಿ | ಪರಿಶಿಷ್ಟ ಪಂಗಡ |
| ೬. | ದೆಹಲಿ | ಬಂಜಾರ್, ಲಂಬಾಣ್, ಸಿರಕಿಬಾದ್ | ಪರಿಶಿಷ್ಟ ಜಾತಿ |
| ೭. | ಹಿಮಾಚಲ ಪ್ರದೇಶ | ಬಂಜಾರ್, ಬಜಿಗರ್, ನಟ್, ಸಿರಕಿಬಾದ್ | ಪರಿಶಿಷ್ಟ ಜಾತಿ |
| ೮. | ಕರ್ನಾಟಕ | ಬಂಜಾರ್, ಲಂಬಾಣೀಸ್ | ಪರಿಶಿಷ್ಟ ಜಾತಿ |
| ೯. | ರಾಜಸ್ಥಾನ್ | ಗವಾರಿಯಾ, ಬಧಿ, ಬಜಿಗರ್, ನಟ್‌ತುರಿ | ಪರಿಶಿಷ್ಟ ಜಾತಿ |
| ೧೦. | ಕೇರಳ | ಗವಾರ್ | ಪರಿಶಿಷ್ಟ ಜಾತಿ |
| ೧೧. | ಮಹಾರಾಷ್ಟ್ರ | ಬಂಜಾರ್, ಗಓರ್, ಲಮಾಣಿ, ಲಬಾನ್ | ಅವರ್ಗೀಕೃತ ಜಾತಿ |

| | | | |
|---|---|---|---|
| | | ಮತುರ, ಬ್ರಿಜಾರಿ, ಸಿಗಾಂಡಿಯಾ | ಹಿಂದುಳಿದ ಜಾತಿ |
| | | ಬ್ರುಜುವಾಸಿ, ನಾವಿ, ದಾಡಿ, ಡಾಲಿಯಾ | ಓ.ಬಿ.ಸಿ. |
| ೧೨. | ಮಧ್ಯಪ್ರದೇಶ | ಬಂಜಾರ್, ಗೋರ್, ಲಬಾನ್ | ಅವರ್ಗೀಕೃತ ಜಾತಿ |
| | | ಮತುರಾ, ಗಮಾಲಿಯಾ, ವಂಜಾರಿ | ಹಿಂದುಳಿದ ಜಾತಿ |
| | | ಸಿರಕಿಬಾದ್, ಲದೇನಯಾ, ಬಾಮೇಲಿಯಾ | ಹಿಂದುಳಿದ ಜಾತಿ |
| ೧೩. | ಉತ್ತರ ಪ್ರದೇಶ | ಬಂಜಾರ್, ಬ್ರಿಜಾರಿ, ಗೋರ್ | ಅವರ್ಗೀಕೃತ ಜಾತಿ |
| | | ಡಾನ್‌ಪೂಟ್, ಪೂಟ್, ಲಬಾನ್ | ಹಿಂದುಳಿದ ಜಾತಿ |
| | | ಗವಾರಿಯಾ, ನಟ್, ಬಾಟ್, ಡ್ಯಾಡಿ | ಹಿಂದುಳಿದ ಜಾತಿ |
| ೧೪. | ತಮಿಳುನಾಡು | ಸುಗಾಲಿ, ಲಬಾಡಿ, ಬಂಜಾರ್, ಗೋರ್ | ಅವರ್ಗೀಕೃತ ಜಾತಿ |
| ೧೫. | ಗೋವಾ | ಲಮಾಣಿ, ಲಂಬಾಡಿ, ಬಂಜಾರ್, ಗೋರ್, ಸುಗಾಲಿ | ಅವರ್ಗೀಕೃತ ಜಾತಿ |
| ೧೬. | ಹರಿಯಾಣ | ಬಂಜಾರ್, ಗೋರ್, ಗ್ವಾರಾ, | ಅವರ್ಗೀಕೃತ |
| ೧೭. | | ಗವಾರಿಯಾ, ಲುಬಾನ್, ಬಣಜಿಗರ್, ನಟ್, ಸಿಲ್ಕಿಬಾದ್ | ಓ.ಬಿ.ಸಿ. |
| ೧೭. | ಪಂಜಾಬ್ | ಬಜಿಗರ್, ನಟ್, ಬಂಜಾರ್ | ಅನುಸೂಚಿತ ಜಾತಿ |
| | | ಗುವಾರಿಯಾ, ಲಬಾಣ್, ಸಿಲ್ಕಿಬಾದ್ | ಹಿಂದುಳಿದ ಜಾತಿ |
| ೧೮. | ತ್ರಿಪುರ | ಬಂಜಾರ್, ಗೋರ್, | ಅನುಸೂಚಿತ ಜಾತಿ |
| | | ಗೌರ್ | ಹಿಂದುಳಿದ ಜಾತಿ |
| ೧೯. | ಪಾಂಡಿಚೇರಿ | ಸುಗಾಲಿ, ಲಬಾಣಿ, | ಅನುಸೂಚಿತ ಜಾತಿ |
| | | ಗೋರ್, ಬಂಜಾರ್ | ಹಿಂದುಳಿದ ಜಾತಿ |
| ೨೦. | ಜಮ್ಮುಕಾಶ್ಮೀರ | ಬಂಜಾರ್, ಬಜೋರ್, ಗ್ವಾರ್ | ಅನ್ಯಸೂಚಿತ ಜಾತಿ |
| | | ಗೋರ್, ಬದಿ, ಬಣಜಿಗಾರ್, ಮತುರಾ | ಹಿಂದುಳಿದ ಜಾತಿ |

| ೨೧. ದಾದರ್‌ನಗರ/ | | |
|---|---|---|
| ಹಾವೇರಿ | ಬಂಜಾರ್, ಗೋರ್, | ಅನುಸೂಚಿತ ಜಾತಿ |
| | ಲಮಣಿ, ಲಬಡಿ | ಹಿಂದುಳಿದ ಜಾತಿ |

ದೆಹಲಿ, ಹಿಮಾಚಲ ಪ್ರದೇಶ, ಕರ್ನಾಟಕ, ರಾಜಸ್ಥಾನ ಕೇರಳಗಳಲ್ಲಿ ಮಾತ್ರ ಲಂಬಾಣಿಗರನ್ನು ಪರಿಶಿಷ್ಠ ಜಾತಿಗೆ ಸೇರಿಸಲಾಗಿದೆ. ಭಾರತ ಸರ್ಕಾರವು ಬಂಜಾರನ ಕೆಲವು ಪ್ರಾಂತ್ಯಗಳಲ್ಲಿ ಪರಿಶಿಷ್ಠ ಜಾತಿಯ ಪಟ್ಟಿಯಲ್ಲಿ, ಇನ್ನೂ ಕೆಲವು ಪ್ರಾಂತ್ಯಗಳಲ್ಲಿ ಪರಿಶಿಷ್ಠ ಪಂಗಡ ಪಟ್ಟಿಯಲ್ಲಿ ಸೇರಿಸಿವೆ. ಆದರೆ ಅದೇ ಪ್ರಾಂತ್ಯಗಳಲ್ಲಿ ಬಂಜಾರರ ಇತರ ಸ್ಥಳೀಯ ಹೆಸರುಗಳನ್ನು ಸೇರಿಸಬೇಕಾಗಿದೆ. ಇನ್ನೂ ಕೆಲವು ಪ್ರಾಂತ್ಯಗಳಲ್ಲಿ ಬಂಜಾರರನ್ನು ಹಿಂದುಳಿದ ಜಾತಿಗೆ ಸೇರಿಸಿದ್ದಾರೆ.

ಇ.ಎ.ಹೆಚ್.ಬ್ಲಂಟ್ಸ್: ಬಂಜಾರ್ ದ ಕ್ಯಾಸ್ಟ್ ಸಿಸ್ಟಮ್ ಆಫ್ ನಾರ್ತ್ ಇಂಡಿಯಾ: ಬಂಜಾರದ ಒಂದು ಸಂಘಟನೆಯನ್ನು ಕುರಿತು ವಿಶ್ಲೇಷಿಸಿದ್ದಾರೆ. ಕರ್ನಾಟಕದ ಲಂಬಾಣಿ ಸಮುದಾಯದಲ್ಲಿ ಗೋರ್ ನ್ಯಾಯ ಪಂಚಾಯ್ತಿ, ಬಹುಹಿಂದಿನಿಂದಲೂ ಅಸ್ತಿತ್ವದಲ್ಲಿದೆ. ಈ ಸಮುದಾಯದ ಜನತೆ ತಮ್ಮದೇ ಆದ ವಿಶಿಷ್ಠ ರೀತಿಯ ಸಂಘಟನೆಯನ್ನು ಹೊಂದಿದ್ದರೂ ಅದು ಈಗಲೂ ಸಹಾ ಮುಂದುವರೆದುಕೊಂಡು ಬಂದಿದೆ. ಹಿಂದಿನ ಕಾಲದಲ್ಲಿ ಪ್ರತಿಯೊಂದು ಹಳ್ಳಿಗಲೂ ಹಾಗೂ ಒಂದೇ ಜಾತಿಗೆ ಸೇರಿದ ಜನರು ತಮ್ಮದೇ ಆದ ಸ್ವಜಾತಿಯ ಪಂಚಾಯತಿಗಳನ್ನು ಹೊಂದಿದ್ದವು. ಇದರಲ್ಲಿ ವಂಶಪಾರಂಪರ್ಯವಾಗಿ ಆಯ್ಕೆಯಾದ ಸದಸ್ಯರುಗಳನ್ನು ಒಳಗೊಂಡಿರುತ್ತಿತ್ತು. ಈ ಪಂಚಾಯ್ತಿ ಜನರಿಗೋಸ್ಕರ ಅನೇಕ ಕೆಲಸ ಕಾರ್ಯಗಳನ್ನು ಕೈಗೊಳ್ಳುತ್ತಿತ್ತು. ಲಂಬಾಣಿಗಳಲ್ಲಿ ಕಟ್ಟಿಕೊಳ್ಳುತ್ತಿದ್ದ ನ್ಯಾಯ ಸಭೆಯನ್ನು ಮಳಾವೋ ಎಂದು ಕರೆಯುತ್ತಿದ್ದು, ಈ ಸಭೆಯು ಹೆಚ್ಚು ಮಹತ್ವ ಸ್ಥಾನವನ್ನು ಪಡೆದ ನ್ಯಾಯ ಮಂಡಳಿಯಾಗಿತ್ತು. ಇದು ಲಂಬಾಣಿ ಜನರ ಆಂತರಿಕ ಬಾಹ್ಯ ಜಗಳಗಳನ್ನು ಪರಿಹರಿಸುತ್ತಿತ್ತು.

ಡಾ. ವೈ. ರೂಪ್ಲಾನಾಯಕ್ "ರಂಗು ರಂಗಿನ ಬಂಜಾರ್ ಜನಾಂಗ" ಕೃತಿಯಲ್ಲಿ ಬಂಜಾರ್ ನ್ಯಾಯ ಪಂಚಾಯ್ತಿಯ ಬಗ್ಗೆ ವಿಶ್ಲೇಷಿಸಿದ್ದಾರೆ. ಲಂಬಾಣಿ ನ್ಯಾಯ ಪಂಚಾಯ್ತಿ ಐದು ಜನ ಮುಖಂಡರುಗಳಿರುತ್ತಾರೆ. ಅವರೆಂದರೆ ಅಧ್ಯಕ್ಷ(ನಾಯಕ) ಕಾರ್ಯದರ್ಶಿ (ಕಾರುಬಾರಿ) ಹಿರಿಯ ವ್ಯಕ್ತಿ(ಡಾವೋ), ಪೂಜಾರಿ(ಭಗತ್) ಮತ್ತು ಪಂಚರು.ತಾಂಡಾಗಳಿಗೆ ಹುಟ್ಟುವ ಪ್ರತಿಯೊಂದು ತೊಂದರೆಗಳು ನಾಯಕರಿಂದಲೇ ಪರಿಹರಿಸಬೇಕೆಂಬುದು ಇವರ

ನಂಬಿಕೆ. ನಾಯಕನ ಪಟ್ಟ ವಂಶಪಾರಂಪರ್ಯವಾಗಿ ನಾಯಕನಾದವರು ಪ್ರಧಾನ ಅಧಿಕಾರಿಯಾಗಿ ರುತ್ತಾರೆ. ಉಳಿದ ಪಂಚಾಯತ್ ನಾಯಕರುಗಳು ನ್ಯಾಯ ಮಂಡಳಿಯಲ್ಲಿ ಆಸಕ್ತಿ ವಹಿಸಿ ವಿವಿಧ ಕೆಲಸ ನಿರ್ವಹಿಸುತ್ತಾರೆ. ನ್ಯಾಯ ಪಂಚಾಯ್ತಿಗೆ ಪ್ರತಿಯೊಂದು ಮನೆಯಿಂದಲೂ ಒಬ್ಬೊಬ್ಬ ಹಿರಿಯ ವ್ಯಕ್ತಿ ಹಾಜರಾಗಬೇಕು. ನ್ಯಾಯ ಪಂಚಾಯ್ತಿಯ ಹಿರಿಯ ವ್ಯಕ್ತಿ ನಾಯಕನಾಗಿರುತ್ತಾನೆ. ಈ ನಾಯಕನು ಬೇರೆ ಜಾತಿಯ ಗೌಡ ಪಟೇಲನಿಗೆ ಸಮನಾದ ವ್ಯಕ್ತಿ. ಇವನನ್ನು ಬಿಟ್ಟರೆ ಎರಡನೇ ವ್ಯಕ್ತಿಯೇ ಕಾರುಬಾರಿ, ಈ ಸ್ಥಾನ ಬೇರೆ ಹಳ್ಳಿಗಳಲ್ಲಿ ತಳವಾರನಿಗೆ ಸಮನಾದುದು. ನ್ಯಾಯದ ವೇಳೆಯಲ್ಲಿ ಪಂಚಾಯ್ತಿಯ ಪ್ರಮುಖರು ಒಬ್ಬರಿದ್ದರೂ ಜನರ ಅಪ್ಪಣೆಯ ಮೇರೆಗೆ ಕೆಲಸ ನಿರ್ವಹಿಸುತ್ತಾರೆ. ಒಂದು ವೇಳೆ ನಾಯಕನಿಲ್ಲದಿದ್ದರೂ ಬದಲಿಗೆ ಎರಡನೇ ಸ್ಥಾನದಲ್ಲಿರುವ ದಾವೋ ಮತ್ತು ಕಾರುಬಾರಿ ಸಭೆಯ ನಿರ್ಣಯಗಳನ್ನು ಕೈಗೊಳ್ಳುತ್ತಾರೆ. ಈ ನಾಲ್ಕು ಜನರಿಲ್ಲದೇ ನ್ಯಾಯ ಪಂಚಾಯ್ತಿ ನಡೆಸಲು ಸಾಧ್ಯವೇ ಇಲ್ಲ. ಏಕೆಂದರೆ ಇವರು ಸಾಂಪ್ರದಾಯ ಮುಖಂಡರೂ ಹೌದು. ಯಾವುದೇ ಒಂದು ನಿರ್ದಿಷ್ಟ ವಿಷಯಕ್ಕೆ ಸಂಬಂಧಪಟ್ಟಂತೆ ಎಲ್ಲಾ ವ್ಯಕ್ತಿಗಳು ಭಾಗವಹಿಸ ಬೇಕಾಗುತ್ತದೆ. ಈ ನ್ಯಾಯ ಪಂಚಾಯ್ತಿಯಲ್ಲಿ ರೂಢಿ ಪದ್ಧತಿಗಳು ಜಾತಿ ಸಂಪ್ರದಾಯಗಳು ನ್ಯಾಯ ನಿಷ್ಠೆ ಪ್ರಮುಖ ಪಾತ್ರವಹಿಸುತ್ತದೆ.

ನ್ಯಾಯ ಪಂಚಾಯ್ತಿ ಸಭೆಯು ಒಂದು ಪವಿತ್ರವಾದ ದೇವಸ್ಥಾನವೆಂದು ಭಾವಿಸುತ್ತಾರೆ. ಅದರ ಮುಂದೆ ಯಾರೂ ಸುಳ್ಳು ಹೇಳಲು ಪ್ರಯತ್ನಿಸುವುದಿಲ್ಲ. ಬಂಜಾರಿ ಭಾಷೆಯಲ್ಲಿ ಅದನ್ನು ಪೆರರ್ ಬಂದೂ ದೇವಳ್‌ನಾಯಕ್, ದೇವಳ್ ಕತೋ, ಪಂಚ್ ಪಂಜ್ವಾತ್, ರಾಜ್ ಎಜೋರಿ ಸಬ್, ಸಕಳ ಕಛೇರಿ ನಾಯಕ್ ಎಂದು ಹೇಳುತ್ತಾರೆ. ಎಂದರೆ ಗೋರ್ ಪಂಚಾಯ್ತಿಯು ಒಂದು ದೇವಸ್ಥಾನಕ್ಕೆ ಸಮಾನ. ಅಲ್ಲಿನ ತೀರ್ಮಾನಗಳೆಲ್ಲಾ ಶ್ರೀರಾಮನ ಹೆಸರಿನಲ್ಲಿ ನ್ಯಾಯ ಸಮ್ಮತವೂ ನಿಷ್ಪಕ್ಷಪಾತವೂ ಆಗಿರುತ್ತದೆ ಎಂಬುದು ಎಲ್ಲರ ನಂಬಿಕೆ.

ಜೆ.ಹೆಚ್.ಹಂಟನ್ ಅವರು "ಬಂಜಾರ್ ಕ್ಯಾಸ್ಟ್ ಇನ್ ಇಂಡಿಯಾ" ಎಂಬ ಕೃತಿಯಲ್ಲಿ ಶ್ರೇಣಿ ವ್ಯವಸ್ಥೆಯನ್ನು ವಿಶ್ಲೇಷಿಸಿದ್ದಾರೆ. ಗೋರ್ ಪಂಚಾಯ್ತಿಯಲ್ಲಿ ಶ್ರೇಣಿ ಬದ್ಧ ವ್ಯವಸ್ಥೆ ಇದ್ದು, ಅನೇಕ ಹುದ್ದೆಗಳಿವೆ. ಅದರಲ್ಲಿ ನಾಯಕ, ಕಾರುಬಾರಿ, ಡಾವೋ ಮತ್ತು ಪಂಚರು ಈ ನಾಲ್ಕು ಬಗೆಯ ಪ್ರಮುಖರನ್ನು ಗೋರ್ ಪಂಚಾಯ್ತಿ ಒಳಗೊಂಡಿದೆ. ಇವರಿಗೆ ಸಹಾಯಕ್ಕಾಗಿ ಗಾಲಿಯಾ, ಡ್ಯಾಡಿ, ನಾವಿ, ಪಂಚಾಯತ್ ಕಾರ್ಯನಿರ್ವಹಣೆಯಲ್ಲಿ ಪಾಲ್ಗೊಳ್ಳುತ್ತಾರೆ. ಅವರು ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ. ಗೋರ್

ಪಂಚಾಯತ್ ಒಂದು ವಿಶಿಷ್ಟ ಬಗೆಯ ಸಂಘಟನೆಯಾಗಿದ್ದು, ಇದರಲ್ಲಿ ಸಾಮಾನ್ಯವಾಗಿ ನಾಯಕನ ಪಾತ್ರ ಪ್ರಮುಖವಾಗಿರುತ್ತದೆ. ಲಂಬಾಣಿ ಬುಡಕಟ್ಟಿನಲ್ಲಿ ಅತಿಮುಖ್ಯವಾಗಿ ಎರಡು ಗೋತ್ರಗಳಿವೆ. ಬೂಕಿಯಾ ಮತ್ತು ಜಾತ್ ಎಂದು ವಿವರಿಸಿದ್ದಾರೆ.

ಡಾ. ಪಿ.ಕೆ. ಖಂಡೋಬಾ ಅವರು "ಕರ್ನಾಟಕದ ಲಂಬಾಣಿಗಳು" ಒಂದು ಸಾಂಸ್ಕೃತಿಕ ಅಧ್ಯಯನದ ಕೃತಿಯಲ್ಲಿ ಗೋರ್ ಪಂಚಾಯ್ತಿಯ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಭಾರತೀಯ ಬುಡಕಟ್ಟುಗಳ ಸಾಮಾಜಿಕ ವ್ಯವಸ್ಥೆಯಲ್ಲಿ ಪಂಚಾಯ್ತಿ ವ್ಯವಸ್ಥೆಯು ವ್ಯಾಪಕ ಜನಪ್ರಿಯತೆ ಪಡೆದಿದೆ. ಕುಲದವರ ಮಟ್ಟದಲ್ಲಿ ಹುಟ್ಟು ಕ್ಲೇಷ, ಸಂಘರ್ಷ ಸಮಸ್ಯೆಗಳನ್ನು ಬುಡಕಟ್ಟು ನ್ಯಾಯ ಪಂಚಾಯ್ತಿಗಳ ಮೂಲಕ ಬಗೆಹರಿಸಿಕೊಳ್ಳುತ್ತವೆ. ರಜಪೂತ್ ಬಂಡಾರ್ ಬಿಲ್ಲಾರ್, ಅಕ್ಕಿಪಿಕ್ಕಿ ಲಂಬಾಣಿ ಇವೇ ಮೊದಲಾದ ಅನೇಕ ಬುಡಕಟ್ಟುಗಳಲ್ಲಿ ಪಂಚಾಯ್ತಿ ವ್ಯವಸ್ಥೆಯು ಇಂದಿಗೂ ಜೀವಂತವಾಗಿದೆ. ಲಂಬಾಣಿಗರು ತಮ್ಮ ಈ ಜಾತಿ ಪಂಚಾಯ್ತಿಗೆ ಗೋರ್ ಪಂಚಾಯ್ತಿ ಎಂದು ಕರೆಯುತ್ತಾರೆ. ಪೂರ್ವದಿಂದಲೂ ತಮ್ಮ ಸಮಾಜದಲ್ಲಿ ಸಂಭವಿಸುವ ಯಾವುದೇ ಜಗಳ ಹಿಂಸೆ, ಅತ್ಯಾಚಾರ ಮೊದಲಾದವುಗಳನ್ನು ತಮ್ಮಲ್ಲಿಯೇ ಬಗೆಹರಿಸಿಕೊಳ್ಳುತ್ತಾ ಬಂದಿದ್ದಾರೆ. ತಮ್ಮಲ್ಲಿ ಉದ್ಭವಿಸುವ ಯಾವುದೇ ಒಳಜಗಳ ಜಟಿಲ ಸಮಸ್ಯೆಗಳನ್ನು ಎಲ್ಲಾ ಪ್ರಸಂಗದಲ್ಲಿಯೂ ಅನ್ಯ ಸಮಾಜದವರಿಗೆ ತಿಳಿಯಪಡಿಸುವುದಿಲ್ಲ. ಕಾರಣ ತಾಂಡಾದ ಮೇಲಿರುವ ಅಭಿಮಾನ ಆತ್ಮಗೌರವವನ್ನು ಕಾಪಾಡಿಕೊಳ್ಳುವುದಕ್ಕಾಗಿ ಸಮಾಜದ ಹಿತದೃಷ್ಟಿ ಯಿಂದಲೂ ಬಂಜಾರರು ರಹಸ್ಯವನ್ನು ಬಯಲು ಮಾಡದೇ ಯಾವ ವಿಷಯವಿದ್ದರೂ ತಮ್ಮ ಸಮಾಜದಲ್ಲೇ ಬಗೆಹರಿಸಿಕೊಳ್ಳುವ ವಿವೇಕಶಾಲಿಗಳಾಗಿದ್ದಾರೆ.

ಹೆಚ್.ಎಂ. ಜಾನ್ಸನ್: "ಸೋಷಿಯಾಲಜಿ ಎ ಸಿಸ್ಟಮೆಟಿಕ್ ಇಟ್ರೊಡಕ್ಷನ್" ಎಂಬ ಕೃತಿಯಲ್ಲಿ ಮಾನವನ ಸಂಘಟನೆ ಕುರಿತು ವಿಶ್ಲೇಷಿಸಿದ್ದಾರೆ. ಮಾನವನು ಸಂಘ ಜೀವಿ ಮತ್ತು ಸಮಾಜ ಜೀವಿ ಅವನು ಸದಾ ಸಮೂಹದಲ್ಲಿರಲು ಪ್ರಯತ್ನಿಸುತ್ತಾನೆ. ಅನೇಕ ಸಂಘಟನೆಗಳನ್ನು ರಚಿಸಿಕೊಂಡು ಅವುಗಳ ಮೂಲಕ ತನ್ನ ಆಸೆ–ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಆದುದ್ದರಿಂದಲೇ ಮಾನವ ಸಮಾಜದಲ್ಲಿ ಇಂತಹ ಸಂಘಟನೆಗೆ ಒಂದು ವಿಶಿಷ್ಟ ಸ್ಥಾನವಿದೆ. ಪ್ರಾಚೀನ ಕಾಲದಿಂದ ಸಂಘಟನೆ ತನ್ನದೇ ಆದ ಮಹತ್ವವನ್ನು ಉಳಿಸಿಕೊಂಡು ಬಂದಿದೆ. ಇಂತಹ ಸಂಘಟನೆಯು ಅಂತರ್ ಕ್ರಿಯೆಯ ವ್ಯವಸ್ಥೆಯ ಒಂದು ಭಾಗವಾಗಿದೆ ಎನ್ನುವುದು ಹೆಚ್.ಎಂ.ಜಾನ್ಸನ್ ಅವರ ಅಭಿಪ್ರಾಯವಾಗಿದೆ. ಡಂಕನ್ ಮಿಸೆಲ್ಲಾರವರು ಸಾಮಾಜಿಕ ಸಂಘಟನೆ ಎಂದರೆ ವಿವಿಧ ಭಾಗಗಳ ಪರಸ್ಪರ ಅವಲಂಬನೆ. ಇಂದು ಬಹುಕಾಲ ಬರುವಂತಹ ಎಲ್ಲಾ ಬಗೆಯ ಸಮೂಹಗಳು, ಸಮುದಾಯಗಳು, ಸಮಷ್ಟಿಯ ಸಮಾಜದ ಪ್ರಮುಖ ಲಕ್ಷಣವಾಗಿದೆ.

ಎ.ಎಸ್. ಪ್ರಭಾಕರ್ ಅವರು ಸಂಪಾದಕೀಯ ಸಂಚಿಕೆಯಾದ ಬುಡಕಟ್ಟು ಅಭಿವೃದ್ಧಿ ಮಿಮಾಂಸೆಯಲ್ಲಿ ಪ್ರೊ. ಎಚ್.ಡಿ. ಪ್ರಶಾಂತ್ ಅವರು ಲಂಬಾಣಿಗರ ಅಭಿವೃದ್ಧಿಯಲ್ಲಿ ರೈತಾಪಿಕರಣದ ಪಾತ್ರ ಕುರಿತು ವಿಶ್ಲೇಷಿಸಿದ್ದಾರೆ. ಸುಮಾರು ೧೦೦ ವರ್ಷಗಳಿಗೂ ಹೆಚ್ಚಿನ ಅವಧಿಯ ಲಂಬಾಣಿಗರಲ್ಲಿ ಆದ ಆರ್ಥಿಕ ಬದಲಾವಣೆಗಳನ್ನು ಸಾದರಪಡಿಸಲಾಗಿದ್ದು, ರೈತಾಪಿಕರಣ ಪ್ರಕ್ರಿಯೆಯಲ್ಲಿ ಬ್ರಿಟೀಷರು ನೇರ ಆಡಳಿತವನ್ನು ಭಾರತದಲ್ಲಿ ಪ್ರಾರಂಭಿಸಿದ ಮೊದಲ ಹಂತದಲ್ಲಿ ಯಾಂತ್ರಿಕತೆ, ಸಾರಿಗೆ ಮತ್ತು ರೈಲ್ವೆಯನ್ನು ಪ್ರಾರಂಭಿಸಿದರು. ಇದರ ಮೂಲಕ ರಸ್ತೆಗಳನ್ನು ಅಭಿವೃದ್ಧಿ ಪಡಿಸಿದರು. ಇದರಿಂದ ಲಂಬಾಣಿಗರು ಪಾರಂಪರಿಕವಾಗಿ ದನ ಮತ್ತು ಬಂಡಿಯ ಮೂಲಕ ನಡೆಸಿಕೊಂಡು ಬಂದಿದ್ದ ಸರಕು ಮತ್ತು ಸಾಗಾಣಿಕೆಯನ್ನು ಕೈಬಿಡಬೇಕಾಯಿತು. ೧೯೪೯ರಲ್ಲಿ ಭಾರತ ಸರ್ಕಾರವು ಅಪರಾದ ಬುಡಕಟ್ಟು ಎಂದು ಪರಿಗಣಿಸುವುದನ್ನು ಬಿಟ್ಟು ಎಲ್ಲಾ ಸಾಮಾಜಿಕ ಸ್ಥಾನಮಾನಗಳನ್ನು ನೀಡಿತು. ಅಲ್ಲದೇ ಕರ್ನಾಟಕ ಸರ್ಕಾರವು ೧೯೭೭ ಜುಲೈ ತಿಂಗಳಲ್ಲಿ ಲಂಬಾಣಿಗರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಿತು. ಇನ್ನೂ ಕೆಲವು ರಾಜ್ಯ ಸರ್ಕಾರಗಳು ಪರಿಶಿಷ್ಟ ಪಂಗಡ ಎಂದು ಪಟ್ಟಿ ಮಾಡಿದವು. ಅದರಿಂದ ಲಂಬಾಣಿಗಳಿಗೆ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಉಪಯೋಗಿಸಿಕೊಳ್ಳಲು ಅವಕಾಶ ಕಲ್ಪಿಸಿತು. ಈ ದೆಸೆಯಲ್ಲಿ ಲಂಬಾಣಿಗರು ಸಾಮಾಜಿಕವಾಗಿ ಆರ್ಥಿಕವಾಗಿ ರಾಜಕೀಯವಾಗಿ ಅಭಿವೃದ್ಧಿಯಾಗಲು ವೇದಿಕೆ ಸೃಷ್ಟಿಯಾಯಿತು.

ಡಾ. ಪಿ.ಕೆ. ಖಂಡೋಬಾ ಅವರು "ಕರ್ನಾಟಕದ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ" ಕೃತಿಯಲ್ಲಿ ಅವರ ನಾಗರೀಕತೆ, ಪರಂಪರೆ, ಸಾಂಪ್ರದಾಯಿಕ ಇತಿಹಾಸ, ಆಂತರಿಕ ಸಮಾಜದ ರಚನೆ, ಕಸುಬು, ಕಲೆ, ಸ್ಥಾನಮಾನ, ಕೌಟುಂಬಿಕ ವ್ಯವಸ್ಥೆ, ಜನನ, ಮರಣ, ಮದುವೆಗಳು, ಸಂಸ್ಕಾರ ಪದ್ಧತಿ, ರೀತಿ-ರಿವಾಜು, ವೇಷಭೂಷಣ, ಆಹಾರ ಪಾನೀಯ ಪದ್ಧತಿಗಳು, ಹವ್ಯಾಸಗಳು ಮುಂತಾದ ಅಂಶಗಳಿಗೆ ಒತ್ತು ಕೊಟ್ಟಿದ್ದಾರೆ. **ಡಾ. ಸಣ್ಣರಾಮ್** ಅವರು ಲಂಬಾಣಿ ಬುಡಕಟ್ಟು ಹಿನ್ನೆಲೆಯಲ್ಲಿ ಅವರ ಪ್ರಾಚೀನತೆ ವ್ರತ, ಸಂಪ್ರದಾಯ, ಆಚರಣೆ, ಜಾನಪದ ಮತ್ತು ನ್ಯಾಯ ಪಂಚಾಯ್ತಿಯ ಬಗ್ಗೆ ಮಾಹಿತಿ ಸಂಗ್ರಹಿಸಿ ಅಧ್ಯಯನ ಮಾಡಿದ್ದಾರೆ. **ಡಾ. ಚಿದಾನಂದಮೂರ್ತಿ** ಅವರು ಲಂಬಾಣಿ ಜನ ಮತ್ತು ಅವರ ಭಾಷೆ ಎಂಬ ಲೇಖನ ಭಾಷಾ ದೃಷ್ಟಿಯಿಂದ ಲಂಬಾಣಿಗಳ ಇತಿಹಾಸ ಮತ್ತು ಸಾಮಾಜಿಕ ಜೀವನವನ್ನು ಪರಿಚಯಿಸುತ್ತದೆ. **ಡಾ. ಹೆಚ್.ಡಿ. ಲಮಾಣ** ಅವರ ಕರ್ನಾಟಕದ ಲಂಬಾಣಿ ಜಾನಪದ ಗೀತೆಗಳ ಸಾಹಿತ್ಯ ಅಧ್ಯಯನ (ಹಿಂದಿ) ಲಂಬಾಣಿಗಳ ಜಾನಪದ ಗೀತೆಗಳನ್ನು ಕೇಂದ್ರವಸ್ತುವನ್ನಾಗಿ ವಿಶ್ಲೇಷಿಸಿದ್ದಾರೆ. **ಶ್ರೀ ಬಸವರಾಜ್ ನೆಲ್ಲಿಸರ್**



P.T.O

(೧೯೭೭) ಅವರು **"ಲಂಬಾಣಿಗರು ಮತ್ತು ಬಗ್ಗರು"** ಎಂಬ ಕೃತಿಯಲ್ಲಿ ಎರಡು ಬುಡಕಟ್ಟಿನ ಜಾನಪದೀಯ ಅಧ್ಯಯನಕ್ಕೈಗೊಂಡು ಲಂಬಾಣಿಗರ ಜೀವನಕ್ಕೆ ಸಂಬಂಧಿಸಿದ ಕೆಲವು ವಿವರಣೆಗಳನ್ನು ಕೊಟ್ಟಿದ್ದಾರೆ. **ಶ್ರೀ ರೂಪ್ಲಾ ನಾಯಕ್** ಅವರ **"ರಂಗುರಂಗಿನ ಬಂಜಾರ್"** ಎಂಬ ಕೃತಿಯಲ್ಲಿ ಬಂಜಾರ್ ಜನಾಂಗದ ಮೂಲ, ಬಂಜಾರ್ ಸಮನಾರ್ಥ ಹೆಸರುಗಳು, ವೇಷ ಭೂಷಣಗಳು, ಸಾಂಪ್ರದಾಯಕ ಮದುವೆಶಾಸ್ತ್ರಗಳು, ಧಾರ್ಮಿಕ ಪದ್ಧತಿಗಳು, ಭಾಷೆ, ಹಬ್ಬ, ಹುಣ್ಣಿಮೆ, ನೃತ್ಯ, ಹಾಡುಗಳು, ಅಲ್ಲದೇ ಬಂಜಾರ್ ಸಮುದಾಯದ ಗೋರ್ ಪಂಚಾಯ್ತಿಯ ಸ್ಥೂಲ ಪರಿಚಯ ನೀಡಿದ್ದಾರೆ. **ಲಾರೆನ್ಸ್ ಡಿಸೋಜಾ(ಎಸ್.ಜೆ. ೧೯೯೭): "ಲಂಬಾಣೀಸ್" (ಆಂಗ್ಲ)** ಕೃತಿಯಲ್ಲಿ ಬಂಜಾರ್ ಸಮುದಾಯದ ದೈನಂದಿನ ಜೀವನವಿಧಾನ, ಜೀವನಮೌಲ್ಯ, ಬೌಧಿಕ ವಿಷಯಗಳ ಬಗ್ಗೆ ಸ್ಥೂಲವಾಗಿ ಪರಿಚಯವಿದೆ. **ಶ್ರೀ ಸೋಮಣ್ಣ ಹೊಂಗಳ್ಳಿ (೧೯೯೪) "ಲಂಬಾಣಿ ಜಾನಪದ ಕಥೆಗಳು"** ಎಂಬ ಕೃತಿಯಲ್ಲಿ ಲಂಬಾಣಿಗರ ಜಾನಪದ ವೈಶಿಷ್ಟ್ಯತೆಯನ್ನು ವಿವರಿಸಿದ್ದಾರೆ. **ಶ್ರೀ ಎ. ಬಾಲನಾಯಕ್ (೧೯೯೬)** ಅವರು **"ಬಂಜಾರ್ ಧರ್ಮದ ಸಾಮಾನ್ಯ ಜ್ಞಾನ"** ಎಂಬ ಪುಸ್ತಕವನ್ನು ಪ್ರಕಟಿಸಿ ಈ ಪುಸ್ತಕದಲ್ಲಿ ಬಂಜಾರರ ಧಾರ್ಮಿಕ ವಿಧಿ-ವಿಧಾನಗಳ ಬಗ್ಗೆ ವಿಶ್ಲೇಷಿಸಿದ್ದಾರೆ.

ಡಾ. ಕೆ.ಎಂ.ಮೈತ್ರಿ "ಬುಡಕಟ್ಟು ಕುಲಕಸುಬುಗಳು" ಸಂಪಾದಿಕತ್ವದಲ್ಲಿ ಕರ್ನಾಟಕದ ಬುಡಕಟ್ಟುಗಳು ಎಂಬ ಶೀರ್ಷಿಕೆಯಡಿಯಲ್ಲಿ ಬುಡಕಟ್ಟು ಎಂಬ ಪದಕ್ಕೆ ವಂಶಾನುಗತ ಲಕ್ಷಣಗಳನ್ನು ನಿರ್ಮಿಸಿದ್ದಾರೆ. ಬುಡಕಟ್ಟು, ಸಮುದಾಯ ಮತ್ತು ಜಾತಿಗಳನ್ನು ತಪ್ಪಾಗಿ ಜನಾಂಗ ಎಂದು ಸಂಭವಿಸುವುದುಂಟು, ವೈಜ್ಞಾನಿಕ ದೃಷ್ಟಿಯಲ್ಲಿ ಬುಡಕಟ್ಟು ಎಂಬ ಪದಕ್ಕೆ ಅನೇಕ ವಂಶಾನುಗತ ಲಕ್ಷಣಗಳನ್ನು ಸಮಾನವಾಗಿ ಪಡೆದಿರುವ ಜನರ ಗುಂಪು ಎಂದು ಉತ್ಪತ್ತಿಶಾಸ್ತ್ರಜ್ಞರು ಅರ್ಥನಿರೂಪಿಸಿದ್ದಾರೆ. ಆದರೆ ಬುಡಕಟ್ಟು ಎಂಬ ಪದವು ಜೀವಶಾಸ್ತ್ರಕ್ಕೆ ಮಾತ್ರ ಸೀಮಿತವಾಗಿದೆ ಎಂಬುದು ಮಾನವಶಾಸ್ತ್ರಜ್ಞರ ಕಲ್ಪನೆಯಾಗಿದೆ. ಮಾನವಶಾಸ್ತ್ರ ಅಭಿಪ್ರಾಯದಲ್ಲಿ ವಂಶಾನುಗತವಾಗಿ ಸಾಗಿ ಬಂದಿರುವ ದೈಹಿಕ ಲಕ್ಷಣಗಳನ್ನು ಸಮಾನವಾಗಿ ಪಡೆದಿರುವ ಜನರ ಗುಂಪು ಬುಡಕಟ್ಟು ಎನಿಸಿಕೊಳ್ಳುತ್ತದೆ. ಸಾಮಾನ್ಯವಾಗಿ ಮಾನವ ಬುಡಕಟ್ಟುಗಳನ್ನು ತಲೆಯ ಆಕಾರ, ಗಾತ್ರ, ಚರ್ಮದ ಬಣ್ಣ, ಸ್ವಭಾವ, ಕೂದಲಿನ ಬಣ್ಣ ಮತ್ತು ಲಕ್ಷಣಗಳ ಆಧಾರದ ಮೇಲೆ ಗುರ್ತಿಸುತ್ತಾರೆ. ಮಾನವ ಶಾಸ್ತ್ರಜ್ಞರು ಇಡೀ ಮಾನವ ಕೋಟಿಯನ್ನು ದೈಹಿಕ ಲಕ್ಷಣಗಳ ಆಧಾರದ ಮೇಲೆ ಶಾಸ್ತ್ರೀಯವಾಗಿ ಅಧ್ಯಯನ ಮಾಡಿ ಮೂರು ದೊಡ್ಡ ಬುಡಕಟ್ಟುಗಳಾಗಿ ವಿಭಜಿಸಿದ್ದಾರೆ.ಅವು ಯಾವುವೆಂದರೆ ಕಕೇಶಿಯನ್, ಮಂಗೋಲಿಯನ್ ಮತ್ತು ನೀಗ್ರೋ. ಈ ಪಂಗಡಗಳನ್ನು

ಕ್ರಮವಾಗಿ ಬಿಳಿಯರು, ಹಳದಿಯರು, ಕಪ್ಪು ಜನರು ಎಂದು ಕರೆಯುತ್ತಾರೆ. ಈ ಮೂರು ಬುಡಕಟ್ಟುಗಳನ್ನು ಮತ್ತೆ ಉಪ ಬುಡಕಟ್ಟು ಜನಾಂಗಗಳಾಗಿ ವಿಂಗಡಿಸಲಾಗಿದೆ. ನಾರ್ಡಿಕ್, ಮೆಡಿಟೇರಿಯನ್, ಆಲ್ಫೈನ್ ಇತ್ಯಾದಿಗಳು ಕಕೇಶಿಯನ್ ಜನಾಂಗದ ಉಪಜನಾಂಗ ಗಳಾಗಿವೆ. ಸರ್‌ಹರ್ಬರ್ಟ್ ರಿಸ್ಲೆಯವರು ಭಾರತೀಯ ಜನಾಂಗದವರನ್ನು ಈ ಕೆಳಗಿನಂತೆ ವಿಭಜಿಸಿದ್ದಾರೆ.

- ದ್ರಾವಿಡ ಪೂರ್ವ ಜನಾಂಗ ಬಿಲ್ ಕಾಡುಗಳಲ್ಲಿ ಬೆಟ್ಟಗಳಲ್ಲಿ ವಾಸಿಸುವರು.
- ದ್ರಾವಿಡ ಜನಾಂಗ ದಕ್ಷಿಣದ ಪರ್ಯಾಯ ದ್ವೀಪದಿಂದ ಗಂಗಾನದಿ ಕಣಿವೆಯವರೆಗೆ ವಿಸ್ತರಿಸಿರುವ ಜನಸಮುದಾಯಗಳು.
- ಇಂಡೋ ಆರ್ಯನ್ ಜನಾಂಗ ಕಾಶ್ಮೀರ, ಪಂಜಾಬ್, ರಾಜಪೂತಾನ್ ಭಾಗದ ಜನಸಮುದಾಯ.
- ಆರ್ಯದ್ರಾವಿಡ ಜನಾಂಗ ಗಂಗಾನದಿ ಕಣಿವೆಯ ಜನಸಮುದಾಯ.
- ಸೈಟೋ ದ್ರಾವಿಡ ಜನಾಂಗ
- ಮಂಗೋಲೈಡ್ ಅಸ್ಸಾಂ ಪೂರ್ವ ಹಿಮಾಲಯದ ಜನಸಮುದಾಯ.
- ಮಂಗೋಲೋ – ದ್ರಾವಿಡ ಜನಾಂಗ

### ೧.೮. ದಕ್ಷಿಣ ಕರ್ನಾಟಕದಲ್ಲಿ ಬಂಜಾರರು ಮತ್ತು ಐತಿಹಾಸಿಕ ಹಿನ್ನೆಲೆ

ಬಂಜಾರರು ಮೂಲತಃ ಉತ್ತರ ಭಾರತದ ರಾಜಪುರಾಣ(ರಾಜಸ್ಥಾನ) ಮೂಲದವ ರಾಗಿದ್ದು ಈ ಸಮುದಾಯ ಜನರು ಬೇರೆ ಬೇರೆ ಕಾರಣದಿಂದ ದೇಶದ ವಿವಿಧ ರಾಜ್ಯ ಗಳಲ್ಲಿ ಹರಡಿಕೊಂಡಿದ್ದಾರೆ. ೨೦೦ ವರ್ಷಗಳ ಹಿಂದೆ ವ್ಯಾಪಾರದ ನಿಮಿತ್ತ ಭಾರತಕ್ಕೆ ಬಂದು ವ್ಯಾಪಿಸಿದ್ದಾರೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹರಡಿಕೊಂಡಿರುವ ಬಂಜಾರರು (ಲಂಬಾಣಿ) ಭಾರತದಲ್ಲಿ ೫ ಕೋಟಿಕ್ಕಿಂತ ಹೆಚ್ಚು ಇದ್ದಾರೆ. ದೇಶದ ಬೇರೆ ಬೇರೆ ಪ್ರಾದೇಶಿಕ/ರಾಜ್ಯಗಳಲ್ಲಿ ಬಂಜಾರರನ್ನು ವಿಭಿನ್ನ ಹೆಸರುಗಳಿಂದ ಕರೆಯಲಾಗುತ್ತದೆ. ಸಾಮಾಜಿಕ ವಾಗಿ, ಆರ್ಥಿಕವಾಗಿ ಹಿಂದುಳಿದಿದ್ದು, ಸಾಂಸ್ಕೃತಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಪ್ರಾದೇಶಿಕವಾಗಿ ಭಿನ್ನ ಉದ್ಯೋಗ/ಕಸುಬುಗಳಲ್ಲಿ ತೊಡಗಿದ್ದರಿಂದಾಗಿ ಅವರನ್ನು ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗಿದೆ.

೨೦೧೧ರ ಜನಗಣತಿಯಂತೆ ಕರ್ನಾಟಕದ ಒಟ್ಟು ಜನಸಂಖ್ಯೆ, ೬,೧೧,೩೦,೭೦೪ ಹೊಂದಿದ್ದು, ಇವರಲ್ಲಿ ಪರಿಶಿಷ್ಟ ಜಾತಿಯವರ ಜನಸಂಖ್ಯೆಯು ೮೫,೬೪,೪೩೮ (೧೬.೨೦%), ಗ್ರಾಮದಲ್ಲಿ ವಾಸವಾಗಿರುವವರು ೬೪,೧೭,೭೪೩ ನಗರದಲ್ಲಿ ೨೧,೪೬,೬೮೭ ದಕ್ಷಿಣ ಕರ್ನಾಟಕದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ಒಟ್ಟು ೫೦,೭೭,೩೦೩ (೧೬.೭೭%) ಇವರಲ್ಲಿ ಗ್ರಾಮೀಣ ಜನಸಂಖ್ಯೆ ೩೬,೯೧,೭೦೧ ಆಗಿದ್ದು ನಗರದಲ್ಲಿ ಜನಸಂಖ್ಯೆಯು ೧೩,೮೫,೬೦೨ರಷ್ಟು ಇರುತ್ತಾರೆ. ಪರಿಶಿಷ್ಟ ಜಾತಿಗಳ ಗುಂಪಿನಲ್ಲಿ ೧೦೧ ಜಾತಿ, ಉಪಜಾತಿಗಳು ಸೇರಿಕೊಂಡಿವೆ. ಆದಿ ಕರ್ನಾಟಕ, ಆದಿ ದ್ರಾವಿಡ, ಹೊಲಯ, ಛಲವಾದಿ, ಮಹಾರ್, ಮಾದಿಗ, ಸಮರಾರ, ಡೋರಾ, ಬಂಜಾರ ಮತ್ತು ಬೋವಿ ಇವುಗಳು ಪರಿಶಿಷ್ಟ ಜಾತಿಗಳ ಪೈಕಿ ಪ್ರಧಾನವಾದವುಗಳು.

ಕರ್ನಾಟಕ ರಾಜ್ಯವು ೩೦ ಜಿಲ್ಲೆಗಳಿಂದ ಕೂಡಿದ್ದು, ಇದನ್ನೂ ಉತ್ತರದ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕ ಜಿಲ್ಲೆಗಳೆಂದು ಕರೆಯಲಾಗಿದ್ದು, ೨ ಪ್ರಾದೇಶಿಕ ಘಟಕಗಳಾಗಿ ಮಾಡಲಾಗಿದೆ. ಬಂಜಾರ ಸಮುದಾಯದ ಅಧ್ಯಾಯನಕ್ಕಾಗಿ, ಅದರಲ್ಲೂ ಮಾನವಶಾಸ್ತ್ರೀಯ ಅಧ್ಯಾಯನಕ್ಕಾಗಿ ಚಿತ್ರದುರ್ಗ, ಚಿಕ್ಕಮಗಳೂರು, ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ದಕ್ಷಿಣ ಕರ್ನಾಟಕವು ದಕ್ಷಿಣದಲ್ಲಿ ಕೇರಳ/ತಮಿಳುನಾಡು ರಾಜ್ಯಗಳಿಂದ ಆವೃತ್ತವಾಗಿದ್ದು, ಪೂರ್ವದಲ್ಲಿ ಆಂಧ್ರಪ್ರದೇಶ, ಪಶ್ಚಿಮದಲ್ಲಿ ಅರಬ್ಬೀಸಮುದ್ರದ ಪಶ್ಚಿಮ ಘಟ್ಟ ಕರಾವಳಿ ಪ್ರದೇಶದಿಂದ ಆವೃತ್ತಗೊಂಡಿವೆ. ಬಂಜಾರರು ಕರ್ನಾಟಕಕ್ಕೆ ವಲಸೆ ಬಂದವರಾಗಿದ್ದು, ೧೯೭೫ರ ಹಾವನೂರು ಪ್ರಕಾರ ೩.೫೩.೮೮೨ ಬಂಜಾರ (ಲಂಬಾಣಿ) ಇದ್ದಾರೆ. ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ವಾಸವಾಗಿದ್ದಾರೆ. ಚಿತ್ರದುರ್ಗ, ಬಿಜಾಪುರ, ಬಳ್ಳಾರಿ, ಶಿವಮೊಗ್ಗ ಜಿಲ್ಲೆ, ಅತಿಹೆಚ್ಚು ಜನ ಬಂಜಾರರು ವಾಸವಾಗಿದ್ದಾರೆ. ಮೈಸೂರು, ಮಂಡ್ಯ, ಕೊಡಗು, ದಕ್ಷಿಣ ಕನ್ನಡ ಜಿಲ್ಲೆ ಅತಿ ಕಡಿಮೆ ಜನರು ನೆಲೆಸಿದ್ದಾರೆ. ದಕ್ಷಿಣ ಕರ್ನಾಟಕದ ಜಿಲ್ಲೆಯಾದ ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಚಿಕ್ಕಮಗಳೂರು ಜಿಲ್ಲೆ ಅತಿಹೆಚ್ಚು ಜನರು ನೆಲೆಸಿದ್ದಾರೆ. ಇವರ ವಾಸ ವಿಶೇಷವಾಗಿ ನಗರ ಗ್ರಾಮಗಳಿಂದ ದೂರವಾಗಿ ತಾಂಡಾಗಳಲ್ಲಿ ವಾಸಿಸುತ್ತಾರೆ.

ಕರ್ನಾಟಕ ಸರ್ಕಾರದ ಸಂಸ್ಥೆಯಾದ ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ ಬೆಂಗಳೂರು ವರದಿಯ ಪ್ರಕಾರ, ಕರ್ನಾಟಕದಲ್ಲಿ ಬಂಜಾರು ವಾಸಿಸುವ ತಾಂಡಗಳ ಸಂಖ್ಯೆ ೨೭೭೦ರಷ್ಟಿದೆ. ಈ ತಾಂಡಗಳ ಒಟ್ಟು ಜನಸಂಖ್ಯೆ ೧೧,೨೪,೪೪೪ ಆಗಿದೆ. ಅತಿ

ಹೆಚ್ಚು ತಾಂಡಗಳ ಸಂಖ್ಯೆ ಗುಲ್ಬರ್ಗಾ ಜಿಲ್ಲೆಯಲ್ಲಿದ್ದೂ ತಾಂಡಗಳ ಸಂಖ್ಯೆ ೫೬೨ ಆಗಿದೆ. ಆ ತಾಂಡಗಳ ಜನಸಂಖ್ಯೆ ೨,೩೩,೮೪೨ರಷ್ಟಿದೆ. ಕರ್ನಾಟಕದ ಬಂಜಾರರ ಜನಸಂಖ್ಯೆಯಲ್ಲಿ ಗುಲ್ಬರ್ಗಾ ಬಂಜಾರ ಜನಸಂಖ್ಯೆ(ಶೇ. ೨೦ರಷ್ಟಿದೆ). ತುಮಕೂರು ಜಿಲ್ಲೆಯಲ್ಲಿ ೧೪೯ ತಾಂಡಗಳಿದ್ದೂ ಈ ತಾಂಡಗಳ ಜನಸಂಖ್ಯೆ ೪೦,೭೩೧ರಷ್ಟಿದೆ. (ಶೇ. ೩.೬೨ರಷ್ಟಾಗಿದೆ). ಚಿತ್ರದುರ್ಗ ಜಿಲ್ಲೆಯಲ್ಲಿರುವ ಬಂಜಾರ್ ತಾಂಡಾಗಳ ಸಂಖ್ಯೆ ೧೨೯ ಆಗಿದ್ದೂ ಈ ತಾಂಡಾಗಳಲ್ಲಿ ವಾಸಿಸುವ ಜನರ ಸಂಖ್ಯೆ ೭೮೦೭೭ರಷ್ಟಾಗಿದೆ. (ಶೇ. ೬.೯೪ರಷ್ಟಿದೆ). ಚಿಕ್ಕಮಗಳೂರು ಜಿಲ್ಲೆಯಲ್ಲಿ ೧೨೭ ತಾಂಡಾಗಳಿದ್ದೂ ಈ ತಾಂಡಗಳಲ್ಲಿ ವಾಸಿಸುವ ಜನರ ಸಂಖ್ಯೆ ೩೧೮೧೪ ಆಗಿದೆ. ಶೇ. ೨.೮೩ರಷ್ಟಾಗಿದೆ.

೧೯೯೧ರ ಜನಗಣತಿಯ ಪ್ರಕಾರ ಲಂಬಾಣಿಗರ ಜಿಲ್ಲಾವಾರು ಜನಸಂಖ್ಯೆಯನ್ನು ವಿಶ್ಲೇಷಿಸಲಾಗಿದೆ. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದ ಒಟ್ಟು ಜನಸಂಖ್ಯೆ ೪೪,೯೭೭,೨೦೧ ಅದರಲ್ಲಿ ಪರಿಶಿಷ್ಟ ಜಾತಿಗೆ ಸೇರಿದವರ ಸಂಖ್ಯೆ: ೭,೬೯,೨೭೧ ಆಗಿದ್ದು, ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ ೧೬.೩೮ರಷ್ಟು ಪರಿಶಿಷ್ಟ ಜಾತಿಗೆ ಸೇರಿದವರಿದ್ದಾರೆ. ಕರ್ನಾಟಕದಲ್ಲಿ ಲಂಬಾಣಿಯವರು ಒಟ್ಟು ಜನಸಂಖ್ಯೆ ೮,೨೩,೫೦೫ ಶೇಕಡಾ ೧.೮ರಷ್ಟು ಇದ್ದಾರೆ. ಪರಿಶಿಷ್ಟ ಜಾತಿಯ ಶೇಕಡಾ ೧೧.೧೭ರಷ್ಟಿದ್ದಾರೆ. ಕರ್ನಾಟಕದ ಲಂಬಾಣಿ ಜನಸಂಖ್ಯೆ ಜಿಲ್ಲಾವಾರು ಹಂಚಿಕೆ ಸಮಪ್ರಮಾಣದಲ್ಲಿಲ್ಲ. ಕೆಲವು ಜಿಲ್ಲೆಗಳಲ್ಲಿ ಕಡಿಮೆ ಹಂಚಿಕೆ ಯಾಗಿರುತ್ತದೆ. ಗುಲ್ಬರ್ಗಾದಲ್ಲಿ ಅತೀ ಹೆಚ್ಚು ಸಂಖ್ಯೆಯ ೧,೬೬,೪೬೬ ಲಂಬಾಣಿ ಗರಿದ್ದಾರೆ. ಅತೀ ಕಡಿಮೆ ಸಂಖ್ಯೆಯಲ್ಲಿ ೧೫೦ ಲಂಬಾಣಿಗಳು ಕೊಡಗು ಜಿಲ್ಲೆಯಲ್ಲಿದ್ದಾರೆ. ಲಂಬಾಣಿಗರು ಸಂಖ್ಯೆಯಲ್ಲಿ ಮಾತ್ರವಲ್ಲದೇ ಕರ್ನಾಟಕದ ವಿವಿಧ ಭಾಗಗಳಲ್ಲಿ ವಾಸಿಸುತ್ತಿರುವ ಲಂಬಾಣಿಗರ ಆಚಾರ-ವಿಚಾರ ಸಾಂಪ್ರದಾಯಿಕತೆ, ಆಧುನಿಕತೆ, ಸಾಕ್ಷರತಾ ಪ್ರಮಾಣ ಮುಂತಾದ ವಿಷಯಗಳಲ್ಲಿ ವೈವಿಧ್ಯತೆ ಕಂಡುಬರುತ್ತವೆ.

**೨೦೧೦-೧೧ರ ಜನಗಣತಿಯ ಪ್ರಕಾರ ಕರ್ನಾಟಕದ ಬಂಜಾರರ ಜಿಲ್ಲಾವಾರು ಜನಸಂಖ್ಯೆ ಹಂಚಿಕೆ**

| ಕ್ರಸಂ. | ಜಿಲ್ಲೆ | ಬಂಜಾರರ ಜನಸಂಖ್ಯೆ |
|---|---|---|
| ೧. | ಶಿವಮೊಗ್ಗ | ೬೭,೯೭೮ |
| ೨. | ಚಿತ್ರದುರ್ಗ | ೪೯,೬೦೫ |
| ೩. | ದಾವಣಗೆರೆ | ೧,೫೩,೩೧೨ |

| | | |
|---|---|---|
| ೪. | ತುಮಕೂರು | ೪೯,೭೮೦ |
| ೫. | ಬೆಂಗಳೂರು ಗ್ರಾಮಾಂತರ | ೭,೭೮೧ |
| ೬. | ಚಿಕ್ಕಮಗಳೂರು | ೪೯,೫೧೩ |
| ೭. | ಬಿಜಾಪುರ | ೨,೬೨,೬೭೮ |
| ೮. | ದಾರವಾಡ | ೧೫,೪೬೩ |
| ೯. | ಹಾವೇರಿ | ೮೩,೯೯೯ |
| ೧೦. | ಗುಲ್ಬರ್ಗ | ೨,೭೦,೯೬೦ |
| ೧೧. | ಬಳ್ಳಾರಿ | ೧,೫೭,೨೨೯ |
| ೧೨. | ರಾಯಚೂರು | ೧,೦೨,೯೯೨ |
| ೧೩. | ಕೊಪ್ಪಳ | ೫೧,೩೨೨ |

ಕರ್ನಾಟಕದ ಲಂಬಾಣಿಗಳ ಜನಸಂಖ್ಯೆಯ ಬಗ್ಗೆ ಬೆಂಗಳೂರು ವಿಭಾಗ, ಮೈಸೂರು ವಿಭಾಗ, ಬೆಳಗಾವಿ ವಿಭಾಗ ಮತ್ತು ಗುಲ್ಬರ್ಗಾ ವಿಭಾಗದ ಜನಗಣತಿಯ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಕರ್ನಾಟಕ ತಾಂಡ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರ ತಾಂಡಗಳ ಸಮೀಕ್ಷೆಯ ಕ್ರೋಡೀಕರಣ ಮತ್ತು ಪ್ರಗತಿ ವರದಿಯ ಪ್ರಕಾರ ೨೦೦೯–೧೦ರಿಂದ ೨೦೧೨–೧೩ರವರೆಗೆ ಚಿಕ್ಕಬಳ್ಳಾಪುರ, ಚಿತ್ರದುರ್ಗ, ಚಿಕ್ಕಮಗಳೂರು ಜಿಲ್ಲೆಯ ಒಟ್ಟು ಜನಸಂಖ್ಯೆಯು ಈ ಕೆಳಕಂಡಂತಿದೆ.

| ಕ್ರ.ಸಂ. | ಜಿಲ್ಲೆ | ಬಂಜಾರರ ಜನಸಂಖ್ಯೆ |
|---|---|---|
| ೧. | ಚಿಕ್ಕಬಳ್ಳಾಪುರ | ೨೭,೦೫೬ |
| ೨. | ಚಿತ್ರದುರ್ಗ | ೪೯,೬೦೫ |
| ೩. | ಚಿಕ್ಕಮಗಳೂರು | ೪೯,೫೧೩ |

೧೯೫೬ರಲ್ಲಿ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದು ರಾಜ್ಯದ ಈಗಿನ ಗಡಿಗಳು ಹಿಂದಿನ ಕರ್ನಾಟಕದ ಗಡಿಗಳೆಂದು ಹೇಳಬಹುದಾಗಿದೆ. ಭಾಷಾವಾರು ಪ್ರಾಂತ್ಯ ಯೋಜನೆಯ ಪ್ರಕಾರ ರಚಿತವಾದ ಮೈಸೂರು ರಾಜ್ಯದಲ್ಲಿ ಸುಮಾರು ೧೭೦ ಭಾಷೆಗಳಿರುವುದಾಗಿ ೧೯೬೧ರ ಜನಗಣತಿ ತಿಳಿಸುತ್ತದೆ. ಈ ಭಾಷಾ ಸಮೂಹದಲ್ಲಿ ನಮ್ಮ ದೃಷ್ಟಿಯಿಂದ

ಮುಖ್ಯವೆನಿಸುವ ಹನ್ನೊಂದು ಭಾಷೆಗಳನ್ನು ಪರಿಶೀಲನೆಗೆ ತೆಗೆದುಕೊಳ್ಳಬಹುದಾಗಿದೆ. ೧೯೬೧ರ ಜನಗಣತಿಯ ಪ್ರಕಾರ ಮೈಸೂರು ರಾಜ್ಯದ ಒಟ್ಟು ಜನಸಂಖ್ಯೆ ೨,೩೫,೮೬,೭೭೨ ಭಾಷೆಗಳನ್ನು ಮಾತನಾಡುವ ಜನಸಂಖ್ಯೆಯನ್ನು ತೋರಿಸಿದೆ. ಕನ್ನಡ ೧,೫೩,೭೧,೭೫೩ ತೆಲುಗು–೨೦,೪೭,೩೭೯, ಉರ್ದು ೨೦,೩೪,೪೮೨, ಮರಾಠಿ ೧೦,೫೬,೪೯೮, ತಮಿಳು ೮,೫೭,೨೨೭, ತುಳು ೮,೫೦,೪೭೪, ಕೊಂಕಣಿ ೪೯೧೫೩೫ ಮಲಯಾಳಂ ೨,೯೦,೫೮೯ ಹಾಗೂ ಬಂಜಾರಿ ಭಾಷೆಯನ್ನು ಆಡುವ ೨,೮೮,೦೧೨ ಜನರಿದ್ದಾರೆ.

ರಾಜಸ್ಥಾನಿಯ ಉಪಭಾಷೆಗಳಲ್ಲಿ ಒಂದಾದ ಬಂಜಾರಿಯು ಬಹುಮುಖ್ಯವಾದ ಗಿರಿಜನಾಂಗವೊಂದರ ಭಾಷೆಯಾಗಿದೆ. ಭಾರತ ಜನಗಣತಿಯು ಲಂಬಾಣಿ, ಲಂಬಾಡಿಯನ್ನು ರಾಜಸ್ಥಾನಿಯ ಇನ್ನೊಂದು ಉಪಭಾಷೆ ಎಂದು ಪಟ್ಟಿ ಮಾಡಿದೆ. ಮೈಸೂರಿನ ಬಹುಭಾಗಗಳಲ್ಲಿ ಬಂಜಾರರನ್ನು ಲಂಬಾಣಿಗಳೆಂದು ಕರೆಯುತ್ತಾರೆ. ಬಂಜಾರಿ, ಲಂಬಾಣಿ, ಎರಡು ವಾಸ್ತವವಾಗಿ ಒಂದೇ ಭಾಷೆಗೆ ಕೊಟ್ಟ ಎರಡು ಹೆಸರುಗಳಾಗಿದ್ದು, ಇದರಲ್ಲಿ ಔಪಚಾರಿಕ ವ್ಯತ್ಯಾಸಗಳಿವೆ.

**ಬಂಜಾರರ ಐತಿಹಾಸಿಕ ಹಿನ್ನೆಲೆ**

ಪ್ರಸ್ತಾವನೆಯ ಮೊದಲ ಭಾಗದಲ್ಲಿ ಬಂಜಾರರ ಚಾರಿತ್ರಿಕ ಹಿನ್ನಲೆಯ ಚಿತ್ರಣ ನೀಡಲಾಗಿದೆ. ಭಾರತ ಬಹುಜನಾಂಗೀಯ ರಾಷ್ಟ್ರವಾಗಿದ್ದು, ಅನೇಕ ಸಂಸ್ಕೃತಿ ಹಾಗೂ ಉಪಸಂಸ್ಕೃತಿಯನ್ನು ಹೊಂದಿದೆ.ಇಲ್ಲಿ ಪ್ರತಿ ಜನಾಂಗವು ತನ್ನದೇ ಆದ ರೂಢಿ, ಸಂಪ್ರದಾಯ ಗಳನ್ನು ಹೊಂದಿರುವುದು ಅಷ್ಟೇ ಅಲ್ಲದೆ, ಅದನ್ನು ಪಾಲಿಸಿಕೊಂಡು ಬಂದಿದೆ. ಅತ್ಯಂತ ವ್ಯವಸ್ಥಿತವಾಗಿ ಸಂಘಟಿತವಾದ ಜನಾಂಗಗಳಲ್ಲಿ ಬಂಜಾರ ಸಮುದಾಯವೂ ಒಂದು. ಅನೇಕ ಹೆಸರುಗಳಿಂದ ಗುರ್ತಿಸಲ್ಪಡುವ ಈ ಸಮುದಾಯಕ್ಕೆ ಸೇರಿದ ಜನರು ಭಾರತಾದ್ಯಂತ ಕಂಡುಬರುತ್ತಾರೆ. ಇವರನ್ನು ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಗುರುತಿಸಲಾಗಿದೆ. ಇವರ ಮೂಲತಃ ಸಂಚಾರಿ ಜನಾಂಗ. ಗುಂಪುಗಳಲ್ಲಿ ಈ ಜನರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದರು. ಅವರು ದಕ್ಷಿಣ ಕರ್ನಾಟಕ, ಆಂಧ್ರಪ್ರದೇಶ ಹಾಗೂ ಮಹಾರಾಷ್ಟ್ರಗಳಲ್ಲಿ ಎಲ್ಲಿಂದ ಯಾವಾಗ ಬಂದರು ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಮೌಖಿಕ ಪರಂಪರೆ, ಜನಪದ ಗೀತೆ ಹಾಗೂ ಕಥೆಗಳಲ್ಲಿ ಪೃಥ್ವಿರಾಜ್ ಚೌವ್ಹಾಣ್, ಅಲ್ಹಾಉದಲ್, ಜಯಮಲ್, ಪತ್‌ಮಲ್ ಮುಂತಾದ ವೀರ ಶಿರೋಮಣಿಗಳ ಶೌರ್ಯ, ಪರಾಕ್ರಮಗಳ ವರ್ಣನೆ ಬರುತ್ತದೆ. ಹಾಗೆಯೇ ಕನ್ನೋಜ, ಅಜ್ಮೀರ್, ದೆಹಲಿ ಮುಂತಾದ ಪ್ರಾಂತ್ಯಗಳ ಮೇಲೆ ವಿದೇಶಿಗರ

ಆಕ್ರಮಣ ಕುರಿತು ಅನೇಕ ಜನಪದ ಕಥೆಗಳು ಪ್ರಚಲಿತವಾಗಿವೆ. ಇದರಿಂದ ಬಂಜಾರರು ಮೂಲತಃ ಉತ್ತರ ಭಾರತೀಯ ಮೂಲದವರಾಗಿದ್ದಾರೆ.

ಬಂಜಾರ್ ಸಮುದಾಯದವರನ್ನು ಲಮಾನಿ, ಲಂಬಾಡಿ, ಲಡ್‌ಹರಿ, ಸುಗಾಲಿ, ವನ್‌ಜರ, ಬಂಜಾರ ಮತ್ತು ಲಬ್‌ಹಾನ್ ಎಂದು ಕರೆಯುತ್ತಾರೆ ಹಾಗೂ ದೇಶದಾದ್ಯಂತ ವಿವಿಧ ರಾಜ್ಯಗಳಲ್ಲಿ ಅವರು ಕಂಡುಬರುತ್ತಾರೆ. (ಕೆ.ಎಸ್.ಸಿಂಗ್ ೧೯೯೫ ಪು.೧೨೩), ಥರ್‌ಸ್ಟನ್(೧೯೦೯) ಅವರ ಪ್ರಕಾರ ಲಂಬಾಡಿಯವರನ್ನು ಲಂಬಾಣಿ, ಬ್ರಿನ್‌ಜಾರಿ ಅಥವಾ ಭೂಯಿಪಾರಿ, ಬಂಜಾರಿ, ಸುಗಾಲಿ, ಸುಕಾಲಿ ಎಂದು ಹೆಸರಿಸಲಾಗುತ್ತದೆ. ಗ್ರಿಯೂರ್‌ಸನ್‌ರವರ ಪ್ರಕಾರ ಬಂಜಾರರು ಪಶ್ಚಿಮ ಮತ್ತು ದಕ್ಷಿಣ ಭಾರತದಾದ್ಯಂತ ಕಂಡುಬರುವ ಪ್ರಮುಖ ಬುಡಕಟ್ಟು ಸಮುದಾಯವಾಗಿದೆ. ಕರ್ನಾಟಕದಲ್ಲಿ ಇವರನ್ನು 'ಬಂಜಾರ', 'ಲಂಬಾಣಿ' ಎಂದು ಅಧಿಸೂಚಿಸಲಾಗಿದೆ. ಗುವಾರ(Guwara) ಎಂದು ಕೂಡ ಕರೆಯುವ 'ಲಂಬಾಣಿ' ಪದವು ಸಂಸ್ಕೃತದ ವನಿಜಯ(Vanijya) ಅಥವಾ ಬನಿಜಯ(Banijya) ಎಂಬ ಪದಗಳಿಂದ ಉತ್ಪತ್ತಿಯಾಗಿದೆ. ಬನಿಜಯ ಎಂದರೆ ಟ್ರೇಡರ್ ಅಥವಾ ವ್ಯಾಪಾರಿ ಎಂದು ಅರ್ಥ ಅಥವಾ ಬನ್‌ಜಿ(Banji) ಅಂದರೆ ತಿರುಗುವ ವ್ಯಾಪಾರಿ 'ಚಿಲ್ಲರೆ ವ್ಯಾಪಾರಿ' ಎಂದೂ ಕೂಡ ಅರ್ಥ(ಕೆ.ಎಸ್.ಸಿಂಗ್ ಪು.೧೨೭). ಉತ್ತರದ ಹಿಂದೂಸ್ತಾನದ ಕೆಲವು ಕಡೆಗಳಲ್ಲಿ ಆಹಾರ ಧಾನ್ಯಗಳ ವ್ಯಾಪಾರವನ್ನು ಕೈಕೊಂಡಿದ್ದರಿಂದ 'ವರ್ಣಜಾರ'(ವರ್ಣಜ (ಸಂ) ಧಾನ್ಯ) 'ಬಣಜಾರ' ಎಂಬ ಹೆಸರುಗಳಿಂದ ಕರೆಯಲ್ಪಟ್ಟಿರುವ ಬಣ ಎಂದರೆ ಗುಂಪು- ಇವರು ಗುಂಪುಗಳಲ್ಲಿ ವಾಸಿಸುತ್ತಿದ್ದುದರಿಂದ ಇವರನ್ನು 'ಬಣಜಾರರು' ಎಂದೂ ಕರೆದಿರಬೇಕು (ನಾಯಕ ೧೯೮೬:೫) 'ವಾಣಿಜ್ಯ' ಎಂಬ ಶಬ್ಧವು ಪ್ರಾಂತೀಯ ಭಾಷೆಗೆ ಸಿಲುಕಿ ಅಪಭ್ರಂಶ ಗೊಂಡು ಬನಜಾರಾ(ರಾಜಸ್ಥಾನೀ), ವನಜಾರಾ(ಗುಜರಾತಿ) ಜನಜಾರ(ಉರ್ದು), ಬಂಜಾರಿ(ಮರಾಠಿ) ಎಂಬುದಾಗಿ ಕರೆಯಲ್ಪಟ್ಟಿರಬೇಕು(ರಾಠೋಡ ೧೯೭೧:೨೮೬). ಇವೆಲ್ಲವೂ ಸ್ಥಾನೀಯ ಭಾಷೆಗಳ ಪರಿಣಾಮದಿಂದಲೇ ಹೀಗಾಗಿವೆ. ವನ+ಚರ=ವನಚರ, ಅಂದರೆ ಅಡವಿಯಲ್ಲಿ ಸಂಚರಿಸುವವರು. ಸಂಚಾರಿಗಳಾದ ಲಂಬಾಣಿಗರು ವ್ಯಾಪಾರಕ್ಕಾಗಿ ತಮ್ಮ ಜಾನುವಾರುಗಳ ಮೇಲೆ ಸಾಮಾನುಗಳನ್ನು ಹೇರಿಕೊಂಡು ಅಡವಿಯ ಮುಖಾಂತರವಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದುದರಿಂದ ಇವರು ವನಚರ-ವನಚಾರ-ವನಜಾರಾ-ಬನಜಾರಾ-ಬಣಜಾರಾ-ಬಂಜಾರಾ ಎಂದು ಕರೆಯಲ್ಪಟ್ಟರು. ಹೀಗೆ ಬಂಜಾರ್ ಸಮುದಾಯದವರು ವಿಭಿನ್ನ ಹೆಸರುಗಳಿಂದ ಕರೆಯಲ್ಪಡುತ್ತಾರೆ.

ನಾಯಕರವರ ಪ್ರಕಾರ ಬಂಜಾರ ಎಂಬ ಪದದ ಪರ್ಯಾಯ ನಾಮಗಳು ಹೀಗಿವೆ; ಬಂಜಾರಾ ಬಣಜಾರಾ, ಬನಜಾರಾ, ಬಂಜಾರಿ, ಬ್ರಂಜಾರಿ, ಬಂಜಾರೆ, ಬ್ರಜವಾಸಿ, ಲಮಾಣಿ(ಲಂಬಾಣಿ) ಲಮಾನ, ಲಂಬಾಡಾ, ಲಂಬಾಡಿ, ಲಬಾನ ಅಥವಾ ಲಬಾಗಾ, ಲಭಾನ, ಲಭಾನಿ, ಲಭಾನಾ(ಲೋಭಾನಾ) ಬಳದಿಯ, ಲಾದೇನಿಯಾ(ಲದಣಿಯಾ) ಸುಗಾಲಿ, ಗವಾರಾ(ಗೌರಿಯಾ) ಗವಾರಿಯಾ, ಗಾವರಿಯಾ(ಗಮಳಿಯಾ), ಗಾವಾರಾ, ಕಂಗಿ(ಕಂಗಸಿಯಾ) ಘಾಣದ, ಶಿರಕಿಬಂದ, ಶಿಂಗಾಡೆ ಬಂಜಾರಿ, ಶಿರಕಿವಾಲಾ(ನಾಯಕ-೧೯೬೬:೨೨).

Crooke (1986) ಸೈನಿಕರಿಗೆ ಆಹಾರ ಧಾನ್ಯಗಳನ್ನು ಪೂರೈಸುವುದು ಬುಡಕಟ್ಟು ಸಮುದಾಯದವರಾದ ಬಂಜಾರ ಪ್ರಾಥಮಿಕ ವೃತ್ತಿಯಾಗಿತ್ತು ಹಾಗೂ ಹರಿಯಾಣ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿಯೂ, ಪಕ್ಕದ ರಾಜ್ಯಗಳಾದ ಹಿಮಾಚಲ ಪ್ರದೇಶ, ಪಂಜಾಬ್, ಮತ್ತು ಕೇಂದ್ರಾಡಳಿತ ಪ್ರದೇಶವಾದ ದೆಹಲಿ, ಪಂಜಾಬ್, ಮತ್ತು ಚಂಡಿಗಢಗಳಲ್ಲಿ ಇವರು ಕಂಡು ಬರುತ್ತಾರೆ(Crooke 1986).

ಮಹಾಕಾವ್ಯ ರಾಮಾಯಣದಲ್ಲಿ ಉಲ್ಲೇಖಿತವಾದ ವಾಲಿ ಮತ್ತು ಸುಗ್ರೀವ ಇವರು ನಮ್ಮ ಮೂಲಪುರಷ ಅಥವಾ ಅವರ ಸಂತತಿಯವರು, ಎಂದು ಬಂಜಾರರುಹೇಳಿಕೊಳ್ಳುತ್ತಾರೆ. ಬಂಜಾರರ ಬಗ್ಗೆ ಅನೇಕ ದಂತಕಥೆಗಳಿವೆ ಅವುಗಳಲ್ಲಿ ಕೆಲವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ದಂತಕಥೆ ಒಂದು-ಸುಗ್ರೀವನ ಸಂತತಿಯವರಾದ ಮೂಟ(Mota) ಮತ್ತು ಮೊಲ(Mola) ಇಬ್ಬರು ಸಹೋದರರು, ಗರಡಿ ಸಾಧನೆಯಲ್ಲಿ ಸಾಹಸ ಕಾರ್ಯ ಮಾಡಿ ನಿಪುಣನಾಗಿದ್ದ ಮೌಲಾ(Mola) ತನ್ನ ಹೆಂಡತಿ ರಾಧಳೊಂದಿಗೆ ರತನ್‌ಚ್(Rathanatch)ಗೆ, ಹೋಗೆ ಮೂವರು ರಾಜರುಗಳ ಮುಂದೆ ತನ್ನ ಕೌಶಲ್ಯವನ್ನು ಪ್ರದರ್ಶಿಸುತ್ತಾನೆ. ಅವರು ಮಾಲನ ಕೌಸಲ್ಯ ಮತ್ತು ರಾಧಳ ಲಾವಣ್ಯ, ಸೌಂದರ್ಯವನ್ನು ಹಾಗೂ ರಾಜರು ಕೇಳಿದ ವಾದ್ಯವನ್ನು (Drum or nagara) ನುಡಿಸಿದ್ದನ್ನು ಆಹ್ಲಾದಿಸಿದ್ದರು. ಪ್ರತಿ ರಾಜನಿಂದಲೂ ಒಬ್ಬ ಹುಡುಗನ್ನು ದತ್ತುವಾಗಿ, ತನ್ನ ಮಗನಂತೆ ಸ್ವೀಕರಿಸಬೇಕೆಂದು ಮೌಲನಿಗೆ ಆಜ್ಞಾಪಿಸಲಾಗಿತ್ತು. ಅದರಂತೆ ಮೌಲನು ಮೂರು ಹುಡುಗರನ್ನು ದತ್ತು ಸ್ವೀಕರಿಸುತ್ತಾನೆ. ಅವರ ಹೆಸರುಗಳೆಂದರೆ ಚಾವಿಯ (Chavia) ಲೋಹಿಯಾ ಪಂಚಾರ್(Lohia panchar) ರಾಥಡೆ(Ratade) ಎಂದು ಆಗಿತ್ತು. ಈ ಮೂವರು ಹುಡುಗರು ಬೆಳೆದು ದೊಡ್ಡವರಾಗಿ ಮಧುವೆಯಾದರೂ ರಾಥಡೆ(Ratade)ಯ ಹಿರಿಯ ಮಗ ಭೀಕ್ಯಾ(Bheekya)ನು ಬೂತ್ಯಾಯರು(Bhutyas) ಎನ್ನುವ ಕುಲವನ್ನು ಪ್ರಾರಂಭಿಸಿದನು ಮತ್ತು ಈ ಕುಲದಲ್ಲಿ – ಮೈಗಾವತ್(Maigavath), ಕುರುಮ್‌ತೋಥಸ್‌ರು

(Kurumtoths ಮತ್ತು ಕೋಲಾರು(Kholas) ಎಂಬ ಮೂರು ಸಣ್ಣ ಉಪ-ಪಂಗಡಗಳಿಗೆ ಜೀವಕಳೆ ತುಂಬಿದನು. ಲಂಬಾಡಿಯವರ ಪ್ರಮುಖ ವರ್ಗವೇ ಭ್ಯೂತ್ಯಾಯರು(Bhutyas) (Briggs 1819) ಮತ್ತು ನಂದುರಾಮ್(Nandu Ram) Encyclopaedia of Scheduled Castes in India (in 5 volumes) Vol-1 South Inida; 2007:84.

**ದಂತ ಕಥೆ-೨:** ಪ್ರಾರಂಭದಲ್ಲಿ ಲಂಬಾಣಿಗರು ದೊಂಬರಾಟದ ಮೂಲಕ ಒಂದು ಊರಿಂದ ಇನ್ನೊಂದು ಊರಿಗೆ ಅಲೆದಾಡುತ್ತ ಹಂದಿ, ನಾಯಿಗಳನ್ನು ಸಾಕಿಕೊಂಡು ಜೀವನಸಾಗಿಸುತ್ತಿದ್ದರು. ಇವರ ಜೀವನ ಮಟ್ಟ ಶೋಚನೀಯವಾಗಿದ್ದನ್ನು ಕಂಡ ಡಾಡಿಯು ಇವರ ಜೀವನ ಮಟ್ಟವನ್ನು ಸುಧಾರಿಸುವ ಸಲುವಾಗಿ ಖುರದಾಸಭಾವ ಎಂಬ ಗುರುವಿನ ಬಳಿಗೆ ಹೋಗಿ ಇವರ ಶೋಚನೀಯ ಆರ್ಥಿಕ ಪರಿಸ್ಥಿತಿಯನ್ನು ವಿವರಿಸಿ ಸರಿದಾರಿ ತೋರಿಸ ಬೇಕೆಂದು ಕೇಳಿಕೊಳ್ಳುತ್ತಾನೆ. ಆಗ ಖುರದಾಸ ಭಾವ ತೀನ್‌ಕಚ್ಚರ್(ಮೂರು ಹೆಸರಗತ್ತೆ) ಹಣವನ್ನು ಸಾಲದ ರೂಪದಲ್ಲಿ ಲಂಬಾಣಿಗರಿಗೆ ಕೊಟ್ಟು ವ್ಯಾಪಾರ ಮಾಡುವಂತೆ ಪ್ರೋತ್ಸಾಹಿಸುತ್ತಾನೆ. ಅಂದಿನಿಂದ ಇವರು ವ್ಯಾಪಾರ ವೃತ್ತಿಯನ್ನು ಆರಂಭಿಸಿದ್ದರು ಎಂದು ತಿಳಿದು ಬರುತ್ತದೆ. ಇದರ ಜೊತೆಗೆ ಲಂಬಾಣಿಗರು ಈ ಮೊದಲು ಬೇರೆ ವೃತ್ತಿಯನ್ನು ಮಾಡುತ್ತಿದ್ದರು ಎಂಬುದು ಸಹ ಈ ಐತಿಹ್ಯದಿಂದ ತಿಳಿದುಬರುತ್ತದೆ(ಜಿ.ಎಸ್.ಸಕ್ರೇನಾಯ್ಕ ೨೦೦೮).



ಬಂಜಾರರು ಕ್ರಿ.ಶ. ೪೦೦ ವರ್ಷಗಳ ಇತಿಹಾಸವನ್ನು ಹೊಂದಿದ್ದಾರೆ. ಎಡ್ಗರ್ ಥರ್ಸ್ಟನ್ ರವರು ತಮ್ಮ ಅಧ್ಯಯನದಲ್ಲಿ "ಬಂಜಾರು ಕ್ಷತ್ರೀಯರ ಮೂಲಕ್ಕೆ ಸಂಬಂದಿಸಿದವರೆಂದೂ, ಯುದ್ಧ, ಬೇಟೆ, ಕಾವಲು ಕಾಯುವುದರಲ್ಲಿ ನಿಪುಣರೆಂದೂ, ಬಂಜಾರಾ ಶಬ್ದ ಜಾತಿ ಸೂಚಕವಾಗಿರುವಂತೆ ವ್ಯವಸಾಯ ಸೂಚಕವಾಗಿದೆ ಎಂದು ಹೇಳುತ್ತಾರೆ. ಹಾಗೆಯೇ, ಲಂಬಾಡಿ, ಹಾಗೂ ಸುಗಾಲಿಗಳು ಒಂದೇ ಆಗಿದ್ದು, ಈ ಜನರು ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ಕಾಣಿಸುತ್ತಾರೆ. ಪಶುಪಾಲನೆ, ಭಾರ ಎತ್ತುವಿಕೆ, ಗೋರಕ್ಷಣೆ ಹಾಗೂ ವ್ಯಾಪಾರ ಮುಂತಾದ ವೃತ್ತಿಯನ್ನು ಅವಲಂಬಿಸಿದ್ದಾರೆಂದು ೧೮೯೧ರ ಮದ್ರಾಸ ಜನಗಣತಿಯಲ್ಲಿ ವಿವರಿಸಲಾಗಿದೆ(Thurston 1909:215 also See P.K.ಖಂಡೋಬಾ ೧೯೯೧ ಪು.೨೦). ಡಾ. ಎಂ.ಚಿದಾನಂದಮೂರ್ತಿ ಅವರು 'ಲಂಬಾಣಿ' ಎಂಬುದು ಅವರ ಜಾತಿಗೆ ಸಾಮಾನ್ಯವಾಗಿ ವಾಡಿಕೆಯಾಗಿರುವ ಹೆಸರು ತಮ್ಮದು ಬಣಜಾರ ಜಾತಿಯೆಂದು ಹೇಳುತ್ತಾರೆ. 'ಬಣಜಾರ' ಎಂಬುದು ಅವರು ವರ್ತಕರಾಗಿ ಇಲ್ಲಿಗೆ ಬಂದರೆಂಬುದನ್ನು ಸೂಚಿಸುತ್ತದೆ. ಅವರನ್ನು ಸುಕಾಲಿಗಳೆಂದೂ ಕೂಡ ಕರೆಯುತ್ತಾರೆ (೧೯೭೦:೨) 'ಬಣಜಾರು' ಉತ್ತರದಿಂದ ಬಹುಶಃ

ರಾಜಪುತಾಣದಿಂದ ದಕ್ಷಿಣಕ್ಕೆ ಬಂದು ನೆಲೆಸಿರುವವರು. ಇವರು ಸುಮಾರು ೨೦೦ ವರ್ಷಗಳ ಹಿಂದೆ, ೧೭ನೇ ಶತಮಾನದಲ್ಲಿ ಅಥವಾ ಅದಕ್ಕಿಂತ ಮುಂಚೆ ಮಹಮ್ಮದೀಯರ ಸೇನೆಯ ಜೊತೆಯಲ್ಲಿ ಬಂದರು. ಇವರ ಬಳಿ ಸಾವಿರಾರು ದನಕರುಗಳಿದ್ದವು. ಅಲೆಮಾರಿ ಗಳಾಗಿದ್ದ ಅವರು ಮಾರ್ಗ ಮಧ್ಯೆದಲ್ಲಿ ಪ್ರತ್ಯೇಕವಾಗಿ ಬಿಡಾರಗಳನ್ನು ಹೂಡುತ್ತಿದ್ದ ಪ್ರವೃತ್ತಿ ಈಗಲೂ ಅವರಲ್ಲಿ ಕಂಡುಬರುತ್ತದೆ(೧೯೭೦:೧೦). ಮೂಲತಃ ರಾಜಸ್ಥಾನದ ರಜಪೂತ ವಂಶದವರಾದ ಇವರು ರಾಜಸ್ಥಾನದಿಂದ ಮೊಘಲರ ಸೈನಿಕರ ಜೊತೆಗೆ ಇಲ್ಲಿಗೆ ಬಂದು ದೇಶದ ಪ್ರತಿಯೊಂದು ಕಡೆಗಳಲ್ಲಿ ಹರಡಿಕೊಂಡಿದ್ದಾರೆ. ಅಲೆಮಾರಿ ವರ್ತಕರಾದ ಇವರು ಹಿಂದೂಸ್ಥಾನದ ರಂಗಭೂಮಿಯ ಮೇಲೆ ವಾಸವಾಗಿರುವ ಸೈನ್ಯಗಳಿಗೆ ಆಹಾರ ಧಾನ್ಯಗಳನ್ನು ಪೂರೈಸುತ್ತಿದ್ದರೆಂದು ಮಿ॥ ಐರ್ವಿನ್ ವರದಿ ಮಾಡಿದ್ದಾರೆ.(Russel and Hiralal: 1961:161) ಲಂಬಾಣಿಗಳನ್ನು ವಣಜಾಂಗಗಳೆಂದೇ ಗುರುತಿಸುತ್ತಾರೆ. ಭಾರತದಲ್ಲಿ ರೈಲು ಮುಂತಾದ ವಾಹನ ಸೌಕರ್ಯಗಳು ಇಲ್ಲದ ಸಂದರ್ಭದಲ್ಲಿ ಅವರು ಆಹಾರ ಧಾನ್ಯವನ್ನು ಸರಬರಾಜು ಮಾಡುತ್ತಿದ್ದರು(ವೆಂಕಟರಂಗಂ ೧೯೫:೨೫). ಆದರೆ ಮುಂದೆ ಮೊಘಲರ ಆಳ್ವಿಕೆ ಕೊನೆ ಗೊಂಡು ಆಂಗ್ಲರು ಬಂದೊಡನೆ ರೈಲು ಮುಂತಾದ ವಾಹನ ಸೌಕರ್ಯಗಳು ಬಂದು ಲಂಬಾಣಿಗರ ವ್ಯಾಪಾರ ಸಂಪೂರ್ಣವಾಗಿ ನಿಂತು ಹೋಯಿತು. ಇದರಿಂದ ತುಂಬಾ ಹಾನಿ ಯನ್ನು ಅನುಭವಿಸಬೇಕಾಯಿತು(ನಂಜುಡಯ್ಯ: ೧೯೨೮: ೧೩೭). ಆರ್.ಇ. ಎಂಥೋವನ್ ಅವರು ಕೂಡ ಈ ಜನಾಂಗವು ಎತ್ತಿನ ಮೇಲೆ ವಸ್ತುಗಳನ್ನು ಹೇರಿಕೊಂಡು ವ್ಯಾಪಾರ ಮಾಡುವ ಇಂತಹ ಕಸುಬಿನಿಂದ ಇವರು ಬಂಜಾರರೆಂಬುದಾಗಿ ಹೆಸರು ಪಡೆದಿದ್ದರೂ ಇವರು ರಜಪೂತ, ಮರಾಠ ಮಹರ್ ಮತ್ತು ಇತರೆ ಅನೇಕ ಜಾತಿಗಳ ಸೇರ್ಪಡೆಯಿಂದಾದ ಮಿಶ್ರಿತ ಜನಾಂಗವೆಂದು ಖಚಿತವಾಗಿ ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಮಹರ್ ಎಂದರೆ ಮಹಾರಾಷ್ಟ್ರದಲ್ಲಿರುವ ಹರಿಜನರು. ಅದೇ ರೀತಿ ಮಧ್ಯಪ್ರದೇಶ ಮತ್ತು ಬಿಹಾರದ ಬಂಜಾರದ ಬಗ್ಗೆ ರೆಸಲ್, ಚಾರಣ್‌ರವರು ಬಂಜಾರರಲ್ಲಿದ್ದ ರಾಥೋಡ್, ಪವರ್, ಚವ್ಹಾಣ್, ಬಾಣ್ಣೋತ್ ಮತ್ತು ಜಾದವ್ ಎಂದು ಐದು ಗುಂಪುಗಳಿವೆ. ಇವೆಲ್ಲವೂ ರಜಪೂತರ ಮುಖ್ಯ ಗೋತ್ರಗಳಾಗಿವೆ ಎಂದಿದ್ದಾರೆ. ಆದರೆ ಆರ್.ಇ. ಎಂಥೋವನ್‌ರು ಅನೇಕ ಜಾತಿಗಳಿಂದ ಆದ ಮಿಶ್ರಣ ಜನಾಂಗವೆಂಬ ಅವರ ಮೊದಲನೇ ವಾದವನ್ನು ಬದಲಾಯಿಸಿ "ಬಂಜಾರರು ರಜಪೂತ ಗೋತ್ರಗಳಿಗೆ ಸೇರಿದವರೆಂಬುದು ಸ್ಪಷ್ಟವಾಗಿದೆ" ಎಂದು ಉಲ್ಲೇಖಿಸಿದ್ದಾರೆ(ಆರ್.ಇ.ಎಂಥೋವನ್:–The Tribes and cartis of Bombay, Vol-II).

ಡಬ್ಲ್ಯೂ. ಕ್ರೂಕ್‌ರವರು ಅಭಿಪ್ರಾಯದಂತೆ ವಾಯುವ್ಯ ಭಾರತದ ಜನಗಣತಿಯಲ್ಲಿ ಬಂಜಾರರನ್ನು ಚವ್ಹಾಣ್, ಬಹರೂಪ್, ಜಾದವ್, ರಾಥೋಡ್, ದುನವೇರ್, ಗುಆರ್ (ಗೋರ್) ಎಂದು ವಿಂಗಡಿಸಿ ಇವರೆಲ್ಲ ಬಹರೂಪ್ ಮತ್ತು ಗುಆರ್ ಬಿಟ್ಟು ಎಲ್ಲರೂ ರಜಪೂತ ಗೋತ್ರದವರೆಂದು ಸ್ಪಷ್ಟವಾಗಿದೆ. ಬಂಜಾರರು ಔದ್ ಮತ್ತು ಸುತ್ತಮುತ್ತಲಿನ ಜಿಲ್ಲೆಗಳಲ್ಲಿ ಅನೇಕ ಊರುಗಳಲ್ಲಿ ಆಸ್ತಿ-ಪಾಸ್ತಿಗಳನ್ನು ಹೊಂದಿದ್ದಾರೆಂದು ಪುರಾಣಗಳಿವೆ ಎಂದು ತಿಳಿಸಿದ್ದರು. ಬರೇರಿ ಇವರ ಮೂಲ ಸ್ಥಾನವಾಗಿದ್ದು, ಅಲ್ಲಿಂದ ಜಾಂಘ್ರಾ ರಜಪೂತರು ಓಡಿಸಿದರು(ಸೆಟಲ್‌ಮೆಂಟ್ ರಿಪೋರ್ಟ್ ೧೯). ಬಂಜಾರರನ್ನು ಕ್ರಿ.ಶ. ೧೮೨೧ರಲ್ಲಿ ಚಕ್ಲದಾರ್ ಹಕೀಮ್ ಮೆಹಂದಿ ಎಂಬುವನು ಸಿಜಾಲಿ ಪರಗಣದಿಂದ ಓಡಿಸಿದನು. ಅದೇ ಜಿಲ್ಲೆಯ ನಾಣಪರ ಪರಗದಿಂದ(೧೬೩೨ ಔದ್ ಗೆಜೆಬೆಯರ್ ೧೧೧ ಪುಟ-೬)ರ ಸೂರ್‌ಬಾನ್ ಆಫ್‌ಘನ್ ಬಂಜಾರರಿಗೆ ಕಿರುಕುಳ ಕೊಟ್ಟು ಓಡಿಸಿದನು. ಡೆಹರಾಡೂನಿನ ಕಥೆಯ ಪ್ರಕಾರ ಇವರು ಪಾಂಕವರ ಕಾಲದಲ್ಲಿದ್ದು ದಿಯೋಬಂದ್ ಪಟ್ಟಣವನ್ನು ಕಟ್ಟಿದ್ದರು ಎಂದು ಉಲ್ಲೇಖವಿದೆ. ಎಸ್.ಆರ್.ಕಾನಿಟ್ಕರ್ ಅವರು ತಮ್ಮ "The History of India" ಎಂಬ ಗ್ರಂಥದಲ್ಲಿ ಕ್ರಿ.ಪೂ ೬೦೦ರಿಂದ ೩೬೦ರಲ್ಲಿ ಬಂಜಾರರು ಭಾರತದ ಮೂಲೆ ಮೂಲೆಯಲ್ಲಿ ಹೋರಾಟದ ಮೂಲಕ ವ್ಯಾಪಾರ ಮಾಡುತ್ತಿದ್ದರು ಹಾಗೂ ಹೊರ ದೇಶಗಳಿಗೂ ಅವರ ವ್ಯಾಪಾರ ವ್ಯಾಪಕವಾಗಿ ಹರಡಿತ್ತು ಎಂದಿದ್ದಾರೆ. ಅಂದರೆ ೨೦೦೦-೩೦೦೦ ವರ್ಷಗಳ ಹಿಂದೆಯೇ ಅವರ ವ್ಯಾಪಾರ ವ್ಯಾಪಕವಾಗಿತ್ತು. ಎಂದ ಮೇಲೆ ಬಂಜಾರರು ಬಹಳ ಹಿಂದೆಯೇ ಜನಿಸಿರಬಹುದೆಂದು ಸ್ಪಷ್ಟವಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

ಮೇಲಿನ ವಿವರಣೆಗಳನ್ನು ಗಮನಿಸಿದಾಗ ಲಂಬಾಣಿಗಳು ಬಂಜಾರದ ಮೂಲ ನೆಲೆ ವಂಶದ ಬಗ್ಗೆ ಹಲವಾರು ದಂತಕಥೆಗಳು ತಮ್ಮದೇ ಆದ ವಿಭಿನ್ನ ಅಭಿಪ್ರಾಯಗಳನ್ನು ಹೊಂದಿರುತ್ತವೆ. ಹಾಗೆಯೇ ಶಾಸನಗಳು, ಗ್ರಂಥಗಳು, ಸಂಶೋಧನಾ ವರದಿಗಳು, ಬಂಜಾರರ ಐತಿಹಾಸಿಕ ಹಿನ್ನೆಲೆಯ ಮೇಲೆ ಬೆಳಕನ್ನು ಚೆಲ್ಲಿವೆ. ಆದರೆ ಅವುಗಳೆಲ್ಲವು ವಿಭಿನ್ನವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿರುವುದನ್ನು ಗಮನಿಸಬಹುದು.



ಅಧ್ಯಾಯ ಎರಡು

# ಬಂಜಾರ ಸಮುದಾಯದವರ ಜೀವನ ಪದ್ಧತಿ

೨.೧. ಬಂಜಾರರ ಸಾಂಸ್ಕೃತಿಕ ಹಿನ್ನೆಲೆ

೨.೨. ಬಂಜಾರರ ಸಮುದಾಯದ ವೈವಿಧ್ಯತೆಗಳು

೨.೩. ಬಂಜಾರರಲ್ಲಿ ಉಡುಗೆ ತೊಡಗೆಗಳು

೨.೪. ಬಂಜಾರ ಸಮುದಾಯದ ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳು

೨.೫. ಬಂಜಾರ ಸಮುದಾಯದ ಜಾನಪದ ವೈಶಿಷ್ಟ್ಯತೆಗಳು

೨.೬. ಬಂಜಾರ ಸಮುದಾಯಗಳಲ್ಲಿನ ಹಬ್ಬ ಆಚರಣೆಗಳು

೨.೭. ಬಂಜಾರರಲ್ಲಿ ಸಂಪ್ರದಾಯಿಕ ಆಹಾರ ಪದ್ಧತಿಗಳು

೨.೮. ಬಂಜಾರ ಸಮುದಾಯದಲ್ಲಿನ ಆರೋಗ್ಯ ಮತ್ತು ಚಿಕಿತ್ಸಾ ಕ್ರಮಗಳು

## ಅಧ್ಯಾಯ ಎರಡು

# ಬಂಜಾರ ಸಮುದಾಯದವರ ಜೀವನ ಪದ್ಧತಿ

**ಮಾ**ನವಶಾಸ್ತ್ರದಲ್ಲಿ ವಿವಿಧ ಜನಾಂಗಗಳ ಅಧ್ಯಯನವು ಮೌಖಿಕ ಪರಂಪರೆಯುಳ್ಳ ಜಾನಪದ ವ್ಯಾಪ್ತಿಯಲ್ಲಿ ಕಂಡುಬರುತ್ತದೆ. ಬಂಜಾರ ಅಥವಾ ಲಂಬಾಣಿ ಸಮುದಾಯಗಳಲ್ಲಿ ಕಂಡುಬರುವ ಜನರ ನಡೆ–ನುಡಿ, ಆಚಾರ–ವಿಚಾರಗಳು, ಜೀವನ ವಿಧಾನಗಳು, ಸಾಹಿತ್ಯ ಮತ್ತು ಕಲೆಗಳು ನೇರವಾಗಿ ಪರಂಪರೆಯಿಂದ ಬಂದವುಗಳಾಗಿವೆ. ಇದರ ಮೇಲೆ ಇತರೆ ಯಾವುದೇ ಪ್ರಕಾರ ಪ್ರೌಢ ಸಂಸ್ಕೃತಿಯಾಗಲೀ, ಸಾಹಿತ್ಯದ ಪ್ರಭಾವವಾಗಲಿ ಕಂಡುಬರುವುದಿಲ್ಲ. ಈ ಸಮುದಾಯದ ಬದುಕು ತಮ್ಮದೇ ಆದ ಕಟ್ಟುಪಾಡುಗಳ ಹಿನ್ನಲೆಯಿಂದ ಕೂಡಿರುತ್ತವೆ. ಪ್ರಾಚೀನ ನೈಜತೆಯ ನಡವಳಿಕೆಯನ್ನು ಈ ಸಮುದಾಯ ಉಳಿಸಿಕೊಂಡು ಬಂದಿದೆ. ಲಂಬಾಣಿ/ಬಂಜಾರರಲ್ಲಿನ ಜಾತಿ, ಉಪಜಾತಿಗಳು, ಹೆಣ್ಣು ಮಕ್ಕಳ ಉಡುಪು ಆಭರಣ, ಸ್ತ್ರೀಯರ ಉಡುಗೆ–ತೊಡುಗೆಗಳು, ಕುಶಲಕಲೆ, ಕಸೂತಿ ಕಲೆ, ಹಬ್ಬ–ಹರಿದಿನಗಳ ಸ್ವರೂಪ, ಸಂಪ್ರದಾಯ ಆಚರಣೆ, ಮುಂತಾಥ ವಿಷಯಗಳೆಲ್ಲವೂ ಸಾಂಸ್ಕೃತಿಕ ಜೀವನ ಪದ್ಧತಿಯ ಪ್ರತೀಕವೇ ಆಗಿದೆ.

ಯಾವುದೇ ಒಂದು ಜನಾಂಗದ ಅಧ್ಯಯನವೆಂದರೆ ಅವರು ರೂಢಿಸಿಕೊಂಡು ಬಂದ ಜೀವನದ ಮೌಲ್ಯಗಳೇ ಆಗಿದೆ. ಈ ದೃಷ್ಟಿಯಿಂದ ಪರಿಶಿಷ್ಟ ಜಾತಿಗೆ ಸೇರಿದ

ಬಂಜಾರರ ಜೀವನ ಮೌಲ್ಯಗಳೇ ಆ ಸಮುದಾಯದ ಸಾಂಸ್ಕೃತಿಕ ಅಧ್ಯಯನದ ಮೂಲ ಆಶಯವೆನಿಸಿದೆ.[೧] ಅವರ ಬದುಕಿನ ಸಮಗ್ರ ಅಂಶಗಳಲ್ಲಿ ಸಂಸ್ಕೃತಿ ಹಾಸು ಹೊಕ್ಕಾಗಿದೆ. ಈ ದೃಷ್ಟಿಯಿಂದ ಸಂಸ್ಕೃತಿ ಎಂದರೆ ಆಯಾ ಜನಾಂಗ ತಲೆತಲಾಂತರಗಳಿಂದ ರೂಪಿಸಿಕೊಂಡು ಬಂದ ಮೌಲ್ಯಗಳೇ ಆಗಿರುತ್ತದೆ. ಮಾನವ ವರ್ಗದಲ್ಲಿ ನಾವು ಸಂಸ್ಕೃತಿ ರಹಿತವಾದ ಯಾವುದೇ ಜನಾಂಗವನ್ನು ಕಾಣಲು ಸಾಧ್ಯವಾಗುವುದಿಲ್ಲ. ಮನುಷ್ಯನೆಂಬ ಪ್ರಾಣಿಯನ್ನು ಇನ್ನಿತರ ಜೀವಿಗಳಿಗಿಂತ ಭಿನ್ನವಾಗಿ ಗುರುತಿಸಲು ನಮಗಿರುವ ಆಧಾರವೇ ಸಂಸ್ಕೃತಿಯಾಗಿದೆ. ಇತರ ಜೀವಿಗಳಲ್ಲಿ ಸಾಮಾಜಿಕ ಸ್ವರೂಪಗಳನ್ನು ನಾವು ಅವುಗಳ ಜೈವಿಕ ಆಧಾರದಲ್ಲೇ ಗುರುತಿಸುವುದಾದರೆ, ಮಾನವ ಸಮಾಜವನ್ನು ಜೈವಿಕಕ್ಕಿಂತ ಹೆಚ್ಚಾಗಿ ಸಾಂಸ್ಕೃತಿಕ ಆಧಾರಗಳಲ್ಲಿ ಗುರುತಿಸಲಾಗುತ್ತದೆ. ಇದೇ ಕಾರಣದಿಂದಾಗಿಯೇ ಪ್ರಾಣಿ ಸಮಾಜವನ್ನು ಜೈವಿಕ ಸಮಾಜ ವೆಂದೂ, ಮಾನವ ಸಮಾಜವನ್ನು ಸಾಂಸ್ಕೃತಿಕ ಸಮಾಜವೆಂದೂ ಗುರುತಿಸಲಾಗುತ್ತದೆ. ಈ ಸಂಸ್ಕೃತಿಯ ಕಾರಣದಿಂದಾಗಿಯೇ ಮಾನವ ಎಲ್ಲಾ ಪ್ರಾಣಿಗಳಿಗಿಂತ ಮೇಲ್ಮಟ್ಟದವನಾಗಿ, ತನ್ನ ಬದುಕಿನಂತೆಯೇ ಇತರರ ಬದುಕನ್ನೂ ಗೌರವಿಸಿ ಸೌಹಾರ್ದ–ಸಾಮರಸ್ಯಗಳ ಮೂಲಕ ಸಹ ಜೀವನಕ್ಕೆ ಅವಕಾಶ ಮಾಡಿಕೊಟ್ಟಿದ್ದಾನೆ. ಸಂಸ್ಕೃತಿಯನ್ನು ಮಾನವನು ಪ್ರಯತ್ನಪೂರ್ವಕವಾಗಿ ರೂಢಿಸಿಕೊಳ್ಳುವುದರಿಂದ ವ್ಯಕ್ತಿ ತನ್ನಲ್ಲಿರುವ ಪ್ರಚ್ಛನ್ನ ಶಕ್ತಿಯನ್ನು ಬಳಸಿಕೊಂಡು ತನ್ನ ಹಾಗೂ ಸಮಾಜದ ಅಭಿವೃದ್ಧಿಗೆ ಶ್ರಮಿಸುತ್ತಾನೆ.

ಸಂಸ್ಕೃತಿಯನ್ನು ಕುರಿತ ವೈಜ್ಞಾನಿಕವಾದ ಅಧ್ಯಯನ ನಡೆದಿರುವುದು ಮಾನವ ವಿಜ್ಞಾನದಲ್ಲಿ, ಮಾನವ ವಿಜ್ಞಾನಿಗಳು ಬಳಸುವ Culture ಎಂಬ ಪದವನ್ನೇ ಕನ್ನಡದಲ್ಲಿ 'ಸಂಸ್ಕೃತಿ' ಎಂದು ಬಳಸುತ್ತಿದ್ದೇವೆ. ಮಾನವ ಶಾಸ್ತ್ರದ ಪಿತಾಮಹರೆಂದು ಖ್ಯಾತರಾದ ಇ.ಬಿ. ಟೈಲರ್ ಎಂಬ ವಿದ್ವಾಂಸರು ತಮ್ಮ ಪ್ರಿಮಿಟೆವ್ ಕಲ್ಚರ್(೧೮೭೧) ಎನ್ನುವ ಗ್ರಂಥದಲ್ಲಿ ಮೊದಲ ಬಾರಿಗೆ Culture ಎಂಬ ಪದವನ್ನು ಹೆಚ್ಚು ನಿಖರ ಹಾಗೂ ವ್ಯಾಪಕಾರ್ಥದಲ್ಲಿ ಬಳಸಿರುತ್ತಾರೆ. Culture or civilization is that complex whole which includes knowledge, belief, art, morals, law, custom and any other capabilities and habits acquired by man as a member of the society" (Tayler E.B. Page 25). ಅಂದರೆ ಸಮಾಜದ ಒಬ್ಬ ಜೀವಿಯಾಗಿ ಮಾನವ ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ, ವರ್ಗಾಯಿಸುವ, ಹಂಚಿಕೊಳ್ಳುವ, ಹಾಗೂ ಗೌರವಿಸುವ ಕ್ರಿಯೆಗಳ ಆಲೋಚನೆಗಳ ಮೌಲ್ಯಗಳ ಮತ್ತು

---

೧. ಡಾ. ಪಾಂಡುರಂಗ ಬಾಬು, ದಕ್ಷಿಣ ಕನ್ನಡ ಜಿಲ್ಲೆಯ, ಬೈರರು, ೧೯೯೯, ಪು. ೬೦.

ನಿರ್ಮಾಣ ಮಾಡುವ ವಸ್ತುಗಳ ಮೊತ್ತವನ್ನು ಸಂಸ್ಕೃತಿ ಎನ್ನಬಹುದು.[೨] ಇವರ ಮಾತಿನಂತೆ ಸಂಸ್ಕೃತಿ ಅಥವಾ ನಾಗರೀಕತೆಗಳು ಮಾನವ ಸಮಾಜದ ಸದಸ್ಯನಾಗಿ ಪರಿಸರದಿಂದ ಗಳಿಸಿ ಅರಗಿಸಿಕೊಂಡದ್ದೆ ಆಗಿದೆ. ಸಂಸ್ಕೃತಿಯು ಒಟ್ಟಾರೆಯಾಗಿ ಮಾನವ ಜೀವನದ ಸಮಗ್ರ ಸಂಕೀರ್ಣತೆಯ ಕಲ್ಪನೆಯನ್ನು ಮೂಡಿಸುವಂಥದ್ದಾಗಿರುತ್ತದೆ. ಸಂಸ್ಕೃತಿಯು ಮಾನವನ ಆಂತರಿಕ ಮತ್ತು ಬಾಹ್ಯ ಜೀವನವನ್ನು ಅಭಿವ್ಯಕ್ತಿಗೊಳಿಸುತ್ತದೆ. ಈ ಜೀವನವು ಜೈವಿಕ ಪ್ರತಿಬಿಂಬವಾಗಿರದೆ 'Super Organic' ಕಲ್ಪನೆಯನ್ನು ಕೊಡುತ್ತದೆ. ಏಕೆಂದರೆ ಮನುಷ್ಯನ ಜ್ಞಾನವಾಗಲೀ ನಂಬುಗೆಯಾಗಲೀ, ಕಲೆ, ನೈತಿಕತೆ ಕಾನೂನು ಇತ್ಯಾದಿ ಯಾವುದೇ ಆಗಿದ್ದರೂ ಅವು ಮನುಷ್ಯನ ಜೈವಿಕ ನೆಲೆಯಲ್ಲಿ ಕಂಡು ಬರುವಂಥವುಗಳೇನೂ ಅಲ್ಲ. ಇದನ್ನೆ ಮತ್ತೊಬ್ಬ ಮಾನವಶಾಸ್ತ್ರಜ್ಞ **ರಾಬರ್ಟ್‌ಲೂಯಿ(Robert Lowie)'Culture is social heritage'** ಸಂಸ್ಕೃತಿಯು ಸಾಮಾಜಿಕ ಅನುವಂಶಿಕತೆಯಾಗಿದೆ[೩] ಎಂದಿದ್ದಾನೆ. **ಟೈಲರ್** ಅಭಿಪ್ರಾಯವನ್ನೇ ಸಮರ್ಥಿಸುತ್ತ ಬ್ರಿಟಿಷ್ ವಿದ್ವಾಂಸರಾದ **ಬಿ.ಮಲಿನೋವಸ್ಕಿ** ಅವರು **(B.Malinowski)** Culture is an instrumental reality and apparatus for the satisfaction of the biological and derived and derived needs' (1944) ಎಂದಿದ್ದಾರೆ. ಇದರಿಂದಾಗಿ ಮನುಷ್ಯನ ಮೂಲಭೂತ ಜೈವಿಕ ಹಾಗೂ ಸಾಧಿತ ಅಗತ್ಯಗಳನ್ನು ಪೂರೈಸಿಕೊಳ್ಳಲು ಸಂಸ್ಕೃತಿಯು ಒಂದು ಸಾಧನವಾಗಿದೆ ಎಂದು ತಿಳಿದು ಬರುತ್ತದೆ.[೪]

ಇದೇ ವಾದವನ್ನು ಒಪ್ಪುವ ಮತ್ತೊಬ್ಬ ವಿದ್ವಾಂಸರಾದ **ಎ.ಆರ್.ಬ್ರೌನ್(A.R.Brown)** ಎಂಬವರು "ಸಂಸ್ಕೃತಿಯು ಸಾಮಾಜಿಕ ರಚನೆಯ ಬುನಾದಿಯಾದ ಸಂಸ್ಥೆಗಳನ್ನು ರೂಪಿಸುತ್ತದೆ"[೫] ಎನ್ನುತ್ತಾರೆ. ಮಾನವನ ಬದುಕಿಗೆ ಒಂದು ಬಗೆಯ ಸಂಸ್ಥಾತ್ಮಕ ಸ್ವರೂಪವನ್ನು ಸಂಸ್ಕೃತಿಯು ಒದಗಿಸುತ್ತದೆ ಎಂದು ತಿಳಿಯಬಹುದು. ವ್ಯಕ್ತಿ ವ್ಯಕ್ತಿಗಳ ನಡುವಿನ ಸಂಬಂಧ ಹಾಗೂ ಸಮೂಹ–ಸಮೂಹಗಳ ನಡುವಿನ ಸಂಬಂಧಗಳನ್ನು ಸ್ಥಿರಗೊಳಿಸಲು ಬೇಕಾದ ನಿಯಮಾತ್ಮಕ ಹಾಗೂ ಮೌಲ್ಯಾತ್ಮಕ ಅಂಶಗಳನ್ನು ಸಂಸ್ಕೃತಿಯು ಒದಗಿಸುತ್ತದೆ ಎಂಬ ಅರ್ಥದಲ್ಲಿ ಬ್ರೌನ್‌ರವರು ವಿಶ್ಲೇಷಿಸಿರುತ್ತಾರೆ.

---

೨. ಇ.ಬಿ.ಟೇಲರ್, ಪ್ರಿಮಿಟಿನ್ ಕಲ್ಚರ್, ೧೮೭೧.

೩. ರಾಬರ್ಟ್ ಲೂಯಿ, ಪ್ರಿಮಿಟಿವ್ ಸೊಸೈಟಿ, ೧೯೨೦

೪. ಬಿ.ಮೈಲಿನೋವಸ್ಕಿ, ಕಲ್ಚರ್ ಇನ್ ಎನ್‌ಸೈಕ್ಲೋಪಿಡಿಯ ಆಫ್ ಸೋಶಿಯಲ್ ಸೈನ್ಸ್. ೧೯೩೧.

೫. ಎ.ಆರ್. ಬ್ರೌನ್. ಸ್ಟ್ರಕ್ಚರ್ ಅಂಡ್ ಫಂಕ್ಷನ್, ಇನ್ ಪ್ರಿಮಿಟಿವ್ ಸೊಸೈಟಿ. ೧೯೫೨.

ಮಾನವಶಾಸ್ತ್ರ ಮಾನವನ್ನೇ ತನ್ನ ಅಭ್ಯಾಸಕ್ಕೆ ವಸ್ತುವನ್ನಾಗಿಸಿಕೊಂಡಿದೆ. ನೂರು ವರ್ಷಕ್ಕಿಂತ ಹೆಚ್ಚು ಇತಿಹಾಸವುಳ್ಳ ಈ ಶಾಸ್ತ್ರ ಆದಿವಾಸಿ, ರೈತ, ಗ್ರಾಮೀಣ ಮತ್ತು ನಗರ ಸಂಸ್ಕೃತಿಯನ್ನು ಅಭ್ಯಾಸ ಮಾಡಿದೆ. ಮಾನವಶಾಸ್ತ್ರದ ಅಧ್ಯಯನದ ಅವಶ್ಯಕತೆ ಉಂಟಾದದ್ದು ವಸಾಹತುಗಳ ಆಳ್ವಿಕೆಯ ಅನುಕೂಲಕ್ಕಾಗಿ. ಇವರ ಸಮಾಜ.ಸಂಸ್ಕೃತಿಗಳನ್ನು ತಿಳಿದು ಇವರನ್ನು ಆಳುವುದು ಇದರ ಉದ್ದೇಶವಾಗಿತ್ತು. ೧೯ನೇ ಶತಮಾನದ ಪ್ರಾರಂಭದಲ್ಲಿ ವಸಾಹತುಗಳ ಆಳ್ವಿಕೆ ಕೊನೆಗೊಂಡಿತು. ನಂತರ ಈ ದ್ವೀಪವಾಸಿಗಳ ಜೀವನದ ಅಭಿವೃದ್ಧಿಗಾಗಿ ಅಭ್ಯಾಸ ಮುಂದುವರಿಯಿತು. ಇದನ್ನು ದೇಶೀಯ ವಿದ್ವಾಂಸರು ಮುಂದುವರಿಸಿದರು. ಇದರಿಂದ ಭಾರತೀಯ ಸಂಸ್ಕೃತಿಯನ್ನು, ಅರ್ಥಮಾಡಿಕೊಳ್ಳಲು ಉತ್ತಮ ಅವಕಾಶ ದೊರೆಯಿತು.

### ೨.೧ ಬಂಜಾರರ ಸಾಂಸ್ಕೃತಿಕ ಹಿನ್ನೆಲೆ

ಭಾರತದಲ್ಲಿ ಕೆಲವು ಬುಡಕಟ್ಟಿನ ಜನರು ಗ್ರಾಮ ಸಂಸ್ಕೃತಿಗೂ ಹಾಗೂ ನಗರ ಸಂಸ್ಕೃತಿಗೂ ಸೇರಿಕೊಳ್ಳದೇ ತಮ್ಮದೇ ಆದ ವಿಶಿಷ್ಟ ಸಂಸ್ಕೃತಿ ಹಾಗೂ ಪರಂಪರೆಗಳನ್ನು ಉಳಿಸಿಕೊಂಡು ಬಂದಿದ್ದಾರೆ. ಇವರು ತಮ್ಮ ವಿಶಿಷ್ಟ ಸಂಸ್ಕೃತಿಯ ಘಟಕಗಳಾದ ನಂಬಿಕೆ, ಸಂಪ್ರದಾಯ, ಸಾಹಿತ್ಯ, ನೃತ್ಯ, ಕುಶಲಕಲೆ ಮುಂತಾದ ಹಲವಾರು ಅಂಶಗಳಿಂದ ಭಾರತೀಯ ಸಂಸ್ಕೃತಿಯನ್ನು ಸಂಕೀರ್ಣಗೊಳಿಸಿದ್ದಲ್ಲದೆ ಶ್ರೀಮಂತಗೊಳಿಸಿದ್ದಾರೆ. ಕರ್ನಾಟಕದ ಅನೇಕ ಬುಡಕಟ್ಟಿನ ಜನರಲ್ಲಿ ಲಂಬಾಣಿಗಳು ಅಥವಾ ಬಂಜಾರರು ಎದ್ದು ಕಾಣುತ್ತಾರೆ. ಬಣ್ಣ ಬಣ್ಣದ ಬಟ್ಟೆಯುಟ್ಟು ಮೈತುಂಬ ಆಭರಣಗಳನ್ನು ಧರಿಸಿರುವ ಈ ಸಮುದಾಯದ ಸ್ತ್ರೀಯರನ್ನು ಗಮನಿಸಿದರೆ ಸಾಕು ಅವರ ಸಂಸ್ಕೃತಿ ಕಣ್ಣೆದುರಿಗೆ ನಿಲ್ಲುತ್ತದೆ. ಊರುಗಳಿಂದ ದೂರದಲ್ಲಿ 'ತಾಂಡಾ'ಗಳನ್ನು ಕಟ್ಟಿಕೊಂಡು ವಾಸಿಸುವ ಈ ಜನರು ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಹಾಗೂ ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ.[೬]

ಕರ್ನಾಟಕದ ಲಂಬಾಣಿಗರು ಮೂಲತಃ ರಾಜಸ್ಥಾನದವರಾಗಿದ್ದು, ಸಂಚಾರಿ ಜನಾಂಗವಾಗಿ ದಕ್ಷಿಣಕ್ಕೆ ಬಂದು ತಂಡೋಪತಂಡಗಳಾಗಿ ಕರ್ನಾಟಕ, ಆಂಧ್ರ ಹಾಗೂ ಮಹಾರಾಷ್ಟ್ರಗಳನ್ನೇ ತಮ್ಮ ತಾಯ್ನಾಡನ್ನಾಗಿ ಮಾಡಿಕೊಂಡಿದ್ದಾರೆ. ರಜಪೂತ ಪರಂಪರೆಯವರೆಂದು ಹೇಳುವ ಈ ಜನ ಬಂಜಾರಾ, ಬಂಜಾರಿ, ಲಂಬಾಣಿ, ಲಂಬಾಡಿ, ಸುಗಾಲಿ, ಸುಕಾಲಿ ಎಂಬ

---

೬. ಡಿ.ಬಿ. ನಾಯಕ. ಲಂಬಾಣಿ ಜನಪದ ಸಾಹಿತ್ಯ, ಗುಲ್ಬರ್ಗಾ, ೨೦೦೦.

ಮುಂತಾದ ಹೆಸರುಗಳಿಂದ ಕರೆಯಲ್ಪಡುತ್ತಾರೆ. ಸಮಸ್ತ ಬಂಜಾರ ಸಮುದಾಯದಲ್ಲಿ ಒಂದೇ ರೀತಿ, ನೀತಿ, ಸಂಪ್ರದಾಯ, ವೇಷ, ಭಾಷೆಯನ್ನು ಕಾಣಬಹುದಾಗಿದೆ. ಹಾಗೆಯೇ ಇವು ಸಮಾಜ ಮತ್ತು ಸಂಸ್ಕೃತಿಯನ್ನು ಎತ್ತಿ ಹಿಡಿಯಬಲ್ಲ ಕುರುಹುಗಳಾಗಿವೆ.

ಬಂಜಾರ ಸಮುದಾಯದಲ್ಲಿ ಪ್ರಜಾತಂತ್ರ ತತ್ವಗಳು ಆದಿಯಿಂದಲೂ ವಂಶ ಪಾರಂಪರ್ಯವಾಗಿ ಕೂಡಿಬಂದಿವೆ. ಆದರೆ ಬ್ರಿಟೀಷರ ಆಳ್ವಿಕೆಯಲ್ಲಿ ಇಂತಹ ಬಲಾಢ್ಯ ಹಾಗೂ ಸುಸಂಸ್ಕೃತ ದೇಶಭಕ್ತ ಸಮಾಜಕ್ಕೆ ಅಪರಾಧಿ ಜನರೆಂದು ಪರಿಗಣಿಸಿ ಅವರ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿಗೆ ಕುಂಠಿತವಾಯಿತು. ಈಗ ಈ ಜನರು ಸಮಾಜದ ಪ್ರತಿಯೊಂದು ಕ್ಷೇತ್ರ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಇಂದು ವಿವಿಧ ರಂಗಗಳಲ್ಲಿ ಕಾಣಿಸಿಕೊಂಡಿದ್ದಾರೆ. ಇವರು ಇತರ ನೆರೆಹೊರೆಯ ಸಮಾಜದವರೊಂದಿಗೆ ಆಧುನಕತೆಗೆ ಒಳಗಾಗಿ ಪ್ರತಿಯೊಂದು ಕ್ಷೇತ್ರಗಳಲ್ಲಿ ಅವರನ್ನು ಪ್ರತಿಸ್ಪರ್ಧಿಸುತ್ತಿದ್ದಾರೆ.[೭]

ದಕ್ಷಿಣ ಕರ್ನಾಟಕದಲ್ಲಿ ಬಂಜಾರರು ಸ್ಥಳೀಯ ಭಾಷೆ, ಸಂಸ್ಕೃತಿ, ಸಂಸ್ಕಾರಗಳಂತಹ ಸಾಮಾಜಿಕ ಜೀವನವನ್ನು ಪ್ರಾದೇಶಿಕ ಪರಿಸರಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಿರುತ್ತಾರೆ. ಬಹುತೇಕ ಉತ್ತರ ಭಾರತೀಯ ಸಾಂಸ್ಕೃತಿಕ ಪ್ರಭಾವಕ್ಕೆ ಒಳಗಾಗಿದ್ದರೂ, ಕಾಲಾಂತರಗಳಲ್ಲಿ ಮೂಲ ಆಚರಣೆಗಳನ್ನು ಸಾಪೇಕ್ಷವಾಗಿ ಮಾರ್ಪಡಿಸಿಕೊಂಡು, ಅನ್ಯ ಸಂಸ್ಕೃತಿಗಳ ಕಡೆಗೆ ಸಂಪೂರ್ಣವಾಗಿ ಸೇರ್ಪಡೆಗೊಳ್ಳದೇ ತಮ್ಮ ತನವನ್ನು ಗಟ್ಟಿಮಾಡಿಕೊಳ್ಳುತ್ತಿರುವ ಪ್ರಯತ್ನ ನಿರಂತರವಾಗಿದೆ.ಈ ಹಿನ್ನಲೆಯಲ್ಲಿ ಬಂಜಾರರ ಸಾಂಸ್ಕೃತಿಕ ಜೀವನ ಪದ್ಧತಿಯನ್ನು ದಕ್ಷಿಣ ಕರ್ನಾಟಕ ಪ್ರದೇಶ ಆಧಾರಿತ ವಿಶ್ಲೇಷಣೆಯು ಈ ಅಧ್ಯಾಯದಲ್ಲಿ ವ್ಯಕ್ತವಾಗಿದೆ.

ಭಾರತದ ಜನಗಣತಿಯಲ್ಲಿ W.Francis[೮] ಅವರು ವರ್ತಕರಾಗಿದ್ದ ಬಂಜಾರರು ತಮ್ಮ ಮದುವೆ ಸಮಾರಂಭಗಳಲ್ಲಿ ಹೆಂಗಸರು ಅತಿಯಾಗಿ ಆಳುತ್ತಿದ್ದರೆಂಬ ವಿಚಾರ ನಿರೂಪಿಸುತ್ತ ಆಳುವ ಸಂಪ್ರದಾಯವನ್ನು ಮನಗಾಣಿಸುತ್ತಾರೆ. ಹಾಗೆಯೇ ಮದುವೆಯ ಕೆಲವು ಸಂಪ್ರದಾಯಗಳನ್ನು ಪರಿಚಯಿಸುವ ಈ ವರದಿ ಕುತೂಹಲಕರವಾಗಿ ಮೂಡಿಬಂದಿದೆ. ಇವರಂತೆಯೇ ಅನೇಕ ಲೇಖಕರು ತಮ್ಮ ಲೇಖನ, ಗ್ರಂಥಗಳಲ್ಲಿ ಲಂಬಾಣಿಗರ ಮದುವೆಯಲ್ಲಿನ ಆಳುವ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿ[೯]ಯವರು

---

೭. ಪಿ.ಕೆ.ಖಂಡೋಬ, ಸಂಸ್ಕೃತಿ ಶೋಧ,, ೨೦೦೫. ಪು. ೮೩-೯೦.

೮. W.Francis, Census of India, Vol.15, Madras Part-I Report, 1901, P.165.

೯. E.Thurston and K.Rangachari, Castes and Tribes of Southern India, Vol. IV, 1909, P. 224.

ಲಂಬಾಣಿ ಹೆಣ್ಣು ಮಗಳು ಮದುವೆಯಾಗಿ ಗಂಡನ ಮನೆಗೆ ಹೊರಡುವ ಸಂದರ್ಭದಲ್ಲಿ ಅಳುತ್ತ ಹಾಡುವುದನ್ನು ತಮ್ಮ ಲೇಖನದಲ್ಲಿ ದಾಖಲಿಸುತ್ತಾರೆ. ಇದೇ ಸಂದರ್ಭದಲ್ಲಿ ವಧುವು ಹವೇಲಿ ಮಾಡುತ್ತ ಅಳುವುದನ್ನು ಎಚ್.ವಿ.ನಂಜುಡಯ್ಯ ಮತ್ತು ಎಲ್.ಕೆ.ಐಯ್ಯರ್[೧೦] ಅವರು ತಮ್ಮ ಕೃತಿಯಲ್ಲಿ ದಾಖಲಿಸಿರುವುದನ್ನು ಕಾಣಬಹುದು. ಇದಕ್ಕೆ ಪೂರಕವಾಗಿ ಪುಷ್ಪಲತಾ ರಾಂಪುರೆ[೧೧] ಅವರು ಲಂಬಾಣಿಗರ ಆಳುವ ಹಾಡನ್ನು ವಿಶ್ಲೇಷಣೆಗೆ ಒಳಪಡಿಸಿ ರುವುದು ಅಧ್ಯಯನ ಯೋಗ್ಯವಾಗಿದೆ. ಅಲ್ಲದೆ ಮದುಮಗಳು ತನ್ನ ಕಣ್ಣುಗಳಲ್ಲಿ ನೀರು ತುಂಬಿ ನಿಂತ ದೃಶ್ಯವೇ ಅವಳು ಗಂಡನ ಮನೆಗೆ ಹೊರಟಿರುವಳೆಂಬುದನ್ನು ಸೂಚಿಸುತ್ತದೆಂಬ ವಿಚಾರವನ್ನು ಸಯ್ಯದ್ ಸಿರಾಜ್ ಉಲ್‌ಹಸನ್[೧೨] ಅವರು ಮಂಡಿಸುತ್ತಾರೆ. ಒಟ್ಟಾರೆಯಾಗಿ ಹೇಳುವುದಾದರೆ ಲಂಬಾಣಿಗರು ಮೂಲತಃ ಅಲೆಮಾರಿಗಳು, ತಮ್ಮ ಜೀವನೋಪಾಯಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗುತ್ತಿದ್ದುದರಿಂದ ಒಂದು ತಾಂಡದವರು ಮತ್ತೊಂದು ತಾಂಡದವರ ಜೊತೆಗೆ ಮತ್ತೊಮ್ಮೆ ಸಂಪರ್ಕಿಸುತ್ತೇವೆಯೋ ಇಲ್ಲವೋ ಎಂಬ ಕಾರಣಕ್ಕಾಗಿ ಅವರು ಒಬ್ಬರಿಗೊಬ್ಬರು ಕೊರಳುತಬ್ಬಿ ಅಳುತ್ತಿದ್ದರೆಂಬುದು ವಕ್ತೃಗಳ ಅನಿಸಿಕೆ.

ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿ[೧೩] ಅವರು ಲಂಬಾಣಿ ಸಮುದಾಯದ ಬಗೆಗೆ ಉತ್ತಮ ಮಾಹಿತಿಯನ್ನು ಕೊಡುತ್ತಾರೆ. ಸಾಕಷ್ಟು ದೀರ್ಘವಾಗಿರುವ ಈ ಲೇಖನ ದಲ್ಲಿ ಲಂಬಾಣಿಗಳ ಬಗೆಗಿನ ಐತಿಹ್ಯ ಕಟ್ಟುಕಥೆಗಳೇ ಹೆಚ್ಚಾಗಿದ್ದು, ವಾಸ್ತವತೆ ಮುಸುಕಾಗಿದೆ. ಲಂಬಾಣಿ ಸಮುದಾಯದ ಒಂದು ಪಕ್ಷಿನೋಟ ಇಲ್ಲಿ ಲಭ್ಯವಾಗುತ್ತದೆ. ಸಂಪ್ರದಾಯ, ಆಚರಣೆ ಹಾಗೂ ಸಂಸ್ಕೃತಿಗೆ ಸಂಬಂಧಿಸಿದ ವಿಶ್ಲೇಷಣೆಗೆ ಮಹತ್ವ ನೀಡಿದ ಲೇಖನ ಇದಲ್ಲವಾದರೂ, ಇವರ ಪ್ರಯತ್ನವನ್ನು ಗಮನಿಸದಿರಲು ಸಾಧ್ಯವಿಲ್ಲ.

---

೧೦. H.V. Nanjundayya and L.K.Iyer, The Mysore Tribes and Castes, Vol.II, 1928, Pp.166-167.

೧೧. ಪುಷ್ಪಲತಾ ರಾಂಪುರೆ, ಬಂಜಾರ ಲೋಕ ಗೀತೋಂಕಾ ಸಮೂಹ, ೧೯೭೫.

೧೨. Syed Siraj UL Hassan, The Castes and Tribes of H.E.H, 19*89, P.24.

೧೩. E.Thurston and K.Rangachari, Castes and Tribes of Souther India, Vol.IV, 1909, Pp.207-233.

ಲಂಬಾಣಿಗರ ವಿಷಯವನ್ನು ಅತ್ಯಂತ ಶಾಸ್ತ್ರೀಯವಾಗಿ ವಿಶ್ಲೇಷಿಸಿ ವಿವರಿಸಿರುವರೆಂದರೆ ಎಚ್.ವಿ.ನಂಜುಂಡಯ್ಯ ಮತ್ತು ಎಲ್.ಕೆ.ಅಯ್ಯರ್[೧೪] ಆಂಗ್ಲ ಭಾಷೆಯಲ್ಲಿ ಇದುವರೆಗೆ ಪ್ರಕಟವಾಗಿರುವ ಕೃತಿಗಳ ಪೈಕಿ ಇವರ ಕೃತಿ ಹೆಚ್ಚು ಮಾಹಿತಿಯನ್ನೊಳಗೊಂಡಿದ್ದು, ಲಂಬಾಣಿಗರ ಸಾಂಸ್ಕೃತಿಕ ವಿಚಾರಗಳ ಬಗೆಗೆ ಉತ್ತಮವಾದ ಮಾಹಿತಿ ಈ ಲೇಖನದಲ್ಲಿ ಲಭ್ಯವಾಗುತ್ತದೆ.

ಆರ.ವಿ.ರಸಲ್ ಮತ್ತು ಹೀರಾಲಾಲ್[೧೫] ಎಂಬ ವಿದ್ವಾಂಸರು ಬಂಜಾರ ಸಂಸ್ಕೃತಿಯ ಬಗ್ಗೆ ಸ್ಥೂಲವಾದ ಪರಿಚಯ ಮಾಡಿಕೊಟ್ಟಿದ್ದಾರೆ. ಲಂಬಾಣಿಗರು ಹಬ್ಬಗಳನ್ನು ಆಚರಿಸುತ್ತಿದ್ದ ರೀತಿ, ಅವರ ಪ್ರಮುಖ ವೇಷಭೂಷಣ, ಸಂಪ್ರದಾಯ ಆಚರಣೆಗಳ ಮೇಲೆ ಬೆಳಕುಚೆಲ್ಲುವಂತೆ ಸುಮಾರು ೩೦ ಪುಟದಷ್ಟು ದೀರ್ಘವಾದ ಲೇಖನವನ್ನೇ ಬರೆದಿದ್ದಾರೆ. ಲಂಬಾಣಿ ಸಂಸ್ಕೃತಿಯ ಅಧ್ಯಯನ ಮಾಡುವವರಿಗೆ ಈ ಲೇಖನ ಪ್ರಾಥಮಿಕ ಮಾಹಿತಿಯನ್ನು ಒದಗಿಸಬಲ್ಲದು. ಲಂಬಾಣಿ ಹೆಸರಿನ ಉತ್ಪತಿ, ಬಾಹ್ಯಚಹರೆ, ಮೂಲ, ವೇಷಭೂಷಣ, ಸಂಪ್ರದಾಯಾಚರಣೆ, ಆಹಾರ ಪಾನೀಯ ಇವೇ ಮುಂತಾದ ವಿಷಯವನ್ನೊಳಗೊಂಡಂತಹ ಪರಿಚಯಾತ್ಮಕವಾದ ಮಾಹಿತಿಯೊಂದಿಗೆ ಲಂಬಾಣಿಗರ ದೈವಗಳ ಬಗ್ಗೆ ಮಾಹಿತಿಯನ್ನು ಒದಗಿಸಿರುವ ಆರ್.ಇ.ಎಂಥೋವನ್[೧೬] ಅವರ ಪ್ರಯತ್ನ ಸಾರ್ಥಕವಾದುದು ಎಂದು ಎನಿಸುತ್ತದೆ.

ಲಂಬಾಣಿಗರ ಸಂಸ್ಕೃತಿಯನ್ನು ಸ್ಥೂಲವಾಗಿ ಪರಿಚಯಿಸುವ ಅವರ ಬದುಕನ್ನು ಶೋಧಿಸುವ ಪ್ರಯತ್ನಗಳು ಬಿಡಿಬರಹಗಳ ರೂಪದಲ್ಲಿ ಬೆಳಕು ಕಂಡಿವೆ. ಆ ಪೈಕಿ ಜಿ.ಎನ್. ಮೋಹನ್ ಅವರ ಲೇಖನ ಗಮನಾರ್ಹವಾಗಿದೆ.[೧೭] ಲಂಬಾಣಿ ಜನರ ಮೂಲ, ಅವರ ವೇಷ–ಭೂಷಣ, ಸಂಪ್ರದಾಯ, ಸಾರಂಗಿರಾಮ– ಇವುಗಳ ಬಗೆಗೆ ಉತ್ತಮ ವಿವರಣೆ ಇದೆ. ಈ ಲೇಖನದಲ್ಲಿ ವಿಶೇಷವಾಗಿ ಲಂಬಾಣಿಗರಿಗೆ ಸಂಬಂಧಿಸಿದಂತೆ ಇತಿಹಾಸದ ಪುಟಗಳಲ್ಲಿ ದಾಖಲಾಗಿರುವ ಕೆಲವು ಸಂಗತಿಗಳನ್ನು ಮೌಲಿಕವಾಗಿ ವಿವೇಚಿಸಲಾಗಿದೆ.

---

೧೪. H.V.Nanjundayya and L.K.Iyer, The Mysore Tribes and Castes, Vol.II, 1928, Pp.135-196.

೧೫. R.V.Russell and Hiralal, The Tribes and Castes of the Central Provinces of India, Vol.II, 1916, Pp. 162-192.

೧೬. R.E.Enthovan, The Tribes and Castes of Bombay, Vol.II, 1922, Pp.331-343.

೧೭. ಜಿ.ಎನ್.ಮೋಹನ್, ಕಣಿವೆಗೆ ಇಳಿದ ಕೋಗಿಲೆಗಳು – ಲಂಬಾಣಿಗಳು, ಸುಧಾ, ೨೮ನೇ ಜುಲೈ, ೧೯೮೫.

ಎಂ.ಎಸ್.ಶೆಟ್ಟರ್ ಯಲಬುರ್ಗ ಅವರು ತಮ್ಮ ಲೇಖನದಲ್ಲಿ[೧೮] ಲಂಬಾಣಿಗರ ವಿಶಿಷ್ಟ ಸಂಸ್ಕೃತಿಯನ್ನು 'ವಿಭಿನ್ನ ಸಂಪ್ರದಾಯಗಳ ಕಣಜ' ಎಂದು ಕರೆದಿರುವುದಲ್ಲದೆ ಅವರ ಉಡುಗೆ-ತೊಡುಗೆ, ಸಂಪ್ರದಾಯ, ಹಬ್ಬ-ಹರಿದಿನಗಳ ಜೊತೆಗೆ ಮುಖ್ಯವಾಗಿ ಲಂಬಾಣಿ ಸಂಸ್ಕೃತಿಯ ಮೇಲೆ ಬೆಳಕು ಚೆಲ್ಲಲು ಪ್ರಯತ್ನಿಸಿದ್ದಾರೆ.

ಲಂಬಾಣಿಗರ ಮೂಲಸ್ಥಾನ ರಾಜಾಸ್ಥಾನ ಎಂಬುದನ್ನು ಖಚಿತಪಡಿಸುತ್ತ ಅವರ ಆಚಾರ-ವಿಚಾರ, ನಂಬಿಕೆ, ಹಬ್ಬ-ಹರಿದಿನಗಳು, ಆರ್ಥಿಕ ಸ್ಥಿತಿಗತಿ, ಗೋರ ಪಂಚಾಯತ್, ಉಡುಗೆ-ತೊಡುಗೆಗಳ ಕಲಾತ್ಮಕತೆ ಹಾಗೂ ಲಂಬಾಣಿಗರ ವಿಶಿಷ್ಟ ನಂಬಿಕೆಗಳ ಬಗೆಗೆ ಆಕರ ಗ್ರಂಥಗಳನ್ನಾಧರಿಸಿದ ಮಾಹಿತಿಯನ್ನು ಸುಮಂಗಲಾ ಬಾದರದಿನ್ನಿಯವರು ಕೊಡುತ್ತಾರೆ.[೧೯] ಪ್ರಸ್ತುತ ಲೇಖನ ಲಂಬಾಣಿಗರ ಬದುಕಿನ ಮೇಲೆ ಬೆಳಕು ಚೆಲ್ಲುವ ಯತ್ನ ಮಾಡಿದೆ.

ರಘುನಾಥರಾವ್ ತಾಪ್ಸೆ ಅವರ ಲೇಖನ[೨೦] ಲಂಬಾಣಿ ಮಹಿಳೆಯರಿಗಾಗಿಯೇ ೧೯೮೪ರಲ್ಲಿ ಎಂ.ವೈ. ಘೋರ್ಪಡೆ ಅವರ ಮುಂದಾಳತ್ವದಲ್ಲಿ 'ಸೊಂಡೂರು ಕುಶಲಕಲಾ ಕೇಂದ್ರ' ಸ್ಥಾಪನೆ ಆದ ಬಗೆಯನ್ನು ತಿಳಿಸುತ್ತದೆ. ಈ ಕಲಾ ಕೇಂದ್ರದಲ್ಲಿ ಲಂಬಾಣಿ ಮಹಿಳೆಯರು ಆಕರ್ಷಕ ಕಸೂತಿ ಕಲೆಯನ್ನು ಪ್ರದರ್ಶಿಸಿ, ತರತರದ ಚೀಲ, ಹೊದಿಕೆ ಇತ್ಯಾದಿ ಸಾಂಸ್ಕೃತಿಕ ವಸ್ತುಗಳನ್ನು ತಯಾರಿಸಿ, ಅದಕ್ಕೊಂದು ಮಾರುಕಟ್ಟೆಯನ್ನು ಒದಗಿಸಿ ಲಂಬಾಣಿ ಮಹಿಳೆಯರು ಆರ್ಥಿಕವಾಗಿ ಸ್ವಾವಲಂಬಿಯಾಗಲು ಈ ಕೇಂದ್ರ ಸಹಾಯ ಮಾಡುತ್ತಿರುವುದರ ಬಗೆಗೆ ವಿವರವಾಗಿ ಚರ್ಚಿಸಲಾಗಿದೆ.

ಇದೇ ಕೇಂದ್ರದಲ್ಲಿ ಅರಳಿದ ಲಂಬಾಣಿ ಮಹಿಳೆಯರ ಕಲೆಯ ಬಗ್ಗೆ ಭೀಮಣ್ಣ ಗಜಾಪುರ ಅವರು ಬರೆದಿರುವ ಲೇಖನ[೨೧] ಲಂಬಾಣಿ ಮಹಿಳೆಯರು ತಮ್ಮ ಸಾಂಪ್ರದಾಯಿಕ ಕಸೂತಿ ಕಲೆಯಿಂದ ಆರ್ಥಿಕವಾಗಿ ಸಬಲರಾಗುತ್ತಿರುವುದರ ಬಗೆಗೆ ಸಂಪೂರ್ಣ ವಿವರವನ್ನು

---

೧೮. ಎಂ.ಎಸ್.ಶೆಟ್ಟರ್ ಯಲಬುರ್ಗಾ, ಲಂಬಾಣಿಗರು, ತರಂಗ, ೩೦ನೇ ಡಿಸೆಂಬರ್, ೧೯೯೯.

೧೯. ಸುಮಂಗಲಾ ಬಾದರದಿನ್ನಿ, ಲಂಬಾಣಿಗರು: ವರ್ಣರಂಜಿತ ಬದುಕು ಬವಣಿ, ತರಂಗ, ೨೨ನೇ ನವೆಂಬರ್, ೨೦೦೧.

೨೦. ರಘುನಾಥರಾವ್ ತಾಪ್ಸೆ, ಕಲೆಯಿಂದ ನೆಲೆಯೂರಿನ ಲಂಬಾಣಿ ಮಹಿಳೆಯರು, ಪ್ರಜಾವಾಣಿ, ೧೪ನೇ ಜುಲೈ, ೨೦೦೧.

೨೧. ಭೀಮಣ್ಣ ಗಜಾಪುರ, ಸಂಡೂರಲ್ಲಿ ಅರಳಿದ ಲಂಬಾಣಿ ಮಹಿಳೆಯರ ಕಲೆ, ಪ್ರಜಾವಾಣಿ, ೨೦ನೇ ನವೆಂಬರ್, ೨೦೦೩.

ಕೊಡುತ್ತದೆ. ಅಂತೆಯೇ ಕೆಂಧೂಳಿನ ನಗರ ಬಳ್ಳಾರಿ ಜಿಲ್ಲೆಯ ಸಂಡೂರು ಪಟ್ಟಣದಲ್ಲಿ ನಡೆಯುವ ಕುಶಲಕಲಾ ಕೇಂದ್ರ ಲಂಬಾಣಿ ಉಡುಗೆಗಳಿಗಾಗಿಯೇ ರೂಪುಗೊಂಡಿರುವುದನ್ನು ಲೇಖನ ಪ್ರತಿಪಾದಿಸುತ್ತದೆ.[೨೨] ಬಳ್ಳಾರಿ ಜಿಲ್ಲೆಯ ಸೊಂಡೂರು ಕುಶಲ ಕಲಾ ಕೇಂದ್ರದಲ್ಲಿ ಸಿದ್ಧಪಡಿಸುವ ಲಂಬಾಣಿ ಮಹಿಳೆಯರ ಕಸೂತಿ ಕಲೆಯ ಬಗೆಗೆ ವಕ್ರಾಣಿ ವೀರೇಶ ಸೌದ್ರಿ ಕೂಡ ಬರೆದಿದ್ದಾರೆ.[೨೩] ಸೊಂಡೂರು ಕುಶಲ ಕಲಾಕೇಂದ್ರ ಲಂಬಾಣಿ ಕುಶಲಕರ್ಮಿ ಮಹಿಳೆಯರ ಬಾಳಿಗೆ ಬೆಳಕಾಗಿ ಅವರ ಬದುಕನ್ನು ರೂಪಿಸುತ್ತಿರುವುದರ ಹಿನ್ನೆಲೆಯಲ್ಲಿ ಈ ಕೇಂದ್ರದ ಕೆಲಸ ಶ್ಲಾಘನೀಯ.

ಚಂದ್ರಹಾಸ್ ಕೋಟೆಕಾರ್[೨೪] ಅವರ ಲೇಖನ ಲಂಬಾಣಿ ಉಡುಪು ಹಾಗೂ ತೊಡಗೆಯ ಬಗೆಗೆ ಸಚಿತ್ರ ಮಾಹಿತಿಯನ್ನು ನೀಡುವಲ್ಲಿ ಸಫಲವಾಗಿದ್ದು ಲಂಬಾಣಿ ಉಡುಗೆ–ತೊಡುಗೆಯ ವೈಶಿಷ್ಟ್ಯತೆಯನ್ನು ಸಾರಿ ಹೇಳುವಂತಿದೆ.

ಲಂಬಾಣಿ ಕಲೆಯ ಬಗೆಗೆ ಹೇಳುವಾಗ ಡಿ.ಸತ್ಯನಾರಾಯಣ ಅವರ ಲೇಖನವನ್ನು ಮರೆಯುವಂತಿಲ್ಲ.[೨೫] ೧೯೯೨ರಲ್ಲಿ ಶ್ರೀಮತಿ ಲಕ್ಷ್ಮೀಬಾಯಿ ಮೆಹರ್ವಾಡೆ ಅವರು ಹರಿಹರ ನಗರದ ಗುತ್ತೂರು ಕಾಲೋನಿಯಲ್ಲಿ 'ಶಕ್ತಿ ಮಹಿಳಾ ಮಂಡಳಿ' ಸ್ಥಾಪಿಸಿದುದರ ಬಗೆಗೆ ಮಾಹಿತಿ ಮಾಡಿಕೊಡುತ್ತದೆ. ಗ್ರಾಮೀಣ ಮಹಿಳೆಯರಿಗೆ ಆರ್ಥಿಕ ಸ್ವಾವಲಂಬನೆಯನ್ನು ಕಲ್ಪಿಸಿ, ಅವರ ಬದುಕಿಗೆ ನೆರವಾದುದು ಹಾಗೂ ಮಂಡಳಿಯ ಅಭಿವೃದ್ಧಿಯ ಬಗೆಗೆ ನಿರೂಪಿತವಾಗಿರುವ ಪ್ರಸ್ತುತ ಲೇಖನ ಮಹಿಳೆ ಸ್ವಯಂ ಉದ್ಯೋಗ ಕಲ್ಪಿಸಿಕೊಂಡು ಸ್ವಾಭಿಮಾನಿಯಾಗಿ ಬದುಕಲು ಸಹಕರಿಸುತ್ತದೆ.

ಗುಳೇ ಹೋಗುವುದರಲ್ಲೇ ಜೀವಮಾನ ಕಳೆಯುತ್ತಿದ್ದ ಲಂಬಾಣಿ ಮಹಿಳೆಯರು, ಈಗ ಒಂದೆಡೆ ನೆಲೆನಿಂತು ತಮ್ಮ ಪರಂಪರಾಗತ ಕಲೆಯನ್ನು ಉಳಿಸಿಕೊಳ್ಳುವುದರ

---

೨೨. ಲಂಬಾಣಿ ಉಡುಗೆಗಳು ಮಿನುಗುವ ಕೇಂದ್ರ, ಪ್ರಜಾವಾಣಿ, ೨೦ನೇ ಜನವರಿ, ೨೦೦೨.

೨೩. ವಕ್ರಾಣಿ ವೀರೇಶ ಸೌದ್ರಿ, ಕನ್ನಡನಾಡಿನ ಕನ್ನಡಿ ಕಸೂತಿ, ವಿಜಯ ಕರ್ನಾಟಕ, ೧೪ನೇ ಸೆಪ್ಟೆಂಬರ್ ೨೦೦೪.

೨೪. ಚಂದ್ರಹಾಸ್ ಕೋಟೆಕಾರ್, ಇದು ಉಡುಪಲ್ಲ ಕಲೆಯ ಬೆಡಗು, ಸುಧಾ, ೨೩ನೇ ನವೆಮಬರ್, ೨೦೦೪.

೨೫. ಡಿ.ಸತ್ಯನಾರಾಯಣ, ಲಂಬಾಣಿ ಕುಸುರಿಗೆ ಹೊಸ ಮೆರಗು, ವಿಜಯ ಕರ್ನಾಟಕ, ೧೯ನೇ ಆಗಸ್ಟ್ ೨೦೦೧.

ಜೊತೆಗೆ ಅದನ್ನು ಆದಾಯದ ಮೂಲವನ್ನಾಗಿ ಪರಿವರ್ತಿಸಿಕೊಂಡು ಹೊಸ ಬದುಕಿನತ್ತ ಹೆಜ್ಜೆ ಹಾಕುತ್ತಿರುವುದರ ಬಗೆಗೆ ಸುಮಂಗಲಾ ಬಾದರದಿನ್ನಿಯವರು ಪ್ರಸ್ತಾಪಿಸಿದ್ದಾರೆ.[೨೬] ಹಾಗೆಯೇ 'ಸಬಲಾ'ದಂತಹ ಸಂಸ್ಥೆಯಲ್ಲಿ ತಮ್ಮ ಕಸೂತಿ ಕಲೆಯನ್ನು ನಿರಂತರವಾಗಿ ಮುಂದುವರಿಸಿಕೊಂಡು ಹಣ ಸಂಪಾದಿಸಿ ಆರ್ಥಿಕವಾಗಿ ಸಬಲರಾಗುತ್ತಿರುವುದನ್ನು ಲೇಖಕರು ವಿವರಿಸಿದ್ದಾರೆ.

ಪಿ.ಕೆ.ಖಂಡೋಬಾ ಅವರ 'ಜಾನಪದ ಮುನ್ನೋಟ' ಕೃತಿಯಲ್ಲಿ ಲಂಬಾಣಿ ಜನಪದ ಕಲೆಗಳು ಸಮೂಹ ಮಾಧ್ಯಮವಾಗಿ ಹೇಗೆ ಕೆಲಸ ಮಾಡುತ್ತವೆ ಎಂಬುದನ್ನು ವಿವರಿಸಲಾಗಿದೆ.[೨೭] ಅಲ್ಲದೆ ಕಸೂತಿ, ಹಚ್ಚೆ ಮತ್ತು ರಂಗೋಲಿ ಕಲೆಗಳ ಬಗೆಗೆ ಅಗತ್ಯವಾದ ಮಾಹಿತಿಯನ್ನು ಒದಗಿಸಿ ವಿಶ್ಲೇಷಣೆಗೆ ಒಳಪಡಿಸಿರುವ ರೀತಿ ಪ್ರಮುಖವಾದುದಾಗಿದೆ. ಇದೇ ಲೇಖಕರ 'ಲಂಬಾಣಿ ಕಲೆ ಮತ್ತು ಸಂಸ್ಕೃತಿ' ಎಂಬ ಲೇಖನದಲ್ಲಿ ಸಂಸ್ಕೃತಿ ಹಾಗೂ ಕಲೆ ಹೇಗೆ ಒಟ್ಟೊಟ್ಟಿಗೆ ಬೆರೆಯುತ್ತ ಹೋಗುತ್ತದೆಂಬುದನ್ನು ವಿಶ್ಲೇಷಿಸಲಾಗಿದೆ.[೨೮] ಡಿ.ಬಿ.ನಾಯಕ ಎಂಬ ವಿದ್ವಾಂಸರು ಲಂಬಾಣಿಗರ ಕಲೆ ಹಾಗೂ ಧಾರ್ಮಿಕ ಆಚರಣೆಗೆ ಸಂಬಂಧಿಸಿದಂತೆ ಆ ಜನರಲ್ಲಿರುವ ವಿಧಿವಿಧಾನಗಳ ಬಗೆಗೆ ಪ್ರಮುಖ ಮಾಹಿತಿ ನೀಡಿರುವುದು ಸಮಯೋಚಿತ ವಾಗಿದೆ.[೨೯]

ಎಂ. ಚಿದಾನಂದಮೂರ್ತಿ ಅವರ 'ಲಂಬಾಣಿ ಜನಾಂಗ ಮತ್ತು ಅವರ ಭಾಷೆ'[೩೦] ಎಂಬ ಲೇಖನದಲ್ಲಿ ಲಂಬಾಣಿಗರ ವೇಷಭೂಷಣಗಳ ಬಗೆಗೆ ಅಮೂಲ್ಯವಾದ ಮಾಹಿತಿಯನ್ನು ಒದಗಿಸುತ್ತಾರೆ. ಅಲ್ಲದೆ ಲಂಬಾಣಿಗರ ಹೆಸರಿನಲ್ಲಿರುವ ಸ್ವಾರಸ್ಯವನ್ನು ಗುರುತಿಸಿ ಹೆಸರುಗಳನ್ನು ಪಟ್ಟಿಮಾಡಿಕೊಡುತ್ತಾರೆ. "ಕರ್ನಾಟಕದ ದಕ್ಷಿಣದ ತುದಿಯನ್ನು ಬಿಟ್ಟರೆ ಈ ಜನರು ಬಹುಮಟ್ಟಿಗೆ ಕರ್ನಾಟಕದಾದ್ಯಂತವೂ ಇದ್ದಾರೆ" ಎಂದು ಅವರು ಹೇಳಿದ್ದು ಬಹುಶಃ ಕ್ಷೇತ್ರಕಾರ್ಯ ಮಾಡದೆ ನೀಡಿದ ಹೇಳಿಕೆ ಇದು ಅನ್ನಿಸುತ್ತದೆ. ವಾಸ್ತವವಾಗಿ ಹೇಳುವುದಾದರೆ

---

೨೬. ಸುಮಂಗಲಾ ಬಾದರದಿನ್ನಿ, ಲಾಭ ಲೆಕ್ಕಾಚಾರದಲ್ಲಿ ಲಂಬಾಣಿ ಮಹಿಳೆ, ಸುಧಾ, ೬ನೇ ಸೆಪ್ಟೆಂಬರ್ ೨೦೦೧.

೨೭. ಪಿ.ಕೆ. ಖಂಡೋಬಾ, ಜಾನಪದ ಮುನ್ನೋಟ, ೧೯೯೩, ಪು. ೧೦೨-೧೨೮.

೨೮. ನೀಲಗಿರಿ ತಳವಾರ (ಸಂ.), ಜಾನಪದ – ೧೯೯೪, ೧೯೯೬, ಪು. ೯೦-೯೮.

೨೯. ಡಿ.ಬಿ. ನಾಯಕ, ಲಂಬಾಣಿ ಸಂಸ್ಕೃತಿ, ೧೯೯೪, ಪು. ೧೧೨-೧೧೫.

೩೦. ಎಂ.ಚಿದಾನಂದಮೂರ್ತಿ, ಸಂಶೋಧನ ತರಂಗ, ಸಂಪುಟ-೨, ೧೯೭೦, ಪು.ಸಂ.೧-೯.

ಲಂಬಾಣಿಗರು ಕರ್ನಾಟಕದ ದಕ್ಷಿಣ ತುದಿಯಾದ ಚಾಮರಾಜನಗರ ಜಿಲ್ಲೆಯಲ್ಲಿ ಬಹುಸಂಖ್ಯೆಯಲ್ಲಿ ನೆಲೆಸಿದ್ದಾರೆಂಬುದನ್ನು ಗಮನಿಸಬೇಕು.

ಹರಿಲಾಲ ಪವಾರ ಅವರು 'ಲಮಾಣಿಗರ ಉಡುಗೆ-ತೊಡುಗೆಗಳು' ಎಂಬ ಲೇಖನ ಬರೆದಿದ್ದು,[೩೧] ಲಂಬಾಣಿಗರ ವೇಷ-ಭೂಷಣದ ವಿಶಿಷ್ಟತೆಯನ್ನು ತಿಳಿಸಿಕೊಡುವಲ್ಲಿ ಸಫಲವಾಗಿದೆ. ಅಲ್ಲದೆ ಲಂಬಾಣಿ ಜನರು ಯಾವ ಯಾವ ದೇಶಗಳಲ್ಲಿ ನೆಲೆಸಿದ್ದಾರೆಂಬುದನ್ನು ತಿಳಿಸುತ್ತಾ, ಜಿಪ್ಸಿಗಳಿಗೂ ಲಂಬಾಣಿಗರಿಗೂ ಇರುವ ಸಂಬಂಧ ಹಾಗೂ ಅವರ ಮೂಲದ ಬಗೆಗೆ ಚರ್ಚಿಸಿರುವುದು ಔಚಿತ್ಯಪೂರ್ಣವಾಗಿದೆ.

'ಢಾಡಿ ಒಂದು ಸಂಚಾರಿ ಗಾಯಕ ಜನಾಂಗ' ಎಂಬ ಲೇಖನ ಬರೆದಿರುವ ಹರಿಲಾಲ ಪವಾರ ಅವರು ಢಾಡಿಯ ಹುಟ್ಟಿನಿಂದ ಸಾವಿನವರೆಗಿನ ಸಂಪ್ರದಾಯಾಚರಣೆಗಳನ್ನು ತಿಳಿಸುವ ಮೂಲಕ ಢಾಡಿ ಸಂಸ್ಕೃತಿಯನ್ನು ಅನಾವರಣಗೊಳಿಸುತ್ತಾರೆ.[೩೨] ಇದೇ ವಿದ್ವಾಂಸರ ಪುಸ್ತಿಕೆಯೊಂದು ಉತ್ತರ ಕರ್ನಾಟಕದ ಲಂಬಾಣಿಗರ ಮದುವೆ ಸಂಪ್ರದಾಯಗಳ ವಿವರಗಳನ್ನು ಒಳಗೊಂಡಿದೆ. ಲಂಬಾಣಿಗರ ಮದುವೆಯ ಬಗ್ಗೆ ಅಧ್ಯಯನ ಮಾಡುವವರಿಗೆ ಈ ಕೃತಿ ಉಪಯುಕ್ತ ಮಾಹಿತಿಯನ್ನು ದೊರಕಿಸಿ ಕೊಡುತ್ತದೆ. ಇದೇ ಲೇಖಕರು ತಮ್ಮ 'ಬಿಜಾಪುರ ಜಿಲ್ಲೆಯ ಲಂಬಾಣಿಗರು: ಒಂದು ಟಿಪ್ಪಣಿ' ಎಂಬ ಲೇಖನದಲ್ಲಿ ಲಂಬಾಣಿಗರು ತಾಂಡ ಕಟ್ಟಿಕೊಂಡ ಬಗೆ, ಅವರಿಗಿರುವ ಭಿನ್ನ ಹೆಸರುಗಳ ಪರಿಚಯ ಮಾಡಿಸುತ್ತಾರೆ.[೩೩] ಅಲ್ಲದೆ ಲಂಬಾಣಿಗರ ರಾಜಾಸ್ಥಾನದ ಪರಂಪರೆ ಹಾಗೂ ಕೆಲವು ಸಂಪ್ರದಾಯಗಳನ್ನು ವಿವರಿಸುವ ಈ ಲೇಖನದಲ್ಲಿ ಲಂಬಾಣಿ ಜನರ ಪಕ್ಷಿನೋಟವನ್ನು ಕಾಣಬಹುದು.

ಲಂಬಾಣಿಗರ ಹೋಳಿಹಬ್ಬಕ್ಕೆ ಸಂಬಂಧಿಸಿದಂತೆ ಸಮಗ್ರ ಮಾಹಿತಿಯನ್ನು ಒದಗಿಸುವ ಒಂದು ಮೌಲಿಕ ಕೃತಿ ಹರಿಲಾಲ ಪವಾರ ಹಾಗೂ ಪಂಡಿತ ಕೆ.ರಾಠೋಡ ಅವರದು.[೩೪]

---

೩೧. ವೀರಣ್ಣ ರಾಜೂರ (ಪ್ರಸಂ.), ಜಾನಪದ ಸಾಹಿತ್ಯದರ್ಶನ, ಭಾಗ – ೨೧, ೧೯೯೮, ಪು.ಸಂ.೯೭–೧೧೭.

೩೨. ಎಚ್.ವಿ.ನಾಗೇಶ (ಪ್ರಸಂ.), ಬರಹಬಾಗಿನ–ಹಂಪನಾ ಷಷ್ಟ್ಯಬ್ದಗ್ರಂಥ, ೧೯೯೬, ಪು.ಸಂ.೫೧೨–೫೧೫.

೩೩. ಎಚ್.ಜೆ.ಲಕ್ಕಪ್ಪಗೌಡ (ಪ್ರಸಂ.), ಜಾನಪದ ಗಂಗೋತ್ರಿ, ಸಂಪುಟ–೮, ಸಂಚಿಕೆ–೪, ಜೂನ್ ೧೯೯೭, ಪು.ಸಂ.೬೭–೭೭.

೩೪. ಹರಿಲಾಲ ಪವಾರ ಮತ್ತು ಪಂಡಿತ ಕೆ.ರಾಠೋಡ, ಲಂಬಾಣಿಗರಲ್ಲಿ ಹೋಳಿಹಬ್ಬ, ೧೯೯೭, ಪು.೩–೨೭.

ಕಾಮದಹನ ಅಥವಾ ಹೋಳಿಹಬ್ಬ ಕುರಿತು ಅಧ್ಯಯನ ಮಾಡುವ ಸಂಶೋಧಕರಿಗೆ ಹೊಸ ಹೊಳಹು ಹುಟ್ಟುವಂತೆ ಮಾಡುವಲ್ಲಿ ಕೃತಿ ಯಶಸ್ವಿಯಾಗಿದೆ.

ಹರಿಲಾಲ ಪವಾರ ಎಂಬ ವಿದ್ವಾಂಸ ಲಂಬಾಣಿ ಗೋತ್ರಗಳ ಬಗೆಗೆ ಬರೆಯುತ್ತ ರಜಪೂತ ಮತ್ತು ಬಂಜಾರ ಸಮುದಾಯಗಳು ಒಂದೇ ಆಗಿದ್ದು ಐತಿಹಾಸಿಕ ಕಾಲದಲ್ಲಿ ಬೇರ್ಪಟ್ಟು ಕೆಲವು ಭಿನ್ನ ಲಕ್ಷಣಗಳನ್ನು ಹೊಂದಿದವು, ಆದರೂ ಸಾಮ್ಯಗಳು ಅಸಂಖ್ಯವಾಗಿವೆ ಎಂಬುದನ್ನು ತಮ್ಮ ಕೃತಿಯಲ್ಲಿ ಎತ್ತಿ ಹೇಳಿದ್ದಾರೆ.[35] ಅಲ್ಲದೆ ಉಭಯ ಸಮುದಾಯಗಳಲ್ಲಿ ಕಂಡುಬರುವ ೮೦ ಗೋತ್ರಗಳನ್ನು ಪಟ್ಟಿಮಾಡಿ ಅವುಗಳ ಸಾಮ್ಯವನ್ನು ಸಂಶಯಕ್ಕೆಡೆಕೊಡದ ರೀತಿಯಲ್ಲಿ ಪ್ರತಿಪಾದಿಸಿದ್ದಾರೆ. ಹಾಗೆ ನೋಡಿದರೆ ಯಾವ ಸಮಾಜಶಾಸ್ತ್ರಜ್ಞನಿಗೂ ಕಡಿಮೆ ಇಲ್ಲದ ರೀತಿಯಲ್ಲಿ ಬಂಜಾರ ಗೋತ್ರಗಳನ್ನು ಈ ಕೃತಿಯಲ್ಲಿ ವಿವರಿಸಲಾಗಿದ್ದು, ಅದರ ಮೂಲ-ಚೂಲಗಳನ್ನು ಹುಡುಕುವ ಪ್ರಯತ್ನ ಇಲ್ಲಿ ಯಶಸ್ವಿಯಾಗಿ ಸಾಗಿದೆ ಎನ್ನಬೇಕಾಗುತ್ತದೆ.

ವೈ.ರೂಪ್ಲಾನಾಯಕ್ ಅವರ ಕೃತಿಯಲ್ಲಿ[36] ಒಟ್ಟು ೧೨ ಅಧ್ಯಾಯಗಳಿದ್ದು ಲಂಬಾಣಿ ಸಮಾಜದ ಒಟ್ಟಾರೆ ಸಂಸ್ಕೃತಿಯನ್ನು ಪರಿಚಯ ಮಾಡಿಕೊಡುತ್ತದೆ. ವಿವರಣಾತ್ಮಕವಾಗಿ ಮೂಡಿಬಂದಿರುವ ಈ ಕೃತಿ ವಿಶ್ಲೇಷಣೆಯ ದೃಷ್ಟಿಯಿಂದ ಸೊರಗಿದೆ. ಒಟ್ಟಾರೆ ಹೇಳುವುದಾದರೆ ಈ ಕೃತಿಯು ಮೌಲಿಕ ವಿವೇಚನೆಗಿಂತ ವೈಯಕ್ತಿಕ ಪ್ರಶಂಸೆಗೆ ಎಡೆಮಾಡಿಕೊಟ್ಟಿದೆ.

ಹರಿಲಾಲ ಪವಾರ ಅವರು ಲಂಬಾಣಿಗರ ಸಾಂಸ್ಕೃತಿಕ ವೀರ ಸೇವಾಲಾಲ ಅವರನ್ನು ಕುರಿತು ಬರೆದಿರುವ ಕೃತಿಯಲ್ಲಿ[37] ಸೇವಾಲಾಲ್ ಜನನದ(೧೫-೦೨-೧೭೩೯) ಸಮೀಕ್ಷೆ ಯೊಂದಿಗೆ ಜೀವನ ಸಾಧನೆ, ಅವತಾರಗಳು, ಪವಾಡ ಮುಂತಾದವುಗಳ ಸಂಪೂರ್ಣ ಮಾಹಿತಿಯನ್ನು ಒದಗಿಸಿ ಕೊಡುತ್ತಾರೆ. ಅಷ್ಟೇ ಅಲ್ಲ ಲಂಬಾಣಿ ಸಂಸ್ಕೃತಿಯನ್ನು ಕಟ್ಟುವಲ್ಲಿ ಸೇವಾಲಾಲ್ ಪಾತ್ರ ಏನು ಎಂಬುದನ್ನು ವಿದ್ವಾಂಸರು ಪರಿಚಯಿಸುತ್ತಾರೆ. ಅಲ್ಲದೆ ಸಂತ ಸೇವಾಲಾಲ್‌ನಿಗೆ ಸಂಬಂಧಿಸಿದ ಮಾಹಿತಿಗಳು ಆಧಾರ ಸಮೇತ ಲಭ್ಯವಾಗಿದ್ದು, ಈ ಕೃತಿಯ ಓದು ಸೇವಾಲಾಲನ ಬಗೆಗಿನ ಹೆಚ್ಚಿನ ಅಧ್ಯಯನಕ್ಕೆ ಚಾಲನೆ ನೀಡುತ್ತದೆ.

---

೩೫. ಹರಿಲಾಲ ಪವಾರ, ಬಂಜಾರ ಗೋತ್ರಗಳು, ೨೦೦೨.

೩೬. ವೈ.ರೂಪ್ಲಾನಾಯಕ್, ರಂಗುರಂಗಿನ ಬಂಜಾರ (ಲಂಬಾಣಿ) ಜನಾಂಗ, ೧೯೯೮.

೩೭. ಹರಿಲಾಲ ಪವಾರ, ಸಂತ ಸೇವಾಲಾಲ, ೧೯೯೮.

ಎಸ್. ಬೆಂಕ್ಯಾನಾಯ್ಕ ತಮ್ಮ ಎಂ.ಫಿಲ್. ಪ್ರಬಂಧದಲ್ಲಿ[೩೮] ಲಂಬಾಣಿ ಸಮುದಾಯದ ಥಾಲ್ಕಾ ಪಂಗಡದವರ ಸಂಸ್ಕೃತಿಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಲಂಬಾಣಿಗರು ಹಾಗೂ ಥಾಲ್ಕಾ ಪಂಗಡಗಳಿಗಿರುವ ಆಂತರಿಕ ವ್ಯತ್ಯಾಸಗಳನ್ನು ಗುರುತಿಸಿ ತೌಲನಿಕವಾಗಿ ಅಧ್ಯಯನ ನಡೆಸಿರುವುದು ಸ್ವಾಗತಾರ್ಹ ಪ್ರಯತ್ನವಾಗಿದೆ.

ಬಂಜಾರ ಸ್ಮರಣ ಸಂಚಿಕೆಯಲ್ಲಿ[೩೯] ಲಂಬಾಣಿ ಜನ, ಅವರ ಸಂಸ್ಕೃತಿ ಹಾಗೂ ವಿವಾಹ ಪದ್ಧತಿ ಕುರಿತಂತೆ ಸ್ಥೂಲವಾಗಿ ಪರಿಚಯಿಸಿರುವ ಈ ಸಂಚಿಕೆ ಅಧ್ಯಯನ ಯೋಗ್ಯವಾಗಿದೆ. ಮೈಸೂರಿನ ಜನಗಣತಿಯಲ್ಲಿ ಲೂಯಿಸ್ ರೈಸ್[೪೦] ಅವರು ಲಂಬಾಣಿಗರು ಜಿಪ್ಸಿ ಬುಡಕಟ್ಟಿಗೆ ಸೇರಿದವರೆಂಬುದನ್ನು ಸ್ಪಷ್ಟಪಡಿಸುತ್ತ ಅವರ ಉಡುಗೆ–ತೊಡುಗೆಗಳ ಬಗೆಗೆ ಅಪರೂಪದ ಮಾಹಿತಿ ನೀಡಿರುವುದನ್ನು ಗಮನಿಸಬಹುದು.

### ೨.೨ ಬಂಜಾರ ಸಮುದಾಯದ ವೈವಿಧ್ಯತೆಗಳು

ಕರ್ನಾಟಕದಲ್ಲಿ ವಾಸಿಸುತ್ತಿರುವ ಬೇರೆ ಬೇರೆ ಪಂಗಡದ ಜನಗಳಲ್ಲಿ ಬಂಜಾರರಷ್ಟು ನಮ್ಮ ಗಮನವನ್ನು ವಿಶೇಷವಾಗಿ ಸೆಳೆಯುವವರು ಬಹುಶಃ ಇನ್ನಾರು ಇಲ್ಲ. ಪೇಟೆ ಬೀದಿಗಳಲ್ಲಿ, ಸಂತೆ, ಸಮಾರಂಭ ಮತ್ತು ಅಂಗಡಿ ಮುಗ್ಗಟ್ಟುಗಳಲ್ಲಿ ಅವರನ್ನು ಗುರ್ತಿಸುವುದು ಸುಲಭ, ಅದರಲ್ಲೂ ಸ್ತ್ರೀಯರು ತಮ್ಮ ವೇಷಭೂಷಣಾಧಿಗಳಿಂದ ಇತರರಿಗಿಂತ ಭಿನ್ನವಾಗಿ ಎದ್ದು ಕಾಣುತ್ತಾರೆ. ಕೆಂಪು ಬಣ್ಣದ ರಂಗುರಂಗಿನ ಲಂಗ ಅದರ ಮೇಲೆ ಸೊಗಸಾದ ಕಸೂತಿಯ ಕೆಲಸ, ಬಟ್ಟೆಯೊಳಗೆ ಸೇರಿಸಿ ಹೊಲೆದಿರುವ ಗಾಜಿನ ಚೂರುಗಳು, ಕೈಯಲ್ಲಿ ದಂತದ ಬಳೆಗಳು, ಗಾಜಿನ ಬಳೆಗಳು, ಕೊರಳ ತುಂಬ ಬೇರೆ ಬೇರೆ ಲೋಹದ ಹಾರಗಳು, ಕೊರಳಪಟ್ಟಿ, ಮುಖದ ಅಕ್ಕಪಕ್ಕಗಳಲ್ಲಿ ಮುಂಗುರುಳಿಗೆ ಜೋಲಾಡುವಂತೆ ಕಟ್ಟಿರುವ ಬೆಳ್ಳಿಯ ಒಡವೆಗಳು, ಕೈ ಬೆರಳುಗಳ ತುಂಬಾ ಉಂಗುರಗಳು, ಕಾಲ್ಬೆರಳುಗಳಿಗೆ ಹಾಕುವ ಪಿಲ್ಲಿಗಳು, ಇಷ್ಟಲ್ಲದೆ ತಲೆಯ ಮೇಲೆ ಹೊದೆಯುವ ಪ್ರತ್ಯೇಕ ವಸ್ತ್ರವೂ, ಕೊನೆಗೆ ಎಲೆ ಅಡಿಕೆ ಸಂಚಿಯೂ ಆಕರ್ಷಕವಾಗಿರುತ್ತದೆ. ಗಂಡಸರ ವೇಷಭೂಷಣಗಳಲ್ಲಿ ಅಂತಹ

---

೩೮. ಎಸ್.ಬೆಂಕ್ಯಾನಾಯ್ಕ, ಲಂಬಾಣಿ ಸಮುದಾಯದ ಥಾಲ್ಕಾಪಂಗಡದ ಅಧ್ಯಯನ (ಅಪ್ರಕಟಿತ ಎಂ.ಫಿಲ್.ಪ್ರಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪.

೩೯. ಮನೋಹರ ಐನಾಪುರ (ಸಂ.), ಬಂಜಾರ ಸ್ಮರಣ ಸಂಚಿಕೆ, ಜಿಲ್ಲಾ ಬಂಜಾರ (ಲಂಬಾಣಿ) ಸಮ್ಮೇಳನ, ಬಿಜಾಪುರ, ೧೯೮೨.

೪೦. Lewis Rice, Report on the Mysore Census of 1881, P.69.

ವೈಶಿಷ್ಟ್ಯವಿರದಿದ್ದರೂ ವಿರಳವಾಗಿ ತಲೆಯ ಮೇಲೆ ಕೆಂಪು ರುಮಾಲು ಇರುತ್ತದೆ. ಈ ಜಾತಿಯ ಗಂಡಸರೂ, ಹೆಂಗಸರೂ ಎತ್ತರವಾಗಿ ದೃಢಕಾಯವುಳ್ಳವರೂ, ಬಣ್ಣ ಕೆಂಪು, ಅವರಲ್ಲಿ ಕಪ್ಪಗಿರುವವರು ಬಹಳ ಕಡಿಮೆ, ಅವರು ತಮ್ಮ ಪಂಗಡದವರನ್ನು 'ಗೋರ್‌ಬಾಯಿ' ಗಳೆಂದು ಕರೆಯುತ್ತಾರೆ. 'ಗೋರ್' ಎಂದರೆ ಕೆಂಪಗಿರುವ 'ಬಾಯಿ' ಎಂದರೆ ಸಹೋದರ ಎಂದರ್ಥ. ಬಹು ಕಷ್ಟಪಟ್ಟು ದುಡಿಯುವ ಜನ ಇವರು.

ಬಂಜಾರ ಎಂಬುದು ಅವರ ಜಾತಿಗೆ ಸಾಮಾನ್ಯವಾಗಿ ವಾಡಿಕೆಯಾಗಿರುವ ಹೆಸರು, ಉಳಿದವರು ಅವರನ್ನು ಲಂಬಾಣಿಗಳೆಂದೇ ಕರೆಯುತ್ತಾರೆ. ಲಂಬಾಣಿ ಎಂಬುದು ಈಗ ಒಂದು ರೀತಿಯ ಹಿನಾರ್ಥವನ್ನು ಪಡೆದಿದೆ. ಅವರು ತಮ್ಮನ್ನು ಲಂಬಾಣಿಗಳೆಂದು ಕರೆಯುವುದನ್ನು ವಿರೋಧಿಸುತ್ತಾರೆ. ಲಂಬಾಣಿ ಎಂಬುದು ತಮ್ಮನ್ನು ಸೂಚಿಸುವುದಿಲ್ಲವೆಂದೂ ತಮ್ಮ ಜಾತಿಯ ಒಂದು ಒಳಪಂಗಡವನ್ನು ಸೂಚಿಸುವುದೆಂದೂ ಹೇಳುತ್ತಾರೆ. ತಮ್ಮದು 'ಬಣಜಾರ' ಜಾತಿಯೆಂದು ಹೇಳುತ್ತಾರೆ. ಬಣ–ಜಾರ ಎಂಬುದು ಅವರು ವರ್ತಕರಾಗಿ ಇಲ್ಲಿಗೆ ಬಂದರೆಂಬುದನ್ನು ಸೂಚಿಸುತ್ತದೆ. ಅವರನ್ನು ಸುಕಾಲಿಗಳೆಂದೂ ಕರೆಯುವುದುಂಟು. ಆದರೆ ಈ ಮಾತನ್ನು ಮಾತ್ರ ಅವರು ಉಗ್ರವಾಗಿ ವಿರೋಧಿಸುತ್ತಾರೆ. ಈ ಜನರು ಲಂಬಾಣಿಗಳೆಂದೇ ಪ್ರಸಿದ್ಧವಾಗಿರುವುದರಿಂದ ಈ ಹೆಸರನ್ನೇ ಇಲ್ಲಿ ಹೆಚ್ಚಾಗಿ ಬಳಕೆಯಾಗಿರುತ್ತದೆ. ಅನೇಕರಿಗೆ 'ಬಣಜಾರ' ಎಂಬುದು ಈ ಗುಂಪಿಗೆ ಇರುವ ಇನ್ನೊಂದು ಹೆಸರು ಎಂಬುದೇ ಗೊತ್ತಿಲ್ಲ. ಈ ಮಾತು ಉಳಿದವರಲ್ಲಿ ಬಳಕೆಯಲ್ಲಿಲ್ಲವೇ ಇಲ್ಲ ಎಂದು ಹೇಳಬಹುದು. ಕರ್ನಾಟಕದ ದಕ್ಷಿಣ ತುದಿಯನ್ನು ಬಿಟ್ಟರೆ ಈ ಜನರು ಬಹುಮಟ್ಟಿಗೆ ಕರ್ನಾಟಕದಾದ್ಯಂತವೂ ಇದ್ದಾರೆ.

ಲಂಬಾಣಿಗಳು ಸಾಮಾನ್ಯವಾಗಿ ಇತರ ಜನರೊಡನೆ ಬೆರೆಯುವುದಿಲ್ಲ. ಇತರ ಜನರೊಡನೆ ಕೂಡಿ ಕೆಲಸ ಮಾಡುತ್ತಾರೆ. ಊರು ಸಂತೆ ಪೇಟೆಗಳಿಗೆ ಹೋಗುತ್ತಾರೆ. ಆದರೆ ಬೇರೆ ಜನರಿರುವ ಊರಿನ ಒಳಗೆ ಇತರರ ಜೊತೆಗೆ ಬದುಕಲು ಇಷ್ಟಪಡುವುದಿಲ್ಲ. ಊರಿನ ಹೊರಗಡೆ ತಮ್ಮದೇ ಆದ ಮನೆಗಳನ್ನು ಗುಂಪಾಗಿ ಕಟ್ಟಿಕೊಂಡು ವಾಸಿಸುತ್ತಾರೆ. ಅದನ್ನು 'ತಾಂಡ' ಎಂದು ಕರೆಯುತ್ತಾರೆ. ಹೀಗೆ ವಾಸಿಸಲು ಅವರು ಕೊಡುವ ಕಾರಣ. ಇತರರು ಸಾಕುವ ಕೋಳಿಗಳು ತಮ್ಮ ಮನೆಗಳನ್ನು ಪ್ರವೇಶಿಸಿ ಅಪವಿತ್ರಗೊಳಿಸಿ ಯಾವೂ ಎಂದೂ, ಹಾಗೆಯೇ ಅವರ ದೇವರು ಸೇವಾಭಾಯಿಗೂ ಕೋಳಿಗಳಿಗೂ ಆಗುವುದಿಲ್ಲ ಎಂಬ ನಂಬಿಕೆ ಇರುತ್ತದೆ. ತಾಂಡಾಕ್ಕೆ ಸಾಮಾನ್ಯವಾಗಿ ಪ್ರತ್ಯೇಕ ಹೆಸರಿರುವುದಿಲ್ಲ. ಆ ತಾಂಡದ ಹತ್ತಿರವಿರುವ ಹಳ್ಳಿಯ ಹೆಸರೇ ಆ ತಾಂಡಕ್ಕೂ ಇರುತ್ತದೆ(ಉದಾ: ನೀತಿಗೆರೆಯ

ಊರು ಬಳಿ ಇರುವ ತಾಂಡವನ್ನು ನೀತಿಗೆರೆ ತಾಂಡ). ಇವರಲ್ಲಿ ಗಂಡಸರ ಹೆಸರುಗಳು 'ನಾಯ್ಕ' ಎಂದೂ ಹೆಂಗಸರ ಹೆಸರುಗಳು 'ಬಾಯಿ' ಎಂದೂ ಕೊನೆಯಾಗುತ್ತವೆ. ಕೆಲವು ಹೆಸರುಗಳನ್ನು ಈ ಕೆಳಕಂಡಂತೆ ಕಾಣಬಹುದು.

ಗಂಡಸರು ಪೀಕಾನಾಯ್ಕ, ಹರ್ಯಾನಾಯ್ಕ, ದೇವ್ಲಾ ನಾಯ್ಕ, ಚಂದ್ರಾನಾಯ್ಕ, ಗಂಗಾನಾಯ್ಕ, ರೂಪ್ಲಾನಾಯ್ಕ, ಹೇಮಾನಾಯ್ಕ, ಮಿಟ್ಯಾನಾಯಕ್ ಇತ್ಯಾದಿಗಳು. ಹೆಂಗಸರು ರುದ್ರೀಬಾಯಿ, ರೂಪಾಬಾಯಿ, ರಮ್ಲೀಬಾಯಿ, ಸೀತಾಬಾಯಿ, ಕಮ್ಲೀಬಾಯಿ, ರಾದೀಬಾಯಿ, ಚಂದ್ರೀಬಾಯಿ, ತೊಲಚೀಬಾಯಿ, ಹುಸ್ಲೀ ಬಾಯಿ ಇತರೆ ಹೆಸರುಗಳು.

ಕೆಲವು ಗಂಡಸರ ಮತ್ತು ಹೆಂಗಸರ ಹೆಸರುಗಳಲ್ಲಿ ಬರುವ 'ಲ' ಕಾರವು ಗಮನಾರ್ಹ ವಾಗಿದೆ. ಹೊಯ್ಸಳರ ಕಾಲದ ಶಾಂತಲಾ-ಚಂದ್ರಲಾ ಎಂಬ ಹೆಸರುಗಳನ್ನು ಇಲ್ಲಿ ಜ್ಞಾಪಿಸಿ ಕೊಳ್ಳಬಹುದು. ಈ ಹೆಸರುಗಳಲ್ಲಿ ಕೆಲವು ಕನ್ನಡದ ಹೆಸರುಗಳು ವಿರಳವಾಗಿ ಕಾಣಿಸಿಕೊಳ್ಳುತ್ತವೆ. ಲಂಬಾಣಿಗಳ ಮೇಲೆ ಕನ್ನಡ ಮಾತನಾಡುವವರ ಜೀವನವಿಧಾನದ ಪ್ರಭಾವವು ಬಹುಪ್ರಮಾಣ ದಲ್ಲಿ ಆಗುತ್ತಿದೆ.ಇತರ ಹೆಂಗಸರಂತೆ ಇವರಲ್ಲೂ ಸೀರೆಗಳನ್ನುಡುವ ಪದ್ಧತಿ ಕ್ರಮೇಣ ಕಂಡುಬರುತ್ತದೆ. ಇನ್ನು ಕೆಲವು ಸಂಪ್ರದಾಯ ಪ್ರಿಯರು. ಅತ್ತ ಸಂಪ್ರದಾಯವನ್ನು ಬಿಡರು, ಇತ್ತ ಹೊಸ ಪ್ರಭಾವವನ್ನು ತಿರಸ್ಕರಿಸರು.

ಬಣಜಾರರು ಉತ್ತರದಿಂದ ಬಹುಶಃ ರಾಜಪುತಾಣದಿಂದ ದಕ್ಷಿಣಕ್ಕೆ ಬಂದು ನೆಲೆಸಿ ದವರು. ಹದಿನೇಳನೇ ಶತಮಾನದಲ್ಲಿ ಮಹಮ್ಮದೀಯರ ಸೇನೆಯ ಜೊತೆಯಲ್ಲಿ ಬಂದವರು. ಇವರ ಬಳಿ ಸಾವಿರಾರು ದನಕರುಗಳಿದ್ದವು. ಅವುಗಳ ಮೇಲೆ ಅವರು ಧಾನ್ಯಗಳನ್ನು ಹೇರಿಕೊಂಡು ಬಹುದೂರದ ಊರುಗಳಿಗೆ ಹೋಗಿ ವ್ಯಾಪಾರ ಮಾಡುತ್ತಿದ್ದರು. ಮಹಮ್ಮದೀಯರ ಸೇನೆಗೆ ಇವರು ಧಾನ್ಯವನ್ನು ಮಾರುವ ಹೊಣೆಯನ್ನು ಹೊತ್ತರು. ಬಹುದೂರದ ಶತ್ರು ಪ್ರದೇಶಗಳಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ಇವರು ನಿರ್ಭಯವಾಗಿ ಆಹಾರವನ್ನು ಸರಬರಾಜು ಮಾಡುತ್ತಿದ್ದರು. ಇವರನ್ನು ಯಾವ ಪಕ್ಷದವರೂ ಹಿಂಸಿಸುತ್ತಿರಲಿಲ್ಲ ವಂತೆ. ಬಹು ಧೈರ್ಯಶಾಲಿಯಾಗಿದ್ದು ಇವರ ತಂಟೆಗೆ ಇತರರು ಹೋಗಲು ಹೆದರುತ್ತಿದ್ದರು. ಇದರಿಂದಾಗಿ ಸೇನೆಗೆ ಆಹಾರ ಸರಬರಾಜು ನಿರಾಂತರಕವಾಗಿ ನೆಡೆಯುತ್ತಿದ್ದಿತು. ಸೇನೆಗಳ ಜೊತೆಯಲ್ಲಿ ದಕ್ಷಿಣಕ್ಕೆ ಬಂದ ಬಣಜಾರರಲ್ಲಿ ಹಲವರು ಇಲ್ಲಿಯೇ ನೆಲಸಿಬಿಟ್ಟರು.[೪೧]

---

೪೧. ಎಂ.ಚಿದಾನಂದ ಮೂರ್ತಿ, ಲಂಬಾಣಿ ಜನ ಮತ್ತು ಭಾಷೆ, ಸಂಶೋಧನಾ ತರಂಗ-೨, ಪುಟ-೧೦. ೧೯೭೦

ಅಲೆಮಾರಿಗಳಾಗಿದ್ದು, ಅವರು ಮಾರ್ಗ ಮಧ್ಯದಲ್ಲಿ ಪ್ರತ್ಯೇಕವಾಗಿ ಬಿಡಾರಗಳನ್ನು ಹೂಡುತ್ತಿದ್ದ ಪ್ರವೃತ್ತಿ ಈಗಲೂ ಅವರಲ್ಲಿ ಕಂಡುಬರುತ್ತಿದೆ. ಅವರೇ ಊರುಗಳ ಹೊರಗೆ ಪ್ರತ್ಯೇಕವಾಗಿ ಮನೆಗಳನ್ನು ಕಟ್ಟಿಕೊಂಡು ಬದುಕುತ್ತಾರೆ. ಈಗಲೂ ಅವರಲ್ಲಿ ಹಲವರ ಬಳಿ ಬಹುಸಂಖ್ಯೆಯ ದನಕರುಗಳನ್ನು ಕಾಣಬಹುದು.

ಅಧ್ಯಯನಕ್ಕೆ ಒಳಪಡಿಸಿಕೊಂಡಿರುವ ಮೂರು ಜಿಲ್ಲೆಗಳ ತಾಲ್ಲೂಕುಗಳಾದ ಕ್ರಮವಾಗಿ ಹೊಸದುರ್ಗ, ಕಡೂರು ಹಾಗೂ ಬಾಗೇಪಲ್ಲಿಯಲ್ಲಿ ಕಂಡುಬಂದಿರುವ ಒಟ್ಟು ೧೫ ತಾಂಡಗಳ ೨೦೦ ಕುಟುಂಬಗಳನ್ನು ಸಮೀಕ್ಷಿಸಿದಾಗ ಕಂಡುಬಂದಿರುವ ಅಂಶಗಳೆಂದರೆ,

ಪ್ರತಿತಾಂಡಗಳು ಪ್ರತಿ ಗ್ರಾಮಗಳಿಂದ ಕಾಲಳತ್ತೆ ದೂರದಲ್ಲಿದ್ದು ಪ್ರತ್ಯೇಕ ವಾಸಸ್ಥಾನಗಳಾಗಿವೆ. ಹೊಸದುರ್ಗ ತಾಲ್ಲೂಕಿನ ತಾಂಡಗಳ ಕುಟುಂಬಗಳಲ್ಲಿ ಸೀಮಿತ ಸಂಖ್ಯೆ ದನಕರುಗಳು ಕಂಡುಬಂದರೆ, ಕಡೂರು ತಾಲ್ಲೂಕಿನ ತಾಂಡಗಳಲ್ಲಿ ಅಪರೂಪಕ್ಕಷ್ಟೇ ಜಾನುವಾರುಗಳನ್ನು ಹೊಂದಿದ್ದರೆ, ಬಾಗೇಪಳ್ಳಿ ತಾಲ್ಲೂಕಿನ ತಾಂಡಗಳಲ್ಲಿ ಜಾನುವಾರು ಸಾಗಾಣಿಕೆ ಕ್ಷೀಣಿಸುತ್ತಿದ್ದು, ಆಗ್ಗಿಂದಾಗ್ಗೆ ಕಂಡುಬರುವ ಬರದಿಂದಾಗಿ ಹಾಗೂ ನಗರಗಳ ಕಡೆಗಿನ ವಲಸೆ ಪ್ರಕ್ರಿಯೆ ಯಿಂದಾಗಿ ಜಾನುವಾರುಗಳ ಆಯ್ಕೆಯನ್ನು ತಿರಸ್ಕರಿಸುತ್ತಿದ್ದಾರೆ. ಸರ್ಕಾರದ ಪಶುಸಂಗೋಪನೆ ಇಲಾಖೆಯಿಂದ ಉಚಿತವಾಗಿ ನೀಡಲಾಗುವ ಜಾನುವಾರು ಸಾಗಾಣಿಕೆಯನ್ನು ಸಹ ಪಡೆಯಲು ಕೇವಲ ಕೆಲವೇ ಕುಟುಂಬಗಳು ಆಸಕ್ತಿಯುಳ್ಳವುಗಳಾಗಿವೆ. ಹಾಗೆ ನೋಡಿದರೆ ಇಂತಹ ಸೌಲಭ್ಯವನ್ನು ವಿಸ್ತರಣೆ ಮಾಡುವಲ್ಲಿ ಹೊಸದುರ್ಗ ತಾಲ್ಲೂಕಿನ ತಾಂಡಗಳಲ್ಲಿನ ಕೃಷ್ಣಾಪುರ ಲಂಬಾಣಿ ತಾಂಡ, ಹನುಮನಹಟ್ಟಿ ತಾಂಡ ಮತ್ತು ಅಲಘಟ್ಟ ಲಂಬಾಣಿ ತಾಂಡಗಳಲ್ಲಿನ ೪೨ ಕುಟುಂಬಗಳಲ್ಲಿ ಮಾತ್ರ ಜಾನುವಾರುಗಳಾದ ದನ, ಕುರಿ, ಮತ್ತಿತರೆ ಪ್ರಾಣಿ ಸಾಕಾಣಿಕೆ, ಹೈನು ಉತ್ತನ್ನಗಳಾದ ಹಾಲು, ಮೊಸರು, ಬೆಣ್ಣೆ, ತುಪ್ಪಗಳನ್ನು ಕಾಣಬಹುದಾಗಿದೆ. ಉಳಿದ ಕುಟುಂಬಗಳಲ್ಲಿ ಯುವ ತರುಣರು ಶಿಕ್ಷಣ ಉದ್ಯೋಗದ ನಮಿತ್ತ ನಗರಗಳತ್ತ ಆಕರ್ಷಣೆಗೊಳ್ಳುತ್ತಿರುವ ಹಿನ್ನಲೆಯಲ್ಲಿ ಆಯಾ ಕುಟುಂಬಗಳ ಹಿರಿಯರ ತಲೆಮಾರಿಗೆಷ್ಟು ಜಾನುವಾರು ಸಾಗಾಣಿಕೆ ಸೀಮಿತವಾಗಿದ್ದು, ಅದರಲ್ಲೂ ಕೂಡ ಕೆಲವು ಕುಟುಂಬಗಳ ನಗರಗಳಲ್ಲಿರುವ ತಮ್ಮ ಮಕ್ಕಳ ಮನೆಗಳಿಗೆ ಹೋಗಿ ಬರುವ ಪರಿಪಾಟದಿಂದಾಗಿ ಜಾನುವಾರು ಸಾಗಾಣಿಕೆ ಕಷ್ಟಸಾಧ್ಯ ಎಂದು ಅಧ್ಯಯನದಿಂದ ತಿಳಿದು ಬಂದಿದೆ. ಆಯ್ಕೆ ಮಾಡಿಕೊಂಡಿರುವ ಒಟ್ಟು ತಾಂಡದ ಜನರು ಜನಪದ ಗೀತೆ, ಕಥೆಗಳಲ್ಲಿ 'ಗೋಮಾತೆ' ಕುರಿತ ಸಾತ್ವಿಕ ಭಾವನೆಗಳು ವ್ಯಕ್ತವಾಗುತ್ತವೆ. ಈ ಜನರು ಗೋಹತ್ಯೆಯನ್ನು ತುಂಬಾ ಪಾಪ ಕಾರ್ಯವೆಂದೂ ಭಾವಿಸುತ್ತಾರೆ.

## ೨.೩ ಬಂಜಾರರಲ್ಲಿ ಉಡುಗೆ ತೊಡುಗೆಗಳು

ಭಾರತೀಯ ಸಂಸ್ಕೃತಿಯಲ್ಲಿ ಉಡುಗೆ-ತೊಡುಗೆಗಳಿಗೆ ಮಹತ್ವದ ಸ್ಥಾನವಿದೆ. ಒಂದು ಸಮುದಾಯದ ಜನರು ಧರಿಸುವ ಬಟ್ಟೆಗಳು ಅವರ ಸಾಂಸ್ಕೃತಿಕ ಆಚರಣೆ, ಪರಿಸರದ ಪ್ರಭಾವ, ಶರೀರದ ರಕ್ಷಣೆ ಪ್ರಯತ್ನದ ಫಲವಾಗಿ ರೂಪುಗೊಂಡಿದೆ. ಭಾರತೀಯ ಮಹಿಳೆಯರಲ್ಲೇ ಹೆಚ್ಚು ಆಕರ್ಷಣೀಯವಾದ ಉಡುಪುಗಳನ್ನು ಲಂಬಾಣಿ ಮಹಿಳೆಯರು ಧರಿಸುತ್ತಾರೆಂಬುದು ಅವರ ಉಡುಗೆಗಳಿಂದಲೇ ಸಾಬೀತಾಗುತ್ತದೆ. ಸುಧೀರ್ಘ ಸಾಂಸ್ಕೃತಿಕ ಇತಿಹಾಸವಿರುವ ಈ ಸಮುದಾಯದ ವೇಷಭೂಷಣಗಳು ಇವರ ವೃತ್ತಿ-ಮನೋಧರ್ಮ, ಪರಿಸರದ ಪ್ರಭಾವ ಮತ್ತು ಕಲ್ಪನಾ ಸಾಮಾರ್ಥ್ಯ- ಈ ಹಿನ್ನಲೆಯಲ್ಲಿಯೂ ರೂಪುಗೊಂಡಿರುತ್ತವೆ. ಉಡುಗೆ ತೊಡುಗೆಗಳಲ್ಲಿ ಇತರ ಭಾರತೀಯ ಮಹಿಳೆಯರಿಗಿಂತ ಭಿನ್ನರಾಗಿ ನಿಲ್ಲುವ ಲಂಬಾಣಿ ಮಹಿಳೆಯರು ಧರಿಸುವ ಉಡುಪುಗಳನ್ನು ಕುರಿತಂತೆ ಹಲವು ಕತೆ ಐತಿಹ್ಯಗಳಿವೆ.

ಲಂಬಾಣಿಗರು ಬಹಳ ಕಾಲದವರೆಗೆ ಅಲೆಮಾರಿಗಳಾಗಿದ್ದುದರಿಂದ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಬರುವುದರ ಮೂಲಕ ಭಾರತದ ತುಂಬ ಹರಡಿದರು. ವೈವಿಧ್ಯಮಯವಾದ ಸಂಪ್ರದಾಯ-ಆಚರಣೆ-ನಂಬಿಕೆಗಳಿಂದ ಮತ್ತು ಉಡುಗೆ-ತೊಡುಗೆಗಳ ದೃಷ್ಟಿಯಿಂದ ಇವರು ತುಂಬಾ ವಿಶಿಷ್ಟವಾಗಿದ್ದಾರೆ. ಆಕರ್ಷಕ ಬಣ್ಣಗಳಿಂದ ಕೂಡಿದ ವಿವಿಧ ಉಡುಪುಗಳ ತಯಾರಿಕೆಯಲ್ಲಿ ಅವರು ಕಂಚು ಕನ್ನಡಿಗಳನ್ನು ಬಳಸಿ ಕುಸುರಿ ಕೆಲಸ ಮತ್ತು ನೇಕಾರಿಕೆಯನ್ನು ಮಾಡುತ್ತಾರೆ. ಜೊತೆಗೆ ಬೆಳ್ಳಿಬಂಗಾರದಿಂದ ಹಿಡಿದು ತಾಮ್ರ ಹಿತ್ತಾಳೆಯಂತಹ ಲೋಹದ ವಿವಿಧ ಆಭರಣಗಳನ್ನು ಬಳಸುತ್ತಾರೆ. ಅಲ್ಲದೆ ಕಟ್ಟಿಗೆಯ ದಿಂಡು-ಬೆಂಡುಗಳಿಂದ ತಯಾರಿಸಿದ ಉಡುಪು ನೋಡುಗರನ್ನು ಆಕರ್ಷಿಸುತ್ತದೆ. ಆದ್ದರಿಂದಲೇ ಲಂಬಾಣಿಗರು ಇತರ ಯಾವುದೇ ಜನಪದ ಗುಂಪುಗಳಿಗಿಂತ ತುಂಬಾ ವಿಲಕ್ಷಣವುಳ್ಳವರಾಗಿರುತ್ತಾರೆ. ಈ ದೃಷ್ಟಿಯಿಂದ ಲಂಬಾಣಿಗರ ಉಡುಗೆ-ತೊಡುಗೆಗಳು ಅತ್ಯಂತ ಚಿತ್ತಾಕರ್ಷಕವಾಗಿದ್ದು ಮೊದಲ ನೋಟಕ್ಕೆ ಇದು 'ಲಂಬಾಣಿಗರ ವೇಷ' ಎಂದು ಹೇಳುವಷ್ಟು ರಮಣೀಯವಾಗಿರುತ್ತವೆ ಮತ್ತು ಅನನ್ಯತೆಯನ್ನು ಹೊಂದಿರುತ್ತವೆ. ಈ ಉಡುಗೆಗಳನ್ನು ವಿಶೇಷವಾಗಿ ಬಾಲಿಕೆಯರು ಮತ್ತು ಮಹಿಳೆಯರಿಗೆ ಸಂಬಂಧಿಸಿದವುಗಳೆಂದು ಭಾವಿಸುವುದು ಸೂಕ್ತ. ಲಂಬಾಣಿ ಪುರುಷರ ಉಡುಗೆಗಳಲ್ಲೂ ಅಷ್ಟೇ ವಿಶೇಷತೆ ಕಂಡುಬರುತ್ತದೆ.

ಲಂಬಾಣಿ ಮಹಿಳೆಯರು ಧರಿಸುವ ಬಟ್ಟೆಗಳನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಒಂದು, ತಲೆಯಮೇಲೆ ಹೊದ್ದುಕೊಳ್ಳುವ ದೊಡ್ಡದಾದ ವಸ್ತ್ರ(ಭಾಂಟಿಯಾ),

ಎರಡು, ಕುತ್ತಿಗೆಯಿಂದ ಸೊಂಟದವರೆಗೆ ಮುಂಭಾಗವನ್ನು ಆವರಿಸುವ ಕುಪ್ಪಸ(ಕಾಂಚಳಿ), ಮೂರನೆಯದು ಸೊಂಟದಿಂದ ಕಾಲಿನವರೆಗಿನ ಭಾಗಗಳನ್ನು ಮರೆಮಾಚುವ ಮತ್ತೊಂದು ವಸ್ತ್ರ(ಫೇಟಿಯಾ), ಭಾರತೀಯ ಎಲ್ಲಾ ಮಹಿಳೆಯರಲ್ಲಿಯೂ ಈ ಮೂರು ಬಗೆಯ ವಸ್ತ್ರಗಳು ಪ್ರಧಾನವಾಗಿರುವುದನ್ನು ಕಾಣಬಹುದು. ಆಯಾ ಪ್ರಾದೇಶಿಕ ಔಚಿತ್ಯಕ್ಕೆ ತಕ್ಕಂತೆ ಪ್ರತ್ಯೇಕ ಭಾಗಗಳಿಗೆ ಪ್ರತ್ಯೇಕವಾದ ಬಟ್ಟೆಗಳನ್ನು ಧರಿಸುವ ಕ್ರಮ ಭಾರತೀಯರಲ್ಲಿದೆ.

ಲಂಬಾಣಿ ಮಹಿಳೆಯರು ಧರಿಸುವ ಆಕರ್ಷಣೀಯ ಉಡುಪುಗಳ ಬಗೆಗೆ ಅವರಲ್ಲಿ ಐತಿಹ್ಯವೊಂದು ಪ್ರಚಲಿತವಿದೆ. ಅವರ ಮೂಲಪುರುಷ 'ದಾದಾಮೋಲ' ಮತ್ತು 'ರಾಧಿದಾದಿ ಯರು ದೊಂಬರಾಟವನ್ನಾಡುತ್ತ ರಾಜಸ್ಥಾನ, ಗುಜರಾತ್ ಮತ್ತು ಮಹಾರಾಷ್ಟ್ರಗಳಲ್ಲಿ ಸಂಚರಿ ಸುತ್ತಿರುತ್ತಾರೆ. ಹೀಗೆ ಸಂಚರಿಸುತ್ತಾ ಮಹಾರಾಷ್ಟ್ರದ ಒಂದು ಸ್ಮಶಾನ ಮಾರ್ಗವಾಗಿ ಬಂದಾಗ, ಅಲ್ಲಿ ಆಕಸ್ಮಿಕ ಮರಣಕ್ಕೆ ತುತ್ತಾಗಿದ್ದ ಮಾರವಾಡಿ ಹುಡುಗಿಯನ್ನು ಹೂಳಿರುತ್ತಾರೆ. ರಾಧಿದಾದಿಯು ತನ್ನಲ್ಲಿರುವ ಅಪಾರ ಮಂತ್ರಶಕ್ತಿಯಿಂದ ಮರಣಿಸಿದ್ದ ಹುಡುಗಿಯನ್ನು ಬದುಕಿಸುತ್ತಾಳೆ. ಬೆತ್ತಲಿದ್ದ ಆ ಹುಡುಗಿಗೆ ತನ್ನ ಮೇಲುಹೊದಿಕೆಯನ್ನು ಹರಿದು ಎರಡು ತುಂಡುಮಾಡಿ ಒಂದು ತುಂಡು ಸೊಂಟಕ್ಕೆ ಮತ್ತೊಂದು ತುಂಡು ಎದೆಗೆ ಕಟ್ಟಿಕೊಳ್ಳಲು ಕೊಡುತ್ತಾಳೆ. ಆ ಎರಡು ತುಂಡು ಬಟ್ಟೆಗಳನ್ನೇ ಲಂಬಾಣಿ ಮಹಿಳೆಯರು ತಮ್ಮ ಮೂಲ ಬಟ್ಟೆಗಳೆಂದು ಭಾವಿಸುತ್ತಾರೆ. ಈ ಐತಿಹ್ಯ ಲಂಬಾಣಿ ಮಹಿಳೆಯರು ಧರಿಸುವ ಪರಿಮಿತ ಉಡುಪುಗಳ ಬಗೆಗೆ ನಿರ್ದಿಷ್ಟ ಮಾಹಿತಿಯನ್ನು ಒದಗಿಸುತ್ತದೆ. ಲಂಬಾಣಿ ಮಹಿಳೆಯರ ಉಡುಪುಗಳು ಗುಜರಾತ್, ರಾಜಸ್ಥಾನ್, ಮಹಾರಾಷ್ಟ್ರದ ಮಹಿಳೆಯರ ಉಡುಪುಗಳಿಗಿಂತ ಭಿನ್ನವಾದ ಕಸೂತಿಕಲೆಗಳಿಂದ ಕೂಡಿರುತ್ತವೆ. ಹೆಂಗಸರ ಉಡುಗೆ-ತೊಡುಗೆಗಳು ಇಷ್ಟೊಂದು ಆಕರ್ಷಣೀಯ ಮತ್ತು 'ಸಮೃದ್ಧ'ವಾಗಿರುವುದರ ಹಿಂದೆ ಬುಡಕಟ್ಟು ಸಮುದಾಯದ ಸ್ತ್ರೀಯರ ಅಲಂಕಾರ ಪ್ರಜ್ಞೆ ಅಡಗಿದೆ ಎಂದು ಹೇಳಬಹುದು.

ಲಂಬಾಣಿ ಹೆಣ್ಣು ಮಕ್ಕಳು ತಮ್ಮ ಉಡುಗೆಗಳಿಗೆ ಅಲ್ಲಲ್ಲಿ ಗಾಜಿನ ಬಿಲ್ಲೆಗಳನ್ನು ಹಾಕಿ ಹೊಲಿದುಕೊಳ್ಳುವುದಕ್ಕೆ ಇರುವ ಒಂದು ಕಾರಣವನ್ನು ಹೀಗೆ ವಿವರಿಸಬಹುದು. ಲಂಬಾಣಿಗರ ಮೂಲಸ್ಥಾನ ರಾಜಸ್ಥಾನ ಎಂಬುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಲಂಬಾಣಿ ಹೆಣ್ಣುಮಕ್ಕಳು ಕಾಡು-ಮೇಡುಗಳಲ್ಲಿ ಅಲೆದು ಕಟ್ಟಿಗೆಗಳನ್ನು ಕಡಿದುತಂದು ಮಾರುತ್ತಿದ್ದರು. ನೆತ್ತಿಯ ಮೇಲೆ ಸುಡುಬಿಸಿಲು, ತಲೆಯಮೇಲೆ ಭಾರವಾದ ಕಟ್ಟಿಗೆಯ ಹೊರೆ, ಸುಡುಬಿಸಿಲಿನ ಬೇಗೆಯನ್ನು ತಮ್ಮ ಮೈಗೆ ತಾಗದಂತೆ ಕಾಪಾಡಿಕೊಳ್ಳಲಿಕ್ಕೆ ಹೆಣ್ಣುಮಕ್ಕಳು ತಮ್ಮ ಉಡುಗೆಗಳಿಗೆ

ಗಾಜಿನ ಬಿಲ್ಲೆಗಳನ್ನು ಉಪಯೋಗಿಸಿದಂತೆ ಕಾಣುತ್ತದೆ. ಗಾಜಿನ ಬಿಲ್ಲೆಗಳಿಂದ ಸೂರ್ಯನ ಕಿರಣಗಳು ನೇರವಾಗಿ ಮೈಗೆ ತಾಕದೆ ಪ್ರತಿಫಲವಾಗುತ್ತವೆ. ಉಷ್ಣತೆ ಹೆಚ್ಚಾಗದಂತೆ ತಡೆ ಗಟ್ಟುವಲ್ಲಿ ಇವು ಸಹಕಾರಿಯಾಗುತ್ತವೆ. ಈ ವೈಜ್ಞಾನಿಕ ದೃಷ್ಟಿಯಿಂದ ಲಂಬಾಣಿ ಹೆಣ್ಣುಮಕ್ಕಳು ತಮ್ಮ ಉಡುಗೆಗಳಿಗೆ ಗಾಜಿನಬಿಲ್ಲೆಗಳನ್ನು ಉಪಯೋಗಿಸಿರಬಹುದೆಂದು ವಿಶ್ಲೇಷಣೆ ಮಾಡಬಹುದು.

ಲಂಬಾಣಿ ಮಹಿಳೆಯರು ತಮ್ಮ ಉಡುಪುಗಳಿಗೆ ಕವಡೆ, ಕಾಸು, ಗೊಂಡೆ, ಗೆಜ್ಜೆ ಇತ್ಯಾದಿಗಳನ್ನು ಸೇರಿಸಿ ಹೊಲಿದಿರುತ್ತಾರೆ. ನೋಡುವವರಿಗೆ ಇದು ವಿಚಿತ್ರವೆನಿಸಿದರೂ, ಇದಕ್ಕೆ ಅದರದೆಯಾದ ಹಿನ್ನೆಲೆಯಿದೆ. ಪುರಾತನ ಕಾಲದಲ್ಲಿ ತಮ್ಮ ಪೂರ್ವಜರು ಅಲೆಮಾರಿ ಗಳಾಗಿದ್ದು, ವ್ಯಾಪಾರಕ್ಕಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಕಾಡು-ಮೇಡುಗಳ ಮೂಲಕ ತಮ್ಮ ದನಕರುಗಳ ಮೇಲೆ ಆಹಾರ ಪದಾರ್ಥಗಳನ್ನು ಹೇರಿಕೊಂಡು ಸಂಚರಿಸುವ ಅನಿವಾರ್ಯತೆ ಇತ್ತು. ಆಗ ಕಾಡುಪ್ರಾಣಿಗಳಿಂದ ವಿಷಜಂತುಗಳಿಂದ ರಕ್ಷಿಸಿಕೊಳ್ಳಲು ಈ ಬಗೆಯ ಉಡುಪುಗಳ ಅವಶ್ಯಕತೆ ಇತ್ತು. ಲಂಬಾಣಿ ಮಹಿಳೆಯರು ಕಾಡು-ಮೇಡುಗಳಲ್ಲಿ ನಡೆದು ಬರುತ್ತಿದ್ದರೆ ತಮ್ಮ ಉಡುಪಿನಲ್ಲಿ ಸೇರಿಸಿರುವ ಕವಡೆ, ಕಾಸು, ಗೊಂಡೆ ಗೆಜ್ಜೆಗಳ ಸದ್ದಿನಿಂದಾಗಿ ದುಷ್ಟಜಂತುಗಳು ದೂರಸರಿಯುತ್ತಿದ್ದವು. ಈ ಆಶಯದಿಂದಾಗಿ ಬಟ್ಟೆಗಳಿಗೆ ಇವನ್ನೆಲ್ಲ ಹಾಕಿಕೊಳ್ಳುತ್ತಿದ್ದರೆಂದು ತಿಳಿದುಬಂದಿದೆ. ಇದು ಇವತ್ತಿಗೂ ರೂಢಿಗತವಾಗಿ ಬೆಳೆದುಬಂದಿರುವುದನ್ನು ಕಾಣುತ್ತೇವೆ.

**ಬಂಜಾರ ಮಹಿಳೆಯರ ವಯೋಮಾನದ ಉಡುಗೆಗಳು**

ಬಂಜಾರ ಮಹಿಳೆಯರ ಉಡುಗೆಗಳನ್ನು ವಯೋಮಾನದ ಹಿನ್ನಲೆಯಲ್ಲಿ- ಮಕ್ಕಳು, ಯುವತಿಯರು, ಮದುಮಗಳು, ಗೃಹಿಣಿ, ವೃದ್ಧೆಯರು, ಸುಮಂಗಲಿಯರು, ವಿಧವೆಯರು ಹಾಗೂ ಸಾಮಾನ್ಯ ಮತ್ತು ವಿಶೇಷ ಸಂದರ್ಭದ ಉಡುಗೆಗಳ ಪ್ರಕಾರಗಳನ್ನು ಕಾಣಬಹುದು.

• **ಮಕ್ಕಳು:** ಹುಟ್ಟಿದ ಹೆಣ್ಣು ಮಗುವಿಗೆ ಹದಿನೈದು ದಿನಗಳವರೆಗೆ ತೆಳುವಾದ ಬಟ್ಟೆ ಹೊದಿಸುತ್ತಾರೆ. ಆಮೇಲೆ 'ಛಾಂಟಿಯಾ' ಬಟ್ಟೆತಂದು ಕಲಾತ್ಮಕವಾಗಿ ಕತ್ತರಿಸಿ ಮನೆಯಲ್ಲಿ ಸಿದ್ಧಪಡಿಸಿ 'ಮೇಕಳ್ಯಾ'(ಅಂಗಿ) ಮತ್ತು ಟೋಪಿ ಉಡಿಸುತ್ತಾರೆ.

• **ಬಾಲಿಕೆಯರಿಗೆ:** ಮೂರು ವರ್ಷದಿಂದ ಋತುಮತಿಯಾಗುವವರೆಗೆ ಸಾಡಿಬಟ್ಟೆಯಿಂದ 'ಖಲಿಯಾ'(ಜಂಪರ್) ಸಿದ್ಧಪಡಿಸಿ ಉಡಿಸುತ್ತಾರೆ. ತೀರ ಬಡವರಾದವರು ಪಡ್ಕಿ(ದಾವಣಿ) ಯನ್ನು ಉಟ್ಟುಕೊಳ್ಳುತ್ತಾರೆ. ಯುವತಿಯರು: ಮೂರು ಮೊಳದ 'ಫೇಟಿಯಾ'(ಲಂಗ),

‘ಕಾಂಚಳಿ’(ಕುಪ್ಪಸ) ಮತ್ತು ‘ಪಾಂಬಡಿ’(ಮೇಲು ಹೊದಿಕೆ) ಉಡಿಸುತ್ತಾರೆ. ಮದುವೆಯಾಗುವವರೆಗೆ ಸಾಮಾನ್ಯವಾಗಿ ಈ ಉಡುಪಿನಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

• **ಮದುಮಗಳು:** ಮದುವೆಯಲ್ಲಿ ಹಸೆಮಣೆಯ ಮೇಲೆ ವಧುವಿಗೆ ಹಳದಿಸೀರೆ ಮತ್ತು ಮಕಮಲ್ಲಿನ ಕುಪ್ಪಸ ಉಡಿಸಿ, ಕುಪ್ಪಸದ ಬೆನ್ನು ಭಾಗದ ಮೇಲೆ ‘ಸಾಂಕ್ಯಪೂರೇರೋ’ (ಸ್ವಸ್ತಿಕ್ ಚಿಹ್ನೆ) ತೆಗೆಯುತ್ತಾರೆ. ಅಕ್ಷತೆ ಮುಗಿದು ಗಂಡನ ಮನೆಗೆ ಕಳುಹಿಸುವ ಮುನ್ನ ವಧುವಿಗೆ ‘ಕಾಂಚಳಿ’, ‘ಫೇಟಿಯಾ’ ಮತ್ತು ‘ಛಾಂಟಿಯಾ’– ಈ ಉಡುಪುಗಳನ್ನು ಉಡಿಸಿ ಸಂಪ್ರದಾಯದಂತೆ ಗಂಡನ ಮನೆಗೆ ಕಳುಹಿಸಿಕೊಡುತ್ತಾರೆ. ಈ ಸಂದರ್ಭದಲ್ಲಿ ಎಲ್ಲ ಬಟ್ಟೆಗಳನ್ನು ಒಂದು ‘ಕೋತಳಿ’ಯಲ್ಲಿ ಹಾಕಿ ಕಳುಹಿಸುತ್ತಾರೆ.

• **ಗೃಹಿಣಿಯರು:** ಗೃಹಿಣಿಯರು ‘ಫೇಟಿಯಾ’, ‘ಕಾಂಚಳಿ’, ‘ಛಾಂಟಿಯಾ’ವನ್ನು ಉಡುತ್ತಾರೆ. ಗೃಹಿಣಿಯ ತಲೆಯ ಮೇಲೆ ಯಾವಾಗಲೂ ‘ಘುಂಘಟೋ’(ಸೆರಗು) ಇರಲೇಬೇಕು. ಹಿರಿಯರ ಎದುರಿಗಿದ್ದಾಗ ಅಪ್ಪಿತಪ್ಪಿಯೂ ತಲೆಯ ಮೇಲಿನ ಸೆರಗು ಜಾರುವಂತಿಲ್ಲ. ತಲೆಯಮೇಲೆ ಸೆರಗಿಲ್ಲದಂತೆ ಓಡಾಡುವ ಸ್ತ್ರೀಯರಿಗೆ ಇವರ ಬಳಗದಲ್ಲಿ ಮಾನ್ಯತೆ ಕಡಿಮೆ. ಹಾಗಾಗಿ ಗೃಹಿಣಿಯರಿಗೆ ತಲೆಯ ಮೇಲೆ ಸೆರಗು ಇರಲೇಬೇಕು.

• **ವೃದ್ಧೆಯರು:** ತಮ್ಮ ಮುಪ್ಪಿನ ಕಾಲದಲ್ಲಿ ವೃದ್ಧೆಯರು ‘ಕೋತಳಿ’(ಚೀಲ)ಗಳಲ್ಲಿ ಕಟ್ಟಿಟ್ಟ, ಓಬಿರಾಯನ ಕಾಲದ ಬಟ್ಟೆಗಳನ್ನು ಹೊರತೆಗೆದು ಇರುವತನಕ ಉಟ್ಟುಕೊಂಡು ಇರೋಣ ಎಂದು ಬಯಸುತ್ತಾರೆ. ಬಡವರಾದರೂ ಸಹ ಸಾಲಸೋಲ ಮಾಡಿಯಾದರೂ ತಮ್ಮ ಪೋಷಾಕುಗಳನ್ನು ಸಿದ್ಧಪಡಿಸಿಕೊಂಡು ಧರಿಸಿಕೊಳ್ಳುವರು.

• **ಸುಮಂಗಲಿಯರು:** ಸುಮಂಗಲಿಯರು ಎಲ್ಲ ಬಗೆಯ ವೇಷಭೂಷಣಗಳನ್ನು ಧರಿಸಬಹುದಾಗಿದೆ. ಅವರ ಸಂಸ್ಕೃತಿಯ ಪ್ರತೀಕವಾದ ‘ಫೇಟಿಯಾ’, ‘ಕಾಂಚಳಿ’ ಮತ್ತು ‘ಛಾಂಟಿಯಾ’ ಅಥವಾ ‘ಘುಂಘಟೋ’ವನ್ನು ಧರಿಸುವುದರೊಂದಿಗೆ ಮುತ್ತೈದೆ ಸೂಚಕವಾದ ‘ಘುಘರಿ’, ‘ಚೂಡೋ’, ‘ಬಲ್ಯಾ’ಗಳನ್ನು ತೊಡುತ್ತಾಳೆ. ‘ಕಾಂಚಳಿ’(ಕುಪ್ಪಸ)ಯ ಎಡಭುಜದ ಮೇಲೆ ‘ಖವ್ಯಾ’ ಮತ್ತು ಎದೆಯ ಮೇಲೆ ‘ಛಾತ್ಯಾ’ ಇರುತ್ತದೆ.

• **ವಿಧವೆಯರು:** ವಿಧವೆಯರು ವಿಶೇಷವಾದ ಹಾಗೂ ಅಲಂಕಾರಯುಕ್ತ ವೇಷಭೂಷಣಗಳನ್ನು ಧರಿಸಲು ನಿಷೇಧವಿದೆ. ಗಂಡ ಸತ್ತ ಬಳಿಕ ಹೆಣ್ಣಿನ ಜೀವನ ಕರಾಳತೆಯಿಂದ ಕೂಡಿರುತ್ತದೆ. ಹೆಣವನ್ನು ಸ್ಮಶಾನಕ್ಕೆ ಒಯ್ದಾಗ, ಇತ್ತ ವಿಧವೆಯ ಮೈಮೇಲಿನ ಮುತ್ತೈದೆ ಸಂಕೇತದ ಉಡುಗೆಗಳನ್ನು ಇಬ್ಬರು ವಿಧವೆಯರು ಬಂದು ತೆಗೆಯುತ್ತಾರೆ. ಆಕೆಯ

'ಘುಂಘಟೋ'(ಸೆರಗು) 'ಕಾಂಚಳಿ'(ಕುಪ್ಪಸ)ಯ ಎಡ ಭುಜದ ಮೇಲಿರುವ 'ಖವ್ಯಾ' ಮತ್ತು ಎದೆಯ ಮೇಲೆ ಹಾಕಿರುವ 'ಛಾತ್ಯಾ' ಇವುಗಳನ್ನು ತೆಗೆಯುತ್ತಾರೆ. ಇದರೊಂದಿಗೆ 'ಘುಘುರಿ', 'ಬಲ್ಯಾ' 'ಚೂಡೋ'– ಈ ತೊಡುಗೆಗಳನ್ನು ತೆಗೆದುಬಿಡುತ್ತಾರೆ.

• **ನಿತ್ಯ ಧರಿಸುವ ಉಡುಗೆಗಳು:** ಲಂಬಾಣಿ ಮಹಿಳೆಯರು ನಿತ್ಯ ಧರಿಸುವ ಉಡುಗೆಗಳೆಂದರೆ, 'ಫೇಟಿಯಾ', 'ಕಾಂಚಳಿ' ಮತ್ತು ಒಂದು 'ಟುಕ್ರಿ' ಅಥವಾ ಸಾದಾ ಬಟ್ಟೆ ಹಾಕಿರುತ್ತಾರೆ. ಕನ್ನಡಿ, ಕಾಸು, ಗೆಜ್ಜೆ, ಗೊಂಡೆಗಳಿಂದ ತಯಾರಿಸಿದ 'ಛಾಂಟಿಯಾ' (ಮೇಲ್ಹುಸುಕು)ವನ್ನು ಹೊದ್ದುಕೊಳ್ಳುವುದಿಲ್ಲ. ಏಕೆಂದರೆ ಇವನ್ನು ದಿನನಿತ್ಯ ಬಳಸುವುದರಿಂದ ಆಕರ್ಷಣೆ ಕಳೆದುಕೊಳ್ಳುವುದರೊಂದಿಗೆ ತೊಳೆಯುವುದು ಕಷ್ಟ. ಆದುದರಿಂದ ನಿತ್ಯ ಧರಿಸುವ ಉಡುಗೆಗಳಿಗೆ ಆದಷ್ಟು ಕಡಿಮೆ ಹಣ ಖರ್ಚು ಮಾಡಿ ಉಡುಪು ಸಿದ್ಧಪಡಿಸಿ ಧರಿಸಿಕೊಳ್ಳುತ್ತಾರೆ.

• **ವಿಶೇಷ ಸಂದರ್ಭದ ಉಡುಗೆಗಳು:** ಉಪವಾಸ ಇದ್ದರೂ ಪರವಾಗಿಲ್ಲ ವಿಶೇಷ ಸಂದರ್ಭಗಳಲ್ಲಿ ಶುಭ್ರವಾದ ಕಲಾತ್ಮಕವಾದ ಬಟ್ಟೆಗಳೇಬೇಕೆಂದು ಬಯಸುವ ಮಹಿಳೆಯರಿಗೆ ಹಬ್ಬ–ಹರಿದಿನ ಮದುವೆ ಮುಂಜಿಗಳೆಂದರೆ ಪಂಚಪ್ರಾಣ. ಇಂತಹ ಸಂದರ್ಭಗಳಲ್ಲಿ ತಮ್ಮ ಪೆಟ್ಟಿಗೆಯಲ್ಲಿ ಕಟ್ಟಿಟ್ಟಿರುವ ಹೊಸ ಹೊಸ ಬಟ್ಟೆಗಳನ್ನು ಹೊರತೆಗೆದು ಅವುಗಳನ್ನು ಉಟ್ಟು ಸಂತೋಷಪಡುತ್ತಾರೆ. ಈ ಸಂದರ್ಭದಲ್ಲಿನ ಬಟ್ಟೆಗಳು ಸಂಪೂರ್ಣವಾಗಿ ಕಸೂತಿ, ವಿವಿಧ ಕುಸುರಿ ಅಲಂಕಾರದಿಂದ ಕೂಡಿರುತ್ತವೆ. ಮತ್ತೆ ಈ ಬಟ್ಟೆ ಹೊರಬರಬೇಕೆಂದರೆ ಇನ್ನೊಂದು ಹಬ್ಬ ಅಥವಾ ಮದುವೆ–ಮುಂಜಿ ಸಂದರ್ಭ ಒದಗಿಬರಬೇಕು. ಈ ರೀತಿಯ ಅಲಂಕರಣಗೊಂಡ ಉಡುಪುಗಳನ್ನು ಸ್ತ್ರೀಯರೇ ಧರಿಸುತ್ತಾರೆ. ಅದರಲ್ಲಿಯೂ ಸ್ತ್ರೀಯರು ಸಂದರ್ಭಕ್ಕನುಗುಣವಾಗಿ ಬಟ್ಟೆ ತೊಡುತ್ತಾರೆ. ಬಾಲಿಕೆಯಾಗಿದ್ದಾಗಿನ ಉಡುಪಿಗಿಂತ ಕನ್ಯೆಯಾಗಿದ್ದಾಗಿನ ಉಡುಪೇ ಬೇರೆಯಾಗಿರುತ್ತದೆ. ಅದರಂತೆ ಕನ್ಯೆಯಾಗಿದ್ದಾಗಿನ ಉಡುಪಿಗಿಂತ ಮದುವೆಯಾದಾಗಿನ ಉಡುಗೆ ಬೇರೆಯಾಗಿರುತ್ತದೆ. ಹಾಗೆಯೇ ವಿಧವೆಯಾದಾಗಿನ ಉಡುಪು ಬೇರೆಯಾಗಿರುತ್ತದೆ. ಆದರೆ ಪುರುಷರು ವಿಧುರರಾದಾಗ ಅವರ ಉಡುಗೆಗಳಲ್ಲಿ ಇಂತಹ ಯಾವುದೇ ಬದಲಾವಣೆ ಕಂಡುಬರುವುದಿಲ್ಲ.

• **ಗಂಡಸರ ಉಡುಗೆಗಳು:** ಲಂಬಾಣಿ ಪುರುಷರ ಉಡುಪುಗಳು ವಿಶೇಷವಿರುವುದನ್ನು ಕಾಣುತ್ತೇವೆ. ಪ್ರದೇಶದಿಂದ ಪ್ರದೇಶಕ್ಕೆ ಇವರ ಉಡುಪುಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಕಂಡುಬರುತ್ತದೆ. ದೃಢಕಾಯರು, ಸುಂದರವಾದ ಮೈಕಟ್ಟುಳ್ಳವರೂ ಆದ ಲಂಬಾಣಿ ಗಂಡಸರಿಗೆ ಮದುವೆ ಸಮಾರಂಭಗಳಲ್ಲಿ ವಿಶೇಷವಾದ ಉಡುಗೆಗಳಿರುತ್ತವೆ.

• **ಬಾಲಕರಿದ್ದಾಗ:** 'ಮಾಂಜರಪಟ್ಟಿ ಛಾಟಿ' ಮತ್ತು ಅಂಗಿ, ಉದ್ದನೆಯ ಕಚೋಟಿ (ಲಂಗೋಟಿ) ಉಟ್ಟುಕೊಳ್ಳುತ್ತಿದ್ದರು. ಕೆಲವರಂತೂ ಲಂಗೋಟಿ ಹಾಕದೆಯೇ ಉದ್ದನೆಯ ಒಂದು ಅಂಗಿಯಮೇಲೆ ಇರುತ್ತಿದ್ದರು.

• **ಮದುಮಗ:** ಮದುವೆಯಲ್ಲಿ ಮದುಮಗಳು ಅಂಗಿ, ಧೋತರ, ತಲೆಗೆ 'ಮೋಳಿಯಾ' (ರುಮಾಲು), ಸೊಂಟಕ್ಕೆ 'ಪೇಂಟಾ'(ಪಟ್ಟಿ), ಹೆಗಲಿಗೆ ಎಲೆಅಡಿಕೆ ಹಾಕುವ 'ಝೋಲಣ' (ಕೋತಳಿ-ಚೀಲ), ಕಾಲಿಗೆ ಚೂಪಾದ 'ಮೊಜಡಾ'(ಪಾದರಕ್ಷೆ), ಮೈಮೇಲೆ ಕೆಂಪುಶಾಲು ಹೊದ್ದಿರುತ್ತಾನೆ. ಹಸೆಮಣೆಯ ಮೇಲೆ ಕೂರಿಸುವಾಗ ಮದಲಿಂಗನಿಗೆ 'ಗುಡಗಿ ಜಾಂಗಿಯಾ' (ಚೊಣ್ಣ), ತಲೆಗೆ 'ಮೋಳಿಯಾ', 'ಕಮಾನಕಟ್ಟಿ', ಅಂಗಿ ಉಡಿಸುತ್ತಾರೆ. ಮದಲಿಂಗನ ಬೆನ್ನಮೇಲೆ ಅರಿಶಿಣದಿಂದ ಸ್ವಸ್ತಿಕ್ ಚಿಹ್ನೆ ಬರೆಯುತ್ತಾರೆ. ಅಕ್ಷತೆ ಮುಗಿದ ಮೇಲೆ ಮದಲಿಂಗನಿಗೆ 'ಕಮಾನಕಟ್ಟಿ' ಅಂಗಿ, ಮೂರುಮೊಳದ ಧೋತರ, ತಲೆಗೆ ಪೇಟಾ ಸುತ್ತುತ್ತಾರೆ.

• **ಹೆಂಡತಿ ಸತ್ತಾಗ:** ಗಂಡಸರು ಉಟ್ಟಿರುವ ಧೋತರದ ಗಂಟು ಬಿಚ್ಚುತ್ತಾರೆ. ಇದನ್ನು ಹೊರತುಪಡಿಸಿ ಗಂಡಸರ ಮೈಮೇಲಿನ ಆಭರಣಗಳಾಗಲಿ ಬಟ್ಟೆಗಳಾಗಳಿ ತೆಗೆಯುವುದಿಲ್ಲ.

ಬಂಜಾರ ಪುರುಷರ ತಲೆಯ ಮೇಲೆ ಪೇಟ ಇರುತ್ತದೆ. ಇದನ್ನು 'ಪಾಗಡಿ' ಎನ್ನುತ್ತಾರೆ.'ಪಾಗಡಿ'ಯನ್ನು ತಲೆಯಮೇಲೆ ಸುತ್ತಿಕೊಳ್ಳುವ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ಬಂಜಾರ ಪುರುಷರಲ್ಲಿ ಪಾಗಡಿಗೆ ವಿಶೇಷ ಗೌರವವಿದೆ. ಸಭೆ-ಸಮಾರಂಭಗಳಲ್ಲಿ ತಲೆಯ ಮೇಲಿನ ಪಾಗಡಿಯನ್ನು ಬಿಚ್ಚುವಂತಿಲ್ಲ. ಪರಸ್ಪರರು ಮಾತು ಪ್ರಾರಂಭಿಸುವ ಮುನ್ನ ಶುಭಾಶಯದ ಮಾತುಗಳಾದ 'ರಾಂರಾಮಿ'ಯನ್ನು ಹೇಳಬೇಕಾದರೆ 'ಪಾಗಡಿ' ತಲೆಯಮೇಲೆ ಇರಲೇಬೇಕೆಂಬ ನಿಯಮವಿದೆ. ಉಳಿದಂತೆ ಷರಟು ಪಂಚೆಯನ್ನು ಧರಿಸುತ್ತಾರೆ.

ಒಟ್ಟಿನಲ್ಲಿ ಬಂಜಾರ ಉಡುಪು ಆಕರ್ಷಣೀಯವಾಗಲು ಕಾರಣಗಳನ್ನು ಹೀಗೆ ಗುರುತಿಸಬಹುದು. ಅವರು ವೃತ್ತಿಯಲ್ಲಿ ಹಲವಾರು ಹಂತಗಳನ್ನು ದಾಟಿ ಬಂದಿದ್ದಾರೆ.ಆ ವೃತ್ತಿಗಳಲ್ಲಿ ದೊಂಬರಾಟವೂ ಒಂದು. ಬುಡಕಟ್ಟಿನ ಸಾಂಸ್ಕೃತಿಕ ಬದುಕಿಗೆ ಈ ವೃತ್ತಿಯ ಕೊಡುಗೆ ಅಪಾರವಾಗಿದೆ. ಈ ವೃತ್ತಿಗೂ ಲಂಬಾಣಿ ಮಹಿಳೆಯರ ಉಡುಪಿಗೂ ನಿಕಟವಾದ ಸಂಬಂಧವಿದೆ. ದೊಂಬರಾಟವಾಡುವ ಮಹಿಳೆಯರ ಮತ್ತು ಪುರುಷರ ಉಡುಪುಗಳು ಸಹಜವಾಗಿಯೇ ಆಕರ್ಷಣೀಯವಾಗಿರ ಬೇಕಾಗಿರುತ್ತದೆ. ಬಂಜಾರ ಮಹಿಳೆಯರು ತಮ್ಮ ಬಿಡುವಿನ ವೇಳೆಯಲ್ಲಿ ಸರಳವಾದ ಉಡುಪುಗಳಿಗೆ ಕನ್ನಡಿ, ಗೊಂಡೆಗಳನ್ನು ಜೋಡಿಸಿ, ಕಸೂತಿ ಮಾಡಿ ಸುಂದರವಾಗಿ ಕಾಣುವಂತೆ ಮಾಡಿಕೊಂಡಿರಬೇಕು. ಅಂದು ಜನಾಕರ್ಷಣೆಯ

ನಿಮಿತ್ತ ಧರಿಸಲಾದ ಬಟ್ಟೆಗಳು ಕಾಲಾನುಕ್ರಮದಲ್ಲಿ ಇನ್ನು ಹೆಚ್ಚು ಆಕರ್ಷಣೀಯವಾಗಿ ಒಂದು ಸಮುದಾಯದ ಸಂಸ್ಕೃತಿಯ ಪ್ರಮುಖ ವಾಹಕಗಳಾಗಿವೆ ಎನ್ನಬಹುದು. ಸಾಮಾನ್ಯವಾಗಿ ಒಬ್ಬ ಬಂಜಾರ ಮಹಿಳೆ ಈ ರೀತಿಯ ಉಡುಗೆಗಳನ್ನು ಸಿದ್ಧಪಡಿಸಲು ಕಡಿಮೆಯೆಂದರೂ ಎರಡರಿಂದ ಮೂರು ತಿಂಗಳ ಅವಧಿ ತೆಗೆದುಕೊಳ್ಳುತ್ತಾಳೆ. ಈ ಉಡುಗೆಗಳಿಗೆ ತಗಲುವ ವೆಚ್ಚ ಏಳುನೂರು ರೂಪಾಯಿಗಳಿಂದ ಒಂದು ಸಾವಿರ ರೂಪಾಯಿಗಳವರೆಗೆ ಆಗುತ್ತದೆ.

ಬದಲಾದ ಪರಿಸ್ಥಿತಿಯಲ್ಲಿ ಬಂಜಾರರ ಈ ಕಲಾತ್ಮಕವಾದ ಆಕರ್ಷಕ ಉಡುಪುಗಳು ಇಂದು ಮರೆಯಾಗುತ್ತಿವೆ. ಇದಕ್ಕೆ ಹಲವಾರು ಕಾರಣಗಳಿರಬಹುದು: ಈ ಉಡುಪುಗಳನ್ನು ಸಿದ್ಧಪಡಿಸಲು ಅಪಾರ ಸಮಯ ಬೇಕಾಗುತ್ತದೆ. ಮಹಿಳೆಯರಿಗೆ ಬಿಡುವಿಲ್ಲದ ದುಡಿಮೆ, ಚಿಕ್ಕಂದಿನಲ್ಲಿ ಕಸೂತಿಯನ್ನು ಕಲಿಯಬೇಕಾದ ಮಕ್ಕಳು ಶಾಲೆಗೆ ಅಥವಾ ಕೂಲಿಗೆ ಹೋಗಬೇಕಾದ ಅನಿವಾರ್ಯತೆ, ಈ ಉಡುಪುಗಳನ್ನು ತೊಳೆಯುವುದರಿಂದ ಗಾಜಿನಬಿಲ್ಲೆಗಳು ಒಡೆದು ಅಂದ ಕಳೆದುಕೊಳ್ಳುತ್ತಿರುವುದು, ದುರ್ಲಭವಾಗುತ್ತಿರುವ ಸಾಂಸ್ಕೃತಿಕ ವಸ್ತುಗಳು, ನಾಗರಿಕ ವಸ್ತುಗಳ ಮೇಲಿನ ವ್ಯಾಮೋಹ, ತಮ್ಮ ಸಾಂಸ್ಕೃತಿಕ ಉಡುಪು ಬಿಟ್ಟರೆ ಪರರು ವಿಚಿತ್ರವಾಗಿ ಕಾಣುತ್ತಾರೆಂಬ ಕೀಳರಿಮೆ. ಈ ಜನರು ಕೃಷಿಕರಾದರೂ ಹೆಚ್ಚಿನವರು ವ್ಯಾಪಾರ, ಕೂಲಿ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಬಡತನದ ಬೇಗೆಯಿಂದ ಬಳಲುತ್ತಿರುವ ಇವರು ಎರಡು ಮೂರು ತಿಂಗಳು ಕುಳಿತು ತಾಳ್ಮೆಯಿಂದ ತಮ್ಮ ಪೋಷಾಕುಗಳನ್ನು ಸಿದ್ಧಪಡಿಸುವುದು ಕಷ್ಟಸಾಧ್ಯ. ಹೊಟ್ಟೆಪಾಡಿನ ಬೇಗೆಯಲ್ಲಿ ಇವರ ಕಲೆ ಕರಗಿ ಹೋಗುತ್ತಿದೆ. ಹೊಟ್ಟೆಪಾಡೇ ದಿನನಿತ್ಯದ ಚಿಂತೆಯಾಗಿರುವಾಗ ತಮ್ಮ ಸಾಂಪ್ರದಾಯಿಕ ಕಸೂತಿ, ಕನ್ನಡಿ ಇನ್ನಿತರ ಕಲೆಯತ್ತ ಅವರು ಹೇಗೆ ತಾನೆ ಗಮನಹರಿಸಿಯಾರು.

ಹಿಂದೆ ವ್ಯಾಪಾರಸ್ಥರಾಗಿದ್ದಾಗ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಬಂಜಾರರು ವ್ಯಾಪಾರಕ್ಕಾಗಿ ಹೋಗಿಬರುತ್ತಿದ್ದರು. ವ್ಯಾಪಾರಕ್ಕೆಂದು ಹೊರಟ ಗಂಡಸರು ಮರಳಿಬರುವುದು ಕೆಲವೊಮ್ಮೆ ಮೂರ್ನಾಲ್ಕು ತಿಂಗಳುಗಳೇ ಹಿಡಿಯುತ್ತಿತ್ತು. ಈ ಸಂದರ್ಭದಲ್ಲಿ ಮಹಿಳೆಯರಿಗೆ ಬಿಡುವಿರುತ್ತಿದ್ದುದರಿಂದ, ತಮ್ಮ ಕೈಚಳಕದಿಂದ ಬಟ್ಟೆಗಳ ಮೇಲೆ ಆಕರ್ಷಕವಾಗಿ ಕಸೂತಿ ಮಾಡಿ ತಮ್ಮ ಇಚ್ಛೆಗನುಸಾರವಾಗಿ ಪೋಷಾಕುಗಳನ್ನು ಸಿದ್ಧಪಡಿಸಿಕೊಂಡು ಧರಿಸಿಕೊಳ್ಳುತ್ತಿದ್ದರು. ಆದರೆ ಇಂದು ಪರಿಸ್ಥಿತಿ ಬದಲಾಗಿದೆ. ಜನರು ಸಹ ಪರಿವರ್ತಿತ ರಾಗುತ್ತಿದ್ದಾರೆ. ಅವರ ಉಡುಪು ಬದಲಾಗುತ್ತಿರುವುದು ಅತೀ ಪ್ರತ್ಯೇಕತೆಯನ್ನು ಬಿಟ್ಟು ಅವರು ನಿರ್ದಿಷ್ಟ ಸ್ಥಳೀಯ ನೆಲೆಯನ್ನು ಕಂಡುಕೊಳ್ಳುತ್ತಿರುವುದರ ಪರಿಣಾಮ. ಯಾವುದೇ ಒಂದು ಸಮುದಾಯವು

ನಿರ್ದಿಷ್ಟ ಸ್ಥಳದಲ್ಲಿ ನೆಲೆಯೂರಿದಾಗ ಆ ಸ್ಥಳಕ್ಕೆ ಹೊರತಾದ ಉಡುಪಿನ ಅತಿವಿಶಿಷ್ಟತೆಯನ್ನು ಉಳಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಆದುದರಿಂದಲೇ ಕರ್ನಾಟಕದ ಬಂಜಾರ ಮಹಿಳೆಯರು ಸೀರೆ ಕುಪ್ಪಸವನ್ನು ಧರಿಸಲು ಪ್ರಾರಂಭಿಸಿದ್ದಾರೆ. ಹಾಗೆಯೇ ಉತ್ತರ ಭಾರತದ ಲಂಬಾಣಿ ಮಹಿಳೆಯರು ಅಲ್ಲಿನ ಸ್ಥಳೀಯ ಉಡುಪುಗಳಾದ ಚೂಡಿದಾರ್ ಪೈಜಾಮ ಇತ್ಯಾದಿ ಧರಿಸುತ್ತಿದ್ದಾರೆ. ಒಟ್ಟಿನಲ್ಲಿ ತಮ್ಮ ಸಾಂಸ್ಕೃತಿಕ ಉಡುಪನ್ನು ತಯಾರಿಸುವ ಕಷ್ಟಕ್ಕೆ ಕೈ ಹಾಕದೆ ಅನ್ಯಸಂಸ್ಕೃತಿಯವರಂತೆಯೇ ಸರಳ ಉಡುಪುಗಳನ್ನು ಧರಿಸುತ್ತಾ ಕೆಲಸವನ್ನು ಹಗುರ ಮಾಡಿಕೊಳ್ಳುವುದರೊಂದಿಗೆ, ಪ್ರಾಚೀನವಾದ ತಮ್ಮ ಈ ಕೌಶಲ್ಯವನ್ನು ತಮಗರಿವಿಲ್ಲದಂತೆ ವಿನಾಶದಂಚಿಗೆ ದೂಡಿರುವುದು ದುರ್ದೈವದ ಸಂಗತಿಯಾಗಿದೆ. ಇಂದು ಇಲ್ಲಿನ ಒಂದೊಂದು ತಾಂಡಗಳನ್ನು ಪರಿಶೀಲಿಸಿದರೆ ನಾಲ್ಕು ಅಥವಾ ಐದು ಜನರ ಹತ್ತಿರ ಈ ಉಡುಪುಗಳಿಲ್ಲ.

ಒಟ್ಟಾರೆ ಇವರ ಈ ಉಡುಪು ಮರೆಯಾಗುತ್ತಿರುವುದು ಆತಂಕಕಾರಿ ಭಾವನೆ ಮೂಡಿಸುತ್ತಿದೆ. ಇಷ್ಟಾದರೂ ಇವರ ಉಡುಗೆಗೆ, ಕಸೂತಿ ವಿನ್ಯಾಸದ ಈ ಕಲೆಗೆ ನವಚೈತನ್ಯ ನೀಡಿ ಉಳಿಸಿಕೊಳ್ಳುವ ಪ್ರಯತ್ನಗಳು ಅಲ್ಲಲ್ಲಿ ನಡೆಯುತ್ತಿವೆ. ನಶಿಸಿಹೋಗುತ್ತಿರುವ ಬಂಜಾರರ ಉಡುಪು ಹಾಗೂ ಕಸೂತಿ ಕಲೆಯನ್ನು ಉಳಿಸಿ ಬೆಳೆಸಲು ಅನೇಕರು ಶ್ರಮಿಸುತ್ತಿದ್ದಾರೆ. **ಎಂ.ವೈ.ಘೋರ್ಪಡೆ** ಅವರ ಮುಂದಾಳತ್ವದಲ್ಲಿ ೧೯೫೫ರಲ್ಲಿ 'ಸೊಂಡೂರು ಕುಶಲ ಕಲಾ ಕೇಂದ್ರ', ಶ್ರೀಮತಿ ಲಕ್ಷ್ಮೀಬಾಯಿ ಮೆಹರ್ವಾಡೆಯವರ ನೇತೃತ್ವದಲ್ಲಿ ೧೯೭೨ರಲ್ಲಿ 'ಶಕ್ತಿ ಮಹಿಳಾ ಮಂಡಳಿ' ಹಾಗೂ ವಿಜಾಪುರ ಜಿಲ್ಲೆಯ ಮಲ್ಲಮ್ಮಾಳ್‌ವಾರ ಅವರ 'ಸಬಲಾ ಸ್ವಯಂ ಸೇವಾ ಸಂಸ್ಥೆ'– ಮೊದಲಾದವರು ಈ ಕ್ಷೇತ್ರದಲ್ಲಿ ದಿಟ್ಟಹೆಜ್ಜೆ ಇಟ್ಟಿದ್ದಾರೆ.ಇವರ ಕಸೂತಿಯಿಂದ ಸಿದ್ಧವಾಗುವ, ವಸ್ತುಗಳನ್ನು, ಪರದೇಶಗಳಾದ **ಜರ್ಮನಿ, ಜಪಾನ್, ಇಟಲಿ, ಫ್ರಾನ್ಸ್** ಮತ್ತು **ಅಮೇರಿಕಾ** ದೇಶಗಳಿಗೆ ವಿವಿಧ ಕರಕುಶಲ ಅಭಿವೃದ್ಧಿ ನಿಗಮಗಳು ರಫ್ತು ಮಾಡುತ್ತಿವೆ.

ಹೀಗೆ ಇವರ ಕಲಾಕೌಶಲವನ್ನು ಗುರುತಿಸಿ, ಅವರ ಕಲೆಗೆ ಜೀವತುಂಬಿ ಬಂಜಾರ ಮಹಿಳೆಯರ ಬದುಕಿನಲ್ಲಿ ಭರವಸೆ ಮೂಡಿಸಿ ಪ್ರೋತ್ಸಾಹಿಸುವ ಕಾರ್ಯ ಇನ್ನು ಹೆಚ್ಚಾಗಿ ಆಗಬೇಕಾಗಿದೆ. ಅವರು ತಮ್ಮ ಸಂಸ್ಕೃತಿಯ ಪ್ರತೀಕವಾದ ಈ ಉಡುಪುಗಳನ್ನು ಸಿದ್ಧಪಡಿಸಿ ಯಾವುದೇ ಮುಜುಗರವಿಲ್ಲದೆ ಧರಿಸಿಕೊಳ್ಳುವ ನಿಟ್ಟಿನಲ್ಲಿ ಸಹಕರಿಸಬೇಕು. ಇಂತಹ ಲಂಬಾಣಿಗಳ ಸಾಂಸ್ಕೃತಿಕ ಉಡುಪು ಎಲ್ಲಾ ಕಡೆ ವಿರಳವಾಗುತ್ತಿರುವಂತೆ ಚಾಮರಾಜನಗರ ಸುತ್ತಮುತ್ತಲಿನ

ತಾಂಡಗಳಲ್ಲಿ ವಿರಳವಾಗುತ್ತಿದ್ದು, ಇದರ ಸುಧಾರಣೆಗೆ ಸಮಸ್ತ ಸಮುದಾಯವೂ ಶ್ರಮಿಸ ಬೇಕಾಗಿರುವುದು ಅವರ ಆದ್ಯಕರ್ತವ್ಯವಾಗಿದೆ.

**ಬಂಜಾರ ಸಮುದಾಯದವರಲ್ಲಿ ಆಭರಣಗಳ ಬಳಕೆ ಅಥವಾ ತೊಡುಗೆಗಳು**

ಮಾನವನಿಗೆ ಸೌಂದರ್ಯ ಪ್ರಜ್ಞೆ ಬಹಳ ಹಿಂದಿನಿಂದಲೂ ಇದೆ ಎಂಬುದಕ್ಕೆ ಕಾಡಿನ ಪರಿಸರದಲ್ಲಿ ವಾಸ ಮಾಡುತ್ತಿದ್ದ ಚೆಂಚರು, ಲೌಲೇರು, ಲಂಬಾಣಿಗರು ಮುಂತಾದ ಬುಡಕಟ್ಟು, ಜನರು ತಮ್ಮ ವೈವಿಧ್ಯಮಯವಾದ ಉಡುಗೆ-ತೊಡುಗೆಗಳಿಂದ ನಾಡಿನ ಜನರ ಗಮನವನ್ನು ತಮ್ಮೆಡೆಗೆ ಸೆಳೆದಿರುವ ಸಂಗತಿಯು ಇತಿಹಾಸದ ಉದ್ದಕ್ಕೂ ಕಾಣಸಿಗುತ್ತದೆ.

ಮನುಷ್ಯ ಮೊದಲು ಉಡುಗೆ ತೊಡುಗೆಗಳನ್ನು ಬಳಸಲು ಪ್ರಾರಂಭಿಸಿದ್ದು, ಆರೋಗ್ಯ ಸಂರಕ್ಷಣೆಯ ದೃಷ್ಟಿಯಿಂದ. ಕಾಲಾನಂತರದಲ್ಲಿ ಇದೊಂದು ಅಲಂಕಾರ ವಸ್ತುವಾಗಿ ವೈವಿಧ್ಯತೆಯನ್ನು ಪಡೆದುಕೊಂಡಿತು. ಉಡುಗೆ-ತೊಡುಗೆಗಳು ಕೆಲವೊಮ್ಮೆ ಆಯಾ ಸಮುದಾಯವನ್ನು ಪ್ರತಿನಿಧಿಸುತ್ತದೆ. ಜೊತೆಗೆ ಧರ್ಮ, ಆಚರಣೆ, ವ್ಯಕ್ತಿ ಇತ್ಯಾದಿ ವೈಶಿಷ್ಟ್ಯ ಗಳನ್ನು ಹಾಗೂ ಅವರ ಆರ್ಥಿಕ ಸ್ಥಿತಿ ಹಾಗೂ ಸಾಮಾಜಿಕ ಮಟ್ಟವನ್ನು ಸೂಚಿಸುವ ನೆಲೆಯಲ್ಲಿ ಕೆಲಸ ಮಾಡುವುದರೊಂದಿಗೆ ಆಯಾ ಪ್ರದೇಶದ ಭೌಗೋಳಿಕ ಪರಿಸರವನ್ನು ದೃಢೀಕರಿಸುತ್ತದೆ. ಹೀಗಾಗಿ ಯಾವೊಬ್ಬ ವ್ಯಕ್ತಿ ಧರಿಸುವ ಬಟ್ಟೆ ಅಥವಾ ಮಾಡಿಕೊಳ್ಳುವ ಅಲಂಕಾರ, ತೊಡುವ ಒಡವೆಗಳೆಲ್ಲವೂ ಅವನ ಸೌಂದರ್ಯ ಪ್ರಜ್ಞೆಯ ಅಭಿವ್ಯಕ್ತಿ ಎನಿಸುತ್ತದೆ.

ಹೆಂಗಸರು ಶೃಂಗಾರ ಪ್ರಿಯರು, ಆಭರಣ ಪ್ರಿಯರು. ಉಳ್ಳವರು ಬಂಗಾರ ವಜ್ರಗಳ ತೊಡುಗೆಗಳನ್ನು ಧರಿಸಿದರೆ, ಇಲ್ಲದವರು ಕಟ್ಟಿಗೆ, ಬಣ್ಣ ಬಣ್ಣದ ಗಾಜಿನ ಮಣಿಗಳು, ತಾಮ್ರ, ಹಿತ್ತಾಳೆ, ಅಲ್ಯುಮಿನಿಯಂ ತಂತಿ, ಚಲಾವಣೆಯಲ್ಲಿಲ್ಲದ ನಾಣ್ಯ, ಸತು ಮೊದಲಾದ ಲೋಹಗಳಿಂದ ಆಭರಣಗಳನ್ನು ತಯಾರಿಸಿ ಧರಿಸಿಕೊಳ್ಳುತ್ತಾರೆ. ಜೀವನವನ್ನು ಹೆಚ್ಚಾಗಿ ಪ್ರೀತಿಸಿ, ಬದುಕಿಗಾಗಿ ಏನೆಲ್ಲ ಬವಣೆ ಅನುಭವಿಸಿ, ಸಾಹಸದಿಂದ ಬದುಕುವ ಬಂಜಾರರು ಬಳಸುವ ಆಭರಣಗಳು ಪ್ರಕೃತಿಯ ಕೊಡುಗೆಯಾಗಿದ್ದು ವಿಶಿಷ್ಟವಾದವುಗಳಾಗಿವೆ.

ಬಂಜಾರ ಮಹಿಳೆಯರು ಅಲಂಕಾರ ಪ್ರಿಯರು. ದೇಹದ ಅಂಗಾಂಗಗಳನ್ನು ವಿವಿಧ ರೀತಿಯ ಆಭರಣಗಳಿಂದ ಕಲಾತ್ಮಕವಾಗಿ ಶೃಂಗರಿಸಿಕೊಳ್ಳುತ್ತಾರೆ. ತಲೆ, ಕಿವಿ, ಮೂಗು, ಕೊರಳು, ಕೈಕಾಲುಗಳು, ಬೆರಳುಗಳನ್ನು ಸಹ ಭಾರವಾದ ಆಭರಣಗಳಿಂದ ಅಲಂಕರಿಸಿಕೊಳ್ಳುತ್ತಾರೆ. ಅಷ್ಟೂ ಭಾರವಾದ ತೊಡುಗೆಯನ್ನು ತೊಟ್ಟು ಬಂಜಾರ ಮಹಿಳೆಯರು ವಿಶಿಷ್ಟ ರೀತಿಯಿಂದ ಶೋಭಿಸುತ್ತಿರುತ್ತಾರೆ. ಅವರ ಉಡುಗೆ ವಿಚಿತ್ರವಾಗಿರುತ್ತವೆ ಮತ್ತು ಅವರು ಧರಿಸುವ

ಆಭರಣಗಳು ಅಸಾಧಾರಣವಾದ ಆಯ್ಕೆಯಾಗಿರುತ್ತವೆ. ನಾವು ಕಂಡಂತೆ ಬಂಜಾರ ಮಹಿಳೆಯರು ೮ರಿಂದ ೧೦ ಪೌಂಡ್ ತೂಕದ ಲೋಹದ ಅಥವಾ ದಂತದ ಆಭರಣಗಳನ್ನು ತೋಳು ಮತ್ತು ಕಾಲುಗಳಲ್ಲಿ ಧರಿಸಿಕೊಂಡಿರುತ್ತಾರೆ ಎಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ.

ಶ್ರಮಜೀವಿಗಳಾದ ಬಂಜಾರರು ಕಾಡುಮೇಡುಗಳ ಮೂಲಕ ಸಂಚರಿಸಬೇಕಾಗಿತ್ತು. ವ್ಯಾಪಾರ ವಹಿವಾಟಿಗಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಬೆಟ್ಟ-ಕಣಿವೆಗಳ ಮೂಲಕ ಸಾಗಬೇಕಾಗಿತ್ತು. ಸಂಚಾರದ ಸಂದರ್ಭದಲ್ಲಿ ಕಾಡಿನಲ್ಲಿ ಹೇರಳವಾಗಿ ಸಿಗುತ್ತಿದ್ದ ಜಿಂಕೆಯ ಕೋಡು ಅಥವಾ ಆನೆಯ ದಂತದಿಂದ ಬಳೆಗಳನ್ನು ಮಾಡಿ ತಮ್ಮ ಕೈಗಳಿಗೆ ಧರಿಸಿಕೊಂಡಿರಬೇಕು. ತಮ್ಮ ಹೊಟ್ಟೆಪಾಡಿಗಾಗಿ ಕಾಡುಗಳಲ್ಲಿ ಸಂಚರಿಸುವ ಸಮಯದಲ್ಲಿ ಮುಳ್ಳು ಪೊದೆ, ಗಿಡಗಂಟಿಗಳಿಂದ ರಕ್ಷಿಸಿಕೊಳ್ಳುವ ಸಲುವಾಗಿ ಇಂಥ ಬಳೆಗಳನ್ನು ಕೈತುಂಬಾ ತೊಟ್ಟುಕೊಂಡರೆಂದು ಕಾಣುತ್ತದೆ. ಕೈಗಳಿಗೆ ಧರಿಸುವ ಈ ಬಳೆಗಳಿಗೆ ಅವರು 'ಚೂಡಿ' ಇಲ್ಲವೆ 'ಮೂಟ್' ಎಂದು ಕರೆಯುತ್ತಾರೆ. ತೋಳುಗಳಿಗೆ ಹಾಕಿಕೊಳ್ಳುವ ಬಳೆಗಳಿಗೆ 'ಚೂಡೋ' ಇಲ್ಲವೆ 'ಬಲ್ಯಾ' ಎಂದು ಕರೆಯುತ್ತಾರೆ. ಇನ್ನು ಕೆಲವು ಕಡೆ 'ಮಾಡ್ಯ' ಎನ್ನುವ ಕಂಚಿನ ಬಳೇಧರಿಸಿರುತ್ತಾರೆ. ಈಗಿಗಂತೂ ಇಂಥ ದಂತಹ ಬಳೆ ಲಭ್ಯವಿಲ್ಲದ ಕಾರಣ ಮರದ ಇಲ್ಲವೆ ಪ್ಲಾಸ್ಟಿಕ್ ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಒಂದೊಂದು ಕೈಗೆ ಅಗಲವಾಗಿರುವ ಆರಾರು ಈ 'ಚೂಡಿ'ಗಳನ್ನು ಹಾಕಿಕೊಳ್ಳುತ್ತಾರೆ. ನಡುನಡುವೆ ಕಪ್ಪು ಬಣ್ಣದ ಒಂದು ಮರದ 'ಬೋದ್ಲು'(ಬಳೆ) ಹಾಗೂ ತೋಳುಗಳಿಗೆ ಎರಡೆರಡು 'ಚೂಡೋ'(ಮುತ್ತೈದೆಯರು ಧರಿಸುವಂಥದ್ದು), ಅದರಡಿಗೆ ವಿಭಿನ್ನ ರೀತಿಯ ಮಣಿಗಳಿಂದ ಹೆಣೆದಿರುವ 'ಕಸೋಟ್ಯಾ' ಕಟ್ಟಿಕೊಳ್ಳುತ್ತಾರೆ 'ಚೋಡೋ' ಕೆಳಗೆ ಸರಿದರೆ ಅಪಶಕುನ ಎಂಬ ನಂಬಿಕೆ ಇವರಲ್ಲಿ ಇರುವುದರಿಂದ ತೋಳಿಗೆ ಹಾಕಿರುವ ಬಳೆಗಳು ಯಾವುದೇ ಸಂದರ್ಭದಲ್ಲಿಯೂ ಕೆಳಗೆ ಸರಿಯಬಾರದೆಂಬ ಉದ್ದೇಶದಿಂದ ಈ 'ಕಸೋಟ್ಯಾ' ಕಟ್ಟಿಕೊಳ್ಳುತ್ತಾರೆ. ವಿಶೇಷ ಸಂದರ್ಭಗಳಲ್ಲಿ ಮುಂಗೈಗೆ 'ಗೋಜ್ರ', ತೋಳುಗಳಿಗೆ 'ಪಚೇಲಾ', 'ನೊಗರಿ', ಬಳೆಗಳ ಮಧ್ಯ 'ಮಾಟ್ಲಿ' ಅಥವಾ 'ಮೂಟ್ಲಿ', ತೋಳುಗಳಿಗೆ ಗೆಜ್ಜೆಸರ, ಮೇಲ್ಮುಸುಕಿನ ಬಲಬದಿಯ ಸೆರಗಿನ ಕವಡೆ ಕನ್ನಡಿಗಳಿಂದ ಚೂರು-ಪಾರು ಬಟ್ಟೆಗಳನ್ನು ಸೇರಿಸಿ ಕಸೂತಿ ಮಾಡಿರುವ ಒಂದು ಚಿಕ್ಕ 'ಛೇವಟಿಯಾ'(ಚೀಲ)ವನ್ನು ಕಟ್ಟಿರುತ್ತಾರೆ. ಗಂಡಸರು ಸೊಂಟಕ್ಕೆ ಬೆಳ್ಳಿಯ ಒಂದು 'ಕಣದೋರೋ'(ಉಡುದಾರ)ವನ್ನು ಕಟ್ಟಿಕೊಳ್ಳುತ್ತಾರೆ. ಇನ್ನೂ ಕೈ ಬೆರಳುಗಳಿಗೆ ನಾಣ್ಯದ ಉಂಗುರಗಳು ಹಾಗೂ ಪಂಚಲೋಹ ಅಥವಾ ತಾಮ್ರದ ಉಂಗುರಗಳು, 'ಅಂಗುತ್ಯಾ', 'ನೋತ್ಸೆ' ಮುಂತಾದವನ್ನು ಧರಿಸುತ್ತಾರೆ. ಕಾಲುಗಳಿಗೆ ಬೆಳ್ಳಿ ಅಥವಾ ಹಿತ್ತಾಳೆಯ

ಗೋಲಾಕಾರದ 'ಕೋಳ್ಳ'(ಕಾಲುಕಡಗ) – ಇದನ್ನು ಸ್ತ್ರೀ ಪುರುಷರಿಬ್ಬರು ಹಾಕಿಕೊಳ್ಳುತ್ತಾರೆ. ಅಂಕುಡೊಂಕಾದ ಹಿತ್ತಾಳೆಯ 'ವಾಂಕಡಿ', ಚೌಕಾಕಾರದ ಹಿತ್ತಾಳೆಯ 'ಕಸ್' ಮತ್ತು ಅದರ ಕೆಳಗೆ ತ್ರಿಕೋನಾಕಾರದ 'ಝಾಂಜರಿ' ಹಾಕಿಕೊಳ್ಳುತ್ತಾರೆ. ಇನ್ನೂ ಕಾಲುಬೆರಳುಗಳಿಗೆ ಬೆಳ್ಳಿ ನಾಣ್ಯಗಳನ್ನು ಬೆಸೆದು ಮಾಡಿದ ಉಂಗುರಗಳನ್ನು ಧರಿಸುತ್ತಾರೆ. ಇವಕ್ಕೆ 'ವೀಂಟೀ', 'ಚಾಲಾವೀಂಟೀ', 'ಘೂಲಾ' ಎಂದು ಕರೆಯುತ್ತಾರೆ. ಮೂರು ಮತ್ತು ನಾಲ್ಕನೇ ಬೆರಳು ಸೇರಿಸಿ ಹಾಕುವ ಕಾಲುಂಗರಕ್ಕೆ 'ವೀಂಚುವಾ' ಎಂದು ಕರೆಯುತ್ತಾರೆ. ಬೆಳ್ಳಿ ಅಥವಾ ತಾಮ್ರದ 'ಚಟಕಿ', ಹಿತ್ತಾಳೆಯ 'ಅಂಗುತ್ಲಾ' ಹಾಗೂ ಹೆಬ್ಬೆರಳಿಗೆ 'ಶರಭರಿ', ವಿಶೇಷ ಸಂದರ್ಭದಲ್ಲಿ ಕಾಲಿಗೆ ಗೆಜ್ಜೆಸರಗಳನ್ನು ಕಟ್ಟಿಕೊಳ್ಳುತ್ತಾರೆ.

ಬಂಜಾರ ಮಹಿಳೆಯರು ಬಳಸುವ ತಮ್ಮ ಅಲಂಕರಣ ಸಾಮಗ್ರಿಗಳನ್ನು 'ರಾಂಗ್ ಪಾರಿ'ಯಿಂದ ತಯಾರಿಸಿದ್ದೆಂದು ಹೇಳುತ್ತಾರೆ. "ಅಂಥ ವಸ್ತುಗಳನ್ನು ತಯಾರಿಸಿಕೊಡುವ 'ಭರಾವ'ಗಳನ್ನು, 'ರಾಂಗ್ ಪಾರಿವಾಳ್' ಎಂದು ಕರೆಯುತ್ತಾರೆ. 'ಪಾರಿ', 'ಗಜರ', 'ಪಚೇಲ', 'ಚೂಡೇರ ಗುಗರ', 'ನಾನ್ಯಾಕ ಗುಗರ', 'ಗುಂಗಟೇರ ಗುಗರ', 'ಟೋಪ್ಲಿ ಪಾರಿ ಚಲ್ಲಿಬಾಂತೇರ ನುಗಿರಿ', 'ಘೂಲಿ', 'ನುಗರಿಯಾಯಿರ್ ಘೂಲಿ', 'ನಳಿ', 'ನಳಿರ್ ಟೋಪ್ಲಿ', 'ಮಾಚಳಿ', 'ವಿಂಚೂ', 'ಕಣದೋರಿರ ಪಾರ', ಕಾಂಟಾಳೋ ಪಚೇಲ', 'ಲಸಣ್ಯಾ', 'ಗುಗರಿಮಾರ ಗುಗರ', 'ಲಾಲ್ಡಿಮಾರ್ ಪೋತಡಿ'– ಹೀಗೆ ಸುಮಾರು ೧೦೩ ಬಗೆಯ ವಸ್ತುಗಳನ್ನು ತಯಾರಿಸುತಿದ್ದರೆಂದು ಭರಾವಗಳು ಹೇಳುತ್ತಾರೆ".

ಬಂಜಾರ ಸಮುದಾಯದ ಜನರು ಧರಿಸುವ ಉಡುಗೆ ತೊಡುಗೆಗಳು ಅವರಿಗೆ ಮಾನಸಿಕ ಸಂತೋಷವನ್ನು ವ್ಯಕ್ತಪಡಿಸುವಲ್ಲಿ ಸಹಕಾರಿಯಾಗಿವೆ. ಸಂಸ್ಕೃತೀಕರಣಗೊಂಡಂತೆಲ್ಲ ಇವುಗಳಲ್ಲಿ ಸ್ವಲ್ಪ ಏರುಪೇರುಗಳೂ ಕಂಡುಬಂದರೂ ಈ ಉಡುಗೆ–ತೊಡುಗೆಗಳು ತಮ್ಮ ಸಮುದಾಯದಲ್ಲಿ ತನ್ನದೇ ಆದ ವೈಶಿಷ್ಟ್ಯತೆಯನ್ನು ಉಳಿಸಿಕೊಂಡಿದೆ.

ಇತ್ತೀಚೆಗೆ ಲಂಬಾಣಿಗರ ವೇಷಭೂಷಣಗಳಲ್ಲಿ ಬದಲಾವಣೆ ಕಂಡುಬಂದಿದ್ದು, ಆಧುನಿಕ ವೇಷಭೂಷಣಗಳು ವಿದೇಶಿ ಸಾಂಸ್ಕೃತಿಕ ವಸ್ತುಗಳು, ನಗರೀಕರಣದ ಪ್ರಭಾವ ಇನ್ನೂ ಕೆಲವು ಕಾರಣಗಳಿಂದಾಗಿ ಸಾಂಪ್ರದಾಯಿಕ ಉಡುಗೆ ತೊಡುಗೆಗಳು ಮರೆಯಾಗುತ್ತಿವೆ. ಮಹಿಳೆಯರು ಸೀರೆ ಕುಪ್ಪಸ ತೊಟ್ಟು ಕರಿಮಣಿ ಸರ ಧರಿಸಿದರೆ, ಪುರುಷರು ಅಂಗಿ–ಪ್ಯಾಂಟು, ಜುಬ್ಬ–ಪೈಜಾಮ, ಲುಂಗಿ ಮುಂತಾದವುಗಳನ್ನು ಧರಿಸುತ್ತಿದ್ದಾರೆ. ಇದೆಲ್ಲವನ್ನು ನಾಗರಿಕತೆಯ ವಿಕಾಸ, ಸಾಂಸ್ಕೃತಿಕ ಪರಿವರ್ತನೆಗಳಲ್ಲಿ ಜರುಗುವ ಒಂದು ಸಹಜ ಪ್ರಕ್ರಿಯೆ ಎಂದು ಪರಿಗಣಿಸಬಹುದು.

## ೨.೪ ಬಂಜಾರ ಸಮುದಾಯದಲ್ಲಿ ಧಾರ್ಮಿಕ ನಂಬಿಕೆಗಳು ಮತ್ತು ಆಚರಣೆಗಳು

ಬಂಜಾರರ ಸಾಮಾಜಿಕ, ಧಾರ್ಮಿಕ ಆಚರಣೆಗಳಲ್ಲಿ ಜನನ, ಮರಣ ವಿವಾಹ ಮತ್ತಿತರ ಸಂದರ್ಭಗಳಲ್ಲಿ ಅನುಸರಿಸುವ ಕ್ರಿಯಾವಿಧಿ, ವಿಧಾನಗಳು, ಹೆಚ್ಚು ಮಹತ್ವ ಪಡೆದುಕೊಂಡಿದೆ. ಇವುಗಳಿಗೆ ತಮ್ಮದೇ ಆದ ರೂಪು-ರೇಷೆಗಳನ್ನು ನೀಡಿದ್ದಾರೆ. ಅಲ್ಲದೆ ತಮ್ಮ ಭಾಷೆ, ಹೆಸರುಗಳನ್ನು ಈ ಶಾಸ್ತ್ರ ವಿಧಿಗಳಿಗೆ ಇಟ್ಟುಕೊಂಡು, ಅವುಗಳನ್ನು ತಾವೇ ನಿರ್ಮಿಸಿಕೊಂಡ ಪದ್ಧತಿಗಳಿಂದ ಶ್ರದ್ಧಾಪೂರ್ವಕವಾಗಿ ಆಚರಿಸುತ್ತಿರುವುದು ಕಂಡುಬಂದಿದೆ.

ಪ್ರತಿಯೊಂದು ಬಂಜಾರ ಸಮುದಾಯದಲ್ಲಿ ಸಾಮಾನ್ಯವಾದ ರೀತಿ, ನೀತಿ, ಸಂಪ್ರದಾಯ, ವೇಷ, ಭಾಷೆಯನ್ನು ಕಾಣಬಹುದಾಗಿದೆ. ಬಂಜಾರ ಸ್ತ್ರೀಯು ಧರಿಸುವ ಉಡುಗೆ-ತೊಡುಗೆ ವಿಚಿತ್ರವಾದರೂ, ಇವು ಒಂದೊಂದು ಹಿನ್ನಲೆಯನ್ನು ಪಡೆದುಕೊಂಡು ಸಮಾಜ-ಸಂಸ್ಕೃತಿಯನ್ನು ಎತ್ತಿಹಿಡಿಯಬಲ್ಲ ಕುರುಹುಗಳಾಗಿವೆ. ನರ್ತನ, ಗೀತೆಗಳು, ಬಂಜಾರರ ಜೀವನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಅವರು ಎಷ್ಟು ಕಷ್ಟ ಜೀವಿಗಳೋ ಅಷ್ಟೇ ಸಾಹಸಿಗಳಾಗಿದ್ದಾರೆ. ನಿತ್ಯದ ಕಷ್ಟ, ಸುಖ, ಸಮಸ್ಯೆಗಳನ್ನೆಲ್ಲಾ ಮರೆತು ನಗುಮುಖದಿಂದ ಹರ್ಷಚಿತ್ತರಾಗಿರುವ ದಿಟ್ಟ ಗಂಡಸರು, ಮೊದಲು ನಾಚಿಕೆ ತೋರಿದರೂ ರಸಿಕರಾದ ಹೆಂಗಸರೂ ತಮ್ಮ ನರ್ತನ, ಗೀತೆಗಳಿಂದ ನಿತ್ಯ ತೃಪ್ತಿಯನ್ನು ಪಡೆಯುವ ಆಶಾ ಜೀವಿಗಳಾಗಿದ್ದಾರೆ. ವೇಷಭೂಷಣಕ್ಕೆ ತಕ್ಕ ಹಾಗೆ ಲಂಬಾಣಿ ಸ್ತ್ರೀಯರ ಮೈಮಾಟ-ಕುಣಿತ, ಹಾಡಿನಲ್ಲಿ ಜೀವನದ ಸೌಂದರ್ಯ, ಅನುಭವ, ರಸಿಕತನ, ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ಹೆಂಗಸರೆಲ್ಲಾ ಸುತ್ತುಗಟ್ಟಿ ಲಯಬದ್ಧವಾಗಿ ಹಾಡುವಾಗ ಶೃತಿಬದ್ಧ ತಂಬೂರಿಯ ಝೇಂಕಾರ ಮೈಮನ ಪುಳಕಿಸುತ್ತದೆ.[೪೨]

ಹಾಗೆಯೇ, ಲಂಬಾಣಿ ಸ್ತ್ರೀಯರ ಕುಣಿತದ ರೀತಿ ಬಹು ಆಕರ್ಷಣೀಯವಾಗಿರುತ್ತದೆ. ಇವರ ಕುಣಿತದಲ್ಲಿ ವಿಧ-ವಿಧಾನಗಳು ಕ್ರಮಗಳಿರುತ್ತವೆ. ಕೆಲವೊಮ್ಮೆ ಕುಣಿಯುವಾಗ ತಾವೇ ಲಯಬದ್ಧವಾಗಿ 'ಹಾಡಿಕೊಳ್ಳುತ್ತಾರೆ. ಯಾವ ಹಿಮ್ಮೇಳದ ಅವಶ್ಯಕತೆ ಇಲ್ಲಿಲ್ಲ. ಗುಂಪಿನಲ್ಲಿ ಒಬ್ಬರು ಹಾಡು ಹೇಳಿದ ಮೇಲೆ ಇನ್ನುಳಿದವರು ಅದನ್ನು ಪುನರುಚ್ಚಿಸುವರು. ಸಾಮಾನ್ಯವಾಗಿ ಪ್ರಾರ್ಥನೆಯೊಂದಿಗೆ ಇವರ ಸಾಮೂಹಿಕ ಕುಣಿತ ಆರಂಭಗೊಳ್ಳುತ್ತದೆ.

---

೪೨. ಗುರೂರು ಚೆನ್ನಬಸಪ್ಪ, ಕರ್ನಾಟಕ ಜಾನಪದ ಕಲೆಗಳು, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು-೧೯೭೭,

ಅಲೆಮಾರಿಗಳಾಗಿದ್ದ ಬಂಜಾರರು ವ್ಯಾಪಾರಸ್ಥರಾಗಿದ್ದುಕೊಂಡು ಸೈನಿಕರಿಗೆ ಆಹಾರ ಸರಬರಾಜು ಮಾಡುತ್ತಿದ್ದರೆಂಬ ಸಂಗತಿ ಇತಿಹಾಸದ ಪುಟಗಳಿಂದ ತಿಳಿಯುತ್ತದೆ. ಬಂಜಾರರು ವ್ಯಾಪಾರಕ್ಕಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸಾಗುವಾಗ ತಮ್ಮ ಹೆಂಡತಿ ಮಕ್ಕಳೊಡನೆ ಕಾಡು-ಮೇಡುಗಳ ಮೂಲಕ ಸಾಗುತ್ತಿದ್ದರು. ಹೀಗೆ ಸಾಗುವಾಗ ಊರಿನಿಂದ ಹೊರಗೆ ಒಂದುಕಡೆ ತಮ್ಮ ಬಿಡಾರ ಹೂಡುತ್ತಿದ್ದರು. ಈ ಸಂದರ್ಭದಲ್ಲಿ ಗಂಡಸರು ವ್ಯಾಪಾರಕ್ಕೆಂದು ಪಟ್ಟಣ ಪ್ರವೇಶಿಸಿದರೆ ವಾಪಸಾಗಲು ಎರಡು ಮೂರು ದಿನಗಳಾಗುತ್ತಿದ್ದವು. ಈ ಸಂದರ್ಭದಲ್ಲಿ ಲಂಬಾಣಿ ಮಹಿಳೆಯರು ಕಳ್ಳಕಾಕರು ಹಾಗೂ ದುಷ್ಟಮೃಗಗಳಿಂದ ತಮ್ಮನ್ನು ತಮ್ಮ ಮಕ್ಕಳನ್ನು ಸ್ವಯಂ ರಕ್ಷಿಸಿಕೊಳ್ಳುವ ಹೊಣೆ ಹೊರುತ್ತಿದ್ದರು.

ಲಂಬಾಣಿ ಸಮುದಾಯದಲ್ಲಿ ಹೆಣ್ಣಿನ ಸ್ಥಾನವು ಗಂಡಿನಷ್ಟೇ ಗೌರವಯುತವಾಗಿದೆ. ಇದಕ್ಕೆ ಹಲವಾರು ನಿದರ್ಶನಗಳನ್ನು ಅವರ ಆಚರಣೆಯಲ್ಲಿ ಗುರುತಿಸಬಹುದು. ಮದುವೆಯ ಸಂದರ್ಭದಲ್ಲಿ ಹೆಣ್ಣು ಗಂಡಿನ ಕುಟುಂಬದವರು ಬಳಗದವರಿಗೆ ಕೊಡುವ ಕರಾರಿನಲ್ಲಿ ಹಿರಿಯ ಮಹಿಳೆಯರಿಗೆ ಪ್ರತ್ಯೇಕವಾಗಿ ಹಣವನ್ನು ತೆಗೆದಿಡುವ ಪದ್ಧತಿ ಇದೆ. ಮದುವೆ ಸಮಾರಂಭದಲ್ಲಿ ಗಂಡಸರ ಪ್ರತೀಕವಾಗಿ ಪಾನಕವನ್ನು ಹಂಚುವ ಶಾಸ್ತ್ರವಿದೆ. ಮಹಿಳೆಯರ ಪ್ರತೀಕವಾಗಿ 'ಟೇಲೋ' ಎಂಬ ಶಾಸ್ತ್ರವಿದೆ. ಈ ಪ್ರತ್ಯೇಕ ಶಾಸ್ತ್ರಗಳನ್ನು ಪುರುಷರು ಮತ್ತು ಸ್ತ್ರೀಯರು ಪ್ರತ್ಯೇಕವಾಗಿಯೇ ನಡೆಸಿಕೊಡುತ್ತಾರೆ. ಇತರೆ ಹಿಂದೂ ಜಾತಿಗಳಲ್ಲಿ ಕಾಣದಿರುವ ಲಂಬಾಣಿ ಸಮಾಜದಲ್ಲಿ ಈ ಅದರಣೀಯವಾಗಿರುವ 'ವಧುವಿಗೆ ತೆರಕೊಡುವ ಪದ್ಧತಿ' ಅವರಲ್ಲಿ ಈಗಲೂ ಆಚರಣೆಯಲ್ಲಿದೆ. ಇದು ಈ ಸಮಾಜ ಹೆಣ್ಣಿಗೆ ಕೊಟ್ಟಿರುವ ಗೌರವದ ದ್ಯೋತಕವಾಗಿದೆ.

ಪಂಚಾಯಿತಿಯಲ್ಲಿ ಗಂಡಸರ ಮಾತಿನಷ್ಟೇ ಹಿರಿಯ ಮಹಿಳೆಯರ ಮಾತಿಗೆ ಬೆಲೆ ಇದೆ. ಪಂಚಾಯಿತಿಯಲ್ಲಿ ಗಂಡಸರು ಒಂದೆಡೆ ಗುಂಪಾಗಿ ಕುಳಿತ್ತಿದ್ದರೆ, ಮತ್ತೊಂದು ಕಡೆ ಹೆಂಗಸರು ಕುಳಿತು ಸಭೆಯ ತರ್ಕವನ್ನು, ತೀರ್ಮಾನವನ್ನು ಆಲಿಸುತ್ತಿರುತ್ತಾರೆ. ತಾಂಡದ ನಾಯಕರು ತೀರ್ಪು ಕೊಡಲು ಸೋತಿರುವ ಅನೇಕ ಕಡೆಗಳಲ್ಲಿ 'ನಾಯಕಿ'ಯರು ನ್ಯಾಯವನ್ನು ಸುಲಭವಾಗಿ ಬಗೆಹರಿಸಿದ ನಿದರ್ಶನಗಳು ಆ ಸಮುದಾಯದ ಮೌಖಿಕ ಸಾಹಿತ್ಯದಲ್ಲಿ ಸಿಗುತ್ತದೆ. ಕುಟುಂಬದಲ್ಲಿ ಗಂಡು-ಹೆಣ್ಣು ತಾರತಮ್ಯವಿಲ್ಲದೆ ಸರಿಸಮ ಕುಳಿತು ಸರಾಯಿ ಕುಡಿದು, ತುತ್ತು ರೊಟ್ಟಿಯನ್ನು ಹಂಚಿ ಉಣ್ಣುವುದು ಈ ಸಮೂಹದಲ್ಲಿ ಸಾಮಾನ್ಯವಾಗಿ ಕಂಡುಬರುವ ದೃಶ್ಯ.

ಮಾನವರ ಬದುಕು ನಂಬಿಕೆಗಳನ್ನೇ ಆಧರಿಸಿಯೇ ರೂಪುಗೊಂಡಿರುತ್ತದೆ. ಒಂದು ನಂಬಿಕೆ ಅಥವಾ ಗಾದೆ ಆ ಸಮಾಜದ ಆರ್ಥಿಕ ಸಾಂಸ್ಕೃತಿಕ ಚರಿತ್ರೆಯ ಪರಿಣಾಮ ಅವರು ಏನನ್ನು ನಂಬಿದ್ದಾರೋ ಅಥವಾ ಬದುಕಿದ್ದಾರೊ ಅದನ್ನು ಗಾದೆಗಳಲ್ಲಿ ವ್ಯಕ್ತಪಡಿಸುತ್ತಾರೆ. ಮೇಲಿನ ಆಚರಣೆಗಳಲ್ಲಿ ಹೆಣ್ಣು ಗಾದೆಗಳಲ್ಲಿ ಮತ್ತೊಂದು ಮುಖದೊಡನೆ ಕಾಣಿಸಿ ಕೊಂಡಿದ್ದಾಳೆ. ಸಂಸ್ಕೃತಿ ಎಂಬುದು ಅದರ ಸದಸ್ಯರ ವರ್ತನೆಗಳ ಒಟ್ಟು ಮೊತ್ತವೆಂದು ಪರಿಗಣಿಸಿದರೆ, ಅಂತಹ ಅನೇಕ ನಡವಳಿಕೆಗಳ ಪರಿಯನ್ನು ನಂಬಿಕೆಗಳು ತೆರೆಯುತ್ತವೆ.[೪೩]

'ಕಪ್ಪು-ಹಸಿರು ಗಾಜಿನ ಬಳೆಗಳನ್ನು ಲಂಬಾಣಿ ಮಹಿಳೆಯರು ಧರಿಸಬಾರದು' ಎಂಬುದೊಂದು ನಂಬಿಕೆ. ಲಂಬಾಣಿ ಮಹಿಳೆಯರು ಕೈತುಂಬಾ ದಂತದ ಬಳೆಗಳನ್ನು ಧರಿಸುತ್ತಾರೆ. ಇತರೆ ಸಮುದಾಯದ ಹೆಂಗಸರಂತೆ ಗಾಜಿನ ಬಳೆಗಳನ್ನು ಧರಿಸುವುದಿಲ್ಲ. ಅವರ ಸಂಸ್ಕೃತಿಯ ಪ್ರತೀಕವಾದ ಬಳೆಗಳನ್ನು ತಿರಸ್ಕರಿಸುವಂತೆ ಮಾಡುವ ಉದ್ದೇಶ ಇಲ್ಲಿರುವಂತೆ ಕಾಣುತ್ತದೆ. ಲಂಬಾಣಿ ಸಂಸ್ಕೃತಿ ವಿನಾಶವಾದಿತೆಂಬ ಭಯ ಮತ್ತು ಮೂಲ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳಬೇಕೆಂಬ ಕಾಳಜಿಯಿಂದ ಈ ನಂಬಿಕೆ ಆಚರಣೆಯಲ್ಲಿರಬೇಕು. ಮೂಲ ಸಂಸ್ಕೃತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಮಹಿಳೆಯರ ಗಾಜಿನ ಬಳೆಗಳನ್ನು ಧರಿಸಬಾರದು ಎಂಬ ನಿರ್ಬಂಧದೊಂದಿಗೆ ಆಕೆ ಯಾವುದೇ ಹೊಸತನ್ನು ಪಡೆಯಲು ಅನೇಕ ಕಟ್ಟುಪಾಡುಗಳಿರುವುದು ಗಮನೀಯವಾದ ಅಂಶ. ಆದರೆ ಇದೇ ಮೂಲ ಸಂಸ್ಕೃತಿ ಉಳಿಸಿಕೊಳ್ಳುವುದಕ್ಕಾಗಿ ಯಾವ ಗಂಡಸು ತನ್ನ ಮೇಲೆ ಇಂತಹ ನಿರ್ಬಂಧವನ್ನೇರಿ ಕೊಂಡಿರುವುದು ಅಪರೂಪವೆಂದೇ ಹೇಳಬೇಕು.

'ರಾತ್ರಿಯಲ್ಲಿ ಕಸೂತಿ ಹಾಕಬಾರದು' – ಲಂಬಾಣಿ ಮಹಿಳೆಯರು ತಮ್ಮ ಉಡುಪುಗಳನ್ನು ಅತ್ಯಂತ ಆಕರ್ಷಣೀಯವಾದ ಕಸೂತಿಯಿಂದ ಶೃಂಗರಿಸಿಕೊಳ್ಳುತ್ತಾರೆ. ಹಲವು ಬಗೆಯ ರಂಗುರಂಗಿನ ವಸ್ತುವನ್ನು ಕಸೂತಿಗಾಗಿ ಬಳಸಿಕೊಳ್ಳುತ್ತಾರೆ. ಇಂತಹ ಉಡುಪುಗಳನ್ನು ಸಿದ್ಧಪಡಿಸಲು ಆಸಕ್ತಿಯಿಂದ ಹಗಲುರಾತ್ರಿಯನ್ನದೆ ಕಸೂತಿಯಲ್ಲಿ ತನ್ಮಯರಾಗುವ ಮಹಿಳೆ ಯರಿಗೆ ಕೊರತೆಯಿಲ್ಲ. ರಾತ್ರಿಯಲ್ಲಿ ದೀಪದ ಮಂದವಾದ ಬೆಳಕಿನಲ್ಲಿ ಕಸೂತಿ ಹಾಕಿದರೆ ಸೂಜಿ ಕೈಗೆ ಚುಚ್ಚದಿರಲು ಸಾಧ್ಯವಿಲ್ಲ. ಆದ್ದರಿಂದ ಸೂಜಿಯಿಂದ ಚುಚ್ಚಿಸಿಕೊಳ್ಳದಿರಲೆಂಬ ಸದುದ್ದೇಶದಿಂದ ಈ ನಂಬಿಕೆ ಹುಟ್ಟಿಕೊಂಡಿದೆ.ಅಲ್ಲದೆ ಲಂಬಾಣಿ ಮಹಿಳೆಯರು ಕಸೂತಿ ಹಾಕುವುದರಲ್ಲಿ ಪರಿಣತಿಯನ್ನು ಪಡೆದವರೆಂಬುದನ್ನು ಈ ಗಾದೆ ಬಿತ್ತರಿಸುತ್ತದೆ.

---

೪೩. ಸಣ್ಣರಾಮ, ಲಂಬಾಣಿ ಗಾದೆಗಳು, ಕನ್ನಡ ಸಾಹಿತ್ಯ ಪರಿಷತ್, ೧೯೮೭.

'ಬಸುರಿಯರು ಹೊಸಬಟ್ಟೆ ಧರಿಸಬಾರದು' ಈ ನಂಬಿಕೆಯು ಬಸುರಿಯರಿಗೆ ದೃಷ್ಟಿ ತಾಕಬಾರದೆಂಬ ಹಿನ್ನೆಲೆಯಿಂದ ಬೆಳೆದುಬಂದಿದೆ. ಗರ್ಭಿಣಿ ಹೆಂಗಸರು ಮೈ ಕೈತುಂಬಿ ಕೊಂಡು ಚೆನ್ನಾಗಿ ಕಾಣುತ್ತಿರುತ್ತಾರೆ.ಮುಖದಲ್ಲಿ ಒಂದು ರೀತಿಯ ಕಳೆಬಂದಿರುತ್ತದೆ.ಈ ಸಂದರ್ಭದಲ್ಲಿ ಆಕೆ ಹೊಸಬಟ್ಟೆ ಧರಿಸಿಕೊಂಡರೆ ಇನ್ನೂ ಚೆನ್ನಾಗಿ ಕಾಣುತ್ತಾಳೆ.ಹಾಗಾಗಿ ಆಕೆಗೆ ಯಾರದಾದರೂ ದೃಷ್ಟಿ ತಾಕಬಹುದೆಂಬ ಹಿನ್ನಲೆಯಲ್ಲಿ ಈ ನಂಬಿಕೆ ಬಂದಿದೆ.ದೃಷ್ಟಿ ತಾಕುವುದೇನೆಂದರೆ ಮೊದಲನೆಯದಾಗಿ ಭೂತ, ಪ್ರೇತ, ಪೀಡೆ ಪಿಶಾಚಿಗಳ ದೃಷ್ಟಿತಾಕಬಹುದು. ಎರಡನೆಯದಾಗಿ ಜನರ ದೃಷ್ಟಿ ತಾಕುವುದು. ಇವುಗಳಿಂದ ತಪ್ಪಿಸಿಕೊಳ್ಳಲು ಈ ನಂಬಿಕೆ ಹುಟ್ಟಿಕೊಂಡಿವೆ.

'ನಿಶ್ಚಿತಾರ್ಥದ ನಂತರ ಕನ್ಯೆಯು ಒಡಣಿಯಿಂದ ತನ್ನ ಮುಖ ಮುಚ್ಚಿಕೊಂಡೇ ಇರಬೇಕು' – ಹಿಂದೆ ಬಂಜಾರರ ಸಮುದಾಯದ ಹೆಣ್ಣು ಮಗಳು ತನ್ನ ಮದುವೆಯ ನಿಶ್ಚಿತಾರ್ಥದ ಬಳಿಕ ಆಕೆ ತನ್ನ ಗಂಡನ ಮನೆಯ ನಾಯಿ ಕಂಡರೂ ಸೆರಗಿನಿಂದ ತನ್ನ ಮುಖ ಮುಚ್ಚಿಕೊಂಡು ಗೌರವ ಸೂಚಿಸುತ್ತಿದ್ದಳಂತೆ. ಇದು ಆಕೆಯ ಮೇಲೆ ಹೇರಿರುವ ಒತ್ತಡವಾಗಿದೆ. ಆದರೆ ನಿಶ್ಚಿತಾರ್ಥದ ನಂತರ ಕನ್ಯೆ ತನ್ನ ಭಾವಿಪತಿಯನ್ನು ಕಂಡು ನಾಚಿಕೆಯಿಂದ ಮುಖ ಮುಚ್ಚಿಕೊಳ್ಳುವುದು ಅಸಹಜವೇನಲ್ಲ. ಅದೇ ರೀತಿ ಗಂಡು ನಾಚಿಕೊಳ್ಳ ಬಹುದು. ಅದು ಬಿಟ್ಟು ಗಂಡನ ಮನೆಯ ನಾಯಿ ಕುರಿಗಳಿಗೆಲ್ಲ ಮುಖಮುಚ್ಚಿ ಗೌರವ ಸೂಚಿಸುವುದು ಸರಿಯಾದುದಲ್ಲ. ಹೀಗೆ ಬಂಜಾರ ನಂಬಿಕೆಗಳಲ್ಲಿ ಅವರ ಆಚಾರ–ವಿಚಾರಗಳಲ್ಲಿ ಅವರ ಬದುಕಿನ ಅನುಭವಗಳನ್ನು ಕಾಣಬಹುದು. 'ಗಾದೆಯಿಲ್ಲದ ಭಾಷೆಯಿಲ್ಲ, ಗಾದೆ ತಿಳಿಯದ ವ್ಯಕ್ತಿಯಿಲ್ಲ' ಎಂಬಂತೆ ಪ್ರತಿಯೊಂದು ಸಮುದಾಯದ ಭಾಷೆಗಳಲ್ಲಿ ಗಾದೆ ಅತ್ಯಂತ ಮಹತ್ವದ ಸ್ಥಾನವನ್ನು ಪಡೆದಿದೆ. ಒಂದು ಸಮುದಾಯದ ಭಾಷೆಯ ಜಾಯಮಾನವನ್ನು ಅರಿತುಕೊಳ್ಳುವಲ್ಲಿ ಈ ಗಾದೆಗಳು ಬಹುಮಟ್ಟಿಗೆ ನೆರವಾಗುತ್ತವೆ.

**ಬಂಜಾರರಲ್ಲಿ ಧಾರ್ಮಿಕ ನಂಬಿಕೆ ಮತ್ತು ಆಚರಣೆಗಳು**

ಸ್ವತಂತ್ರ ಭಾರತದಲ್ಲಿ ದೇವರು ಹಾಗು ಧರ್ಮದ ವಿಷಯದಲ್ಲಿ ಭಿನ್ನಾಭಿಪ್ರಾಯ, ತಿಳುವಳಿಕೆ ಹಾಗೂ ಮನೋಭಾವನೆಗಳು ಇದ್ದಂತೆ ಬಂಜಾರರಲ್ಲಿಯೂ ಕಂಡುಬರುತ್ತವೆ. ಈ ಸಮುದಾಯದವರು ದೇವರ ಮೂರ್ತಿ, ನಂಬಿಕೆಗಳಿಗಿಂತ ದೈವತ್ವಕ್ಕೆ ಹೆಚ್ಚು ಆಸಕ್ತಿ ಹಾಗೂ ಪ್ರಾಮುಖ್ಯತೆಯನ್ನು ನೀಡುತ್ತಾರೆ. ಬಂಜಾರರಲ್ಲಿ ವಿಗ್ರಹಾರಾಧನೆ ರೂಢಿಯಲ್ಲಿದ್ದರೂ, ಒಂದೇ ನಿರ್ದಿಷ್ಟ ಮತ್ತು ವಿಶಿಷ್ಟ ದೇವರ ಮೂರ್ತಿಯನ್ನು ಆರಾಧಿಸುತ್ತಿರುವುದು ಇಂದಿಗೂ ಕಂಡುಬರುವುದಿಲ್ಲಾ.

ಭಾರತೀಯ ಧಾರ್ಮಿಕ ಪರಂಪರೆ, ಸಂಸ್ಕೃತಿಗೆ ಪ್ರಭಾವಿತ ಹಾಗೂ ಪ್ರೇರಿತರಾಗಿರುವ ಬಂಜಾರರು ತಾವು ನೆಲೆಗೊಂಡಿರುವ ಪ್ರಾದೇಶಿಕ ಧರ್ಮ, ದೇವರು-ದೇವತೆಗಳನ್ನು ಮತ್ತು ಹಬ್ಬ-ಹರಿದಿನಗಳನ್ನು ತಮ್ಮದನ್ನಾಗಿಸಿಕೊಂಡು ಆಚರಿಸುತ್ತಾ ಬಂದಿದ್ದಾರೆ. ಪರಂಪರೆಗಳಿಂದ ಬಂದ ಧಾರ್ಮಿಕ ಶ್ರದ್ಧೆಯೇ ಅವರ ಜೀವನದ ಆಧಾರ, ಜೀವನದಲ್ಲಿ ಬರುವ ಕಷ್ಟ-ಸುಖಗಳಿಗೂ, ಒಳಿತು-ಕೆಡಕುಗಳಿಗೂ ಒಂದು ಅಗೋಚರಶಕ್ತಿ ಅಡಗಿರುತ್ತದೆ. ಆ ಶಕ್ತಿಯ ಇಚ್ಛಾಶಕ್ತಿಗೆ ಅನುಸಾರವಾಗಿ ನಿತ್ಯ ಜೀವನ ನೆಡೆಯುತ್ತಿದೆ ಎಂಬ ನಂಬಿಕೆ ಇದೆ.

ಬಂಜಾರರು ಸಾಮಾನ್ಯವಾಗಿ ಶಕ್ತಿದೇವತೆಗಳ ಉಪಾಸಕರು, ಮರಿಯಮ್ಮ, ದುರ್ಗಮ್ಮ, ಕಾಳಿ, ವಾಗ್ಜಾಯಿ, ಸೇವಾಬಾಯಿ, ಮುಂತಾದ ದೇವತೆಗಳನ್ನು ಪೂಜಿಸುತ್ತಾರೆ. ಅಲ್ಲದೆ ಅವರು ಶಿವ ವಿಷ್ಣು, ರಾಮ, ಕೃಷ್ಣ ಮುಂತಾದ ಹಿಂದೂ ದೇವರುಗಳನ್ನು ಪೂಜಿಸುತ್ತಾರೆ. ಬಂಜಾರರ ವಾಸಸ್ಥಳದಲ್ಲಿ ಅಂದರೆ ಪ್ರತಿಯೊಂದು ತಾಂಡಾಗಳಲ್ಲಿ ಪ್ರಮುಖವಾಗಿ, ಸೇವಾಬಾಯಿ ಹಾಗೂ ಮರಿಯಮ್ಮನ ದೇವಸ್ಥಾನಗಳಿರುತ್ತವೆ. ಬಂಜಾರರು ಎಲ್ಲೇ ಇರಲಿ, ಈ ದೇವತೆಗಳನ್ನು ಸ್ಮರಿಸಿಕೊಳ್ಳತ್ತಾರೆ. ಈ ಎರಡು ದೇವರುಗಳ ಸ್ಥಳದಲ್ಲಿ ಅಂದರೆ ದೇವಸ್ಥಾನದ ಮುಂಭಾಗದಲ್ಲಿ ಕೆಂಪು ಹಾಗೂ ಬಿಳಿ ಬಣ್ಣದ ಧ್ವಜಗಳಿರುತ್ತವೆ. ಕೆಂಪು ನಿಶಾನೆ ಮರಿಯಮ್ಮದ್ದಾರೆ, ಬಿಳಿ ನಿಶಾನೆ ಸೇವಾಬಾಯಿದಾಗಿರುತ್ತದೆ. ಈ ಎರಡು ರೀತಿಯ ಧ್ವಜಗಳು ಪ್ರತಿ ಬಂಜಾರ ತಾಂಡಾಗಳಿರುವುದು ವಾಡಿಕೆ. ಕಾರಣ ಅನಾರೋಗ್ಯಕರ ಸ್ಥಿತಿಯಿಂದ ಸಂರಕ್ಷಣೆ ಪಡೆಯಲಿಕ್ಕಾಗಿ ಅಥವಾ ಕಾಲರಾ, ಪಿಡುಗು ಮತ್ತಿತರ ಮಾರಾಣಾಂತಿಕ ಖಾಯಿಲೆಗಳು ಬರುವುದಿಲ್ಲಾ ಎಂಬ ನಂಬಿಕೆಯು ಒಂದು ಮುಖ್ಯ ಅಂಶವಾಗಿದೆ. ಈ ಎರಡು ದೇವತೆಗಳ ಪವಾಡಗಳ ಬಗೆಗೆ ಅನೇಕ ಪುರಾಣ ಕಥನ ಗೀತೆಗಳ ಬಳಕೆ ಕಂಡುಬರುತ್ತದೆ.

ಅಧ್ಯಯನಕ್ಕೆ ಒಳಪಟ್ಟ ಕ್ಷೇತ್ರಗಳಲ್ಲಿ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಬಹುತೇಕ ತಾಂಡಗಳಲ್ಲಿ ದೇವತೆಯ ಆರಾಧನೆ, ದೇವಮಂದಿರಗಳನ್ನು ನಿರ್ಮಿಸಿಕೊಂಡು ನಿತ್ಯ ಜೀವನದಲ್ಲಿ ಮರಿಯಮ್ಮ ಮತ್ತು ಸೇವಾಬಾಯಿ ದೇವತೆಗಳ ಸ್ಮರಣೆಯೇ ಆಗಿರುತ್ತದೆ. ಕೃಷ್ಣಾಪುರ ಹನುಮನಹಟ್ಟಿ ತಾಂಡಗಳಲ್ಲಿ ದೇವರುಗಳ ಅಂದರೆ ಕೃಷ್ಣ ಮತ್ತು ಹನುಮಂತ ದೇವರುಗಳ ಸ್ಮರಣೆ ಹಾಗೂ ಆಚರಣೆಯನ್ನು ಕೂಡಾ ಕಾಣಬಹುದಾಗಿದೆ. ಇವರು ದೀಪಾವಳಿ, ಕಾರ್ತೀಕಮಾಸ ಹಾಗೂ ಪ್ರತಿ ಹುಣ್ಣಿಮೆಯದಿನಗಳಂದು ಈ ದೇವರುಗಳ ಪೂಜಾ ಸಮಾರಂಭವನ್ನು ನೆರವೇರಿಸಿಕೊಳ್ಳುತ್ತಾರೆ. ಉಳಿದಂತೆ ಚಿಕ್ಕಮಗಳೂರಿನ ಕಡೂರು

ತಾಲ್ಲೂಕಿನ ಆಯ್ಕೆಯ ಕ್ಷೇತ್ರಗಳು ಹಾಗೂ ಚಿಕ್ಕಬಳ್ಳಾಪುರದ ಬಾಗೇಪಳ್ಳಿ ತಾಲ್ಲೂಕಿನ ಆಯ್ಕೆಯ ತಾಂಡಗಳಲ್ಲಿ ಅಷ್ಟೇನೂ ವಿಜೃಂಭಣೆಯಿಲ್ಲದೆ ಹಾಗೂ ಸಾಮಾನ್ಯ ವಿಧಾನದಲ್ಲಿ ದೇವತೆಗಳ ಆರಾಧನೆಯನ್ನು ಮಾತ್ರ ಕಾಣಬಹುದಾಗಿದೆ. ಕಾರಣ ಈ ಎರಡು ಜಿಲ್ಲೆಗಳ ತಾಂಡ ಸಮುದಾಯದವರಲ್ಲಿ ಬಡತನ, ನಿರುದ್ಯೋಗ ಹಾಗೂ ಅನಾರೋಗ್ಯದಂತಹ ಪರಿಸ್ಥಿತಿಗಳು ಧಾರ್ಮಿಕ ಆಚರಣೆಗಳ ವೈಭವೀಕರಣಕ್ಕೆ ಮಂದಗತಿಯ ಪ್ರೇರಣೆಗಳಾಗಿರುತ್ತವೆ ಎಂಬುದು ಕ್ಷೇತ್ರಾಧ್ಯಯನದಲ್ಲಿ ಕಂಡುಕೊಂಡಿರುವ ವಿಷಯವಾಗಿದೆ.

**ಶ್ರೀ ಸೇವಾಲಾಲ ಅವರ ಒಂದು ನೆನಪು**

ಕರ್ನಾಟಕ ಹಾಗೂ ಮಹಾರಾಷ್ಟ್ರದ ಬಂಜಾರರಲ್ಲಿ ಶ್ರೀ ಸದ್ಗುರು ಸೇವಾಲಾಲ ಅವರಿಗೆ ಮಹತ್ವದ ಸ್ಥಾನವಿದೆ. ಸೇವಾಲಾಲರು ಈ ಜನರ ಆರಾಧ್ಯ ದೇವನಾಗಿದ್ದಾನೆ. ಅವರನ್ನು ಅವತಾರ ಪುರುಷನೆಂದೂ ಸಿದ್ಧಿ ಪುರುಷನೆಂದೂ ಭಾವಿಸುತ್ತಾರೆ. ಆಜನ್ಮ ಬ್ರಹ್ಮಚಾರಿಯಾದ ಇವರು ಸಮಸ್ತ ಬಂಜಾರ ಸಮಾಜದವರಿಗೆ ಭಾಯಿ(ಅಣ್ಣ)ನಾಗಿದ್ದಾನೆ. ಅವರೊಬ್ಬ ಐತಿಹಾಸಿಕ ಮಹಾನುಭಾವ ಅವರನ್ನು ಕುರಿತಾದ ಕಥೆಯನ್ನು ನಿರೂಪಿಸುವ ಅನೇಕ ಗೀತೆಗಳು ಬಂಜಾರರಲ್ಲಿ ಪ್ರಚಲಿತವಿದೆ.

ಕರ್ನಾಟಕದ ಮಂಗಳೂರಿನ ಸಮೀಪದಲ್ಲಿರುವ ಗುತ್ತಿವಲ್ಲಾರಿ ಎಂಬುದು ಸೇವಾಲಾಲ ಅವರ ಜನ್ಮ ಸ್ಥಳವಾಗಿದೆ. ಪೂರ್ವದಲ್ಲಿ ರಾಠೋಡ್‌ವಂಶದ ರಾಂಜಿ ನಾಯ್ಕನ ಹಿರಿಯ ಮಗ ಭೀಮಾ ನಾಯ್ಕನಿಗೆ ಸಂತಾನವಿಲ್ಲದ ಕಾರಣ ತನ್ನ ಸಹಧರ್ಮಿಣಿಯೊಂದಿಗೆ ಹನ್ನೆರಡು ವರ್ಷಗಳ ಕಾಲ ಉಗ್ರ ತಪಸ್ಸನ್ನು ಕೈಗೊಂಡಿದ್ದರ ಫಲವಾಗಿ ಮರಿಯಮ್ಮ (ಮಾರಿಕಾಂಬೆ) ಪ್ರತ್ಯಕ್ಷಳಾಗಿ ಅಭಯವನ್ನು ನೀಡುತ್ತಾಳೆ. ಅಲ್ಲದೆ ಅವನಿಂದ ಹುಟ್ಟುವ ನಾಲ್ಕು ಜನ ಮಕ್ಕಳಲ್ಲಿ ಮೊದಲನೆಯವನನ್ನು ತನ್ನ ಸೇವಕನನ್ನಾಗಿ ಮಾಡಬೇಕೆಂದೂ, ಅವನಿಗೆ ಸೇವಾ ಎಂದು ಹೆಸರಿಡಬೇಕೆಂದೂ ಆಜ್ಞಾಪಿಸಿ ಭೀಮಾನಾಯ್ಕನಿಂದ ಪ್ರತಿಜ್ಞೆ ಮಾಡಿಸಿಕೊಳ್ಳುತ್ತಾಳೆ. ಆರಂಭದಲ್ಲಿ ಸೇವಾಲಾಲ್ ಮರಿಯಮ್ಮಳ ಸೇವೆ ಮಾಡಲು ತಿರಸ್ಕರಿಸುತ್ತಾನೆ. ನಂತರ ಮನವೊಲಿಸಿದ ಮೇಲೆ ಮರಿಯಮ್ಮಳ ಸೇವೆ ಮಾಡುತ್ತಾ ಸಮುದಾಯದ ಏಳಿಗೆಗಾಗಿ ಶ್ರಮಿಸುತ್ತಾನೆ. ಕಾಲಾಂತರಗಳಲ್ಲಿ ಮರಿಯಮ್ಮ ಹಾಗೂ ಸೇವಾಲಾಲ್ ಅವರ ನಡುವೆ ಅನೇಕ ವೈರುಧ್ಯಗಳು ಸಂಭವಿಸಿ ದೈವತ್ವದ ರೂಪ ಪ್ರತಿಕ್ರಿಯೆಗಳು ಜರುಗುತ್ತವೆ ಹಾಗೂ ಪ್ರತಿಸ್ಪರ್ಧಿ ಭಾವನೆಗಳಿಂದಾಗಿ ಅನೇಕ ಘಟನೆಗಳು ಸಂಭವಿಸುತ್ತವೆ. ಅಂತ್ಯದಲ್ಲಿ ಇವರಿಬ್ಬರೂ ಪ್ರಭಾವಿ ದೇವರು–ದೇವತೆಗಳಾಗಿ ಅಪರಾವತಾರ

ಪಡೆದು ಬಂಜಾರರ ತಾಂಡಗಳ ಶಾಶ್ವತವಾದ ಆರಾಧ್ಯ ದೈವಗಳಾಗಿ ಹೊರಹೊಮ್ಮುತ್ತಾರೆ. ಈ ಪ್ರಾಚೀನ ದೈವಿಕ ಹಿನ್ನಲೆಗಾಗಿಯೇ ಇಂದಿಗೂ ಪ್ರತಿ ತಾಂಡಗಳಲ್ಲಿ ಕೆಂಪು ಧ್ವಜಸ್ತಂಭ ಹಾಗೂ ಬಿಳಿ ಧ್ವಜ ನಿಶಾನೆಯೂ ಅಸ್ತಿತ್ವದಲ್ಲಿರುವುದೇ ಸಾಕ್ಷಿಯಾಗಿರುತ್ತದೆ.

**ವೀರ ಪರಂಪರೆ**

ಲಂಬಾಣಿಗರ ಇತಿಹಾಸ ಬಹು ಪ್ರಾಚೀನ ಹಾಗೂ ಗೌರವಯುತವಾಗಿದೆ. ಮೂಲತಃ ರಾಜಸ್ಥಾನದವರಾದ ಲಂಬಾಣಿಗಳು ರಾಜಸ್ಥಾನದ ವೀರ ಹಾಗೂ ಪರಾಕ್ರಮಿ ರಜಪೂತ ವಂಶದವರಾಗಿದ್ದಾರೆ. ರಾಜಸ್ಥಾನ, ಗುಜರಾತ ಹಾಗೂ ಮಾಲವ ಪ್ರದೇಶಗಳ ಒಂದು ಭಾಗ ವೀರತನಕ್ಕೆ ಪ್ರಸಿದ್ಧವಾಗಿದ್ದರೆ, ಮತ್ತೊಂದು ಭಾಗ ವ್ಯಾಪಾರಕ್ಕಾಗಿ ಅತ್ಯಂತ ಪ್ರಸಿದ್ಧಿಯನ್ನು ಪಡೆದಿದೆ. ಮಧ್ಯಕಾಲದಲ್ಲಿ ರಾಜಸ್ಥಾನ, ಪಂಜಾಬ, ಉತ್ತರ ಹಾಗೂ ಮಧ್ಯಭಾರತಗಳ ಮೇಲೆ ವಿದೇಶಿಯರ ಆಕ್ರಮಣ ನಡೆದು ನೈತಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರ ಗಳಲ್ಲಿ ಒಂದು ಬಗೆಯ ದಿಗ್ಭ್ರಮೆಯನ್ನುಂಟು ಮಾಡಿತು. ಈ ಸಂದರ್ಭದಲ್ಲಿ ರಜಪೂತರ ಪರಿಸ್ಥಿತಿ ತುಂಬಾ ಡೋಲಾಯಮಾನವಾಗಿತ್ತು. ಆಗ ಲಂಬಾಣಿಗಳು ಅನಿವಾರ್ಯವಾಗಿ ಮೊಘಲರ ಸೇವೆಗಾಗಿ ನಿಲ್ಲಬೇಕಾಯಿತು. ಇವರು ಮೊಗಲರ ಸೈನ್ಯಕ್ಕೆ ಆಹಾರ ಧಾನ್ಯ ಹಾಗೂ ಯುದ್ಧ ಸಾಮಾಗ್ರಿಗಳನ್ನು ತಲುಪಿಸುವ ಗುರುತರವಾದ ಜವಾಬ್ದಾರಿಯನ್ನು ನಿರ್ವಹಿಸಿದರು. ಕ್ರಿ.ಶ.೧೭೯೧–೯೨ರಲ್ಲಿ ಬ್ರಿಟೀಷ್ ಸೈನ್ಯಕ್ಕೆ ಆಹಾರ ಧಾನ್ಯ ಪೂರೈಕೆಗಾಗಿ ಬಂಜಾರಾ ಜನರನ್ನು ನಿಯಮಿಸಿಕೊಳ್ಳಲಾಗುತ್ತಿತ್ತು. ಅಲ್ಲದೆ ಡ್ಯೂಕ್ ಆಫ್ ವೆಲ್ಲಿಂಗ್ಟನ್ ಕೂಡ ಅವರನ್ನು ಈ ಕೆಲಸಕ್ಕಾಗಿ ನಿಯಮಿತವಾಗಿ ನಿಯಮಿಸಿಕೊಂಡಿದ್ದನು ಎಂದು ಮಿ ಫರೀದಿ ಉಲ್ಲೇಖಿಸಿದ್ದಾನೆ(೧೮೮೩–೮೬). ಹೀಗೆ ಲಂಬಾಣಿಗರು ಬೇರೆ ಬೇರೆ ಅರಸರ ಬಳಿಯಲ್ಲಿದ್ದುಕೊಂಡು ಬಹುದೂರದ ಶತ್ರು ಪ್ರದೇಶದಲ್ಲಿ ಹೋರಾಡುತ್ತಿದ್ದ ಸೈನ್ಯಗಳಿಗೆ ಇವರು ನಿರ್ಭಯವಾಗಿ ಹಾಗೂ ನಿರಾತಂಕವಾಗಿ ಆಹಾರವನ್ನು ಸರಬರಾಜು ಮಾಡುತ್ತಿದ್ದರು; ಅಷ್ಟೇ ಅಲ್ಲ ಆಗಾಗ ಉದ್ಭವಿಸಬಹುದಾದ ಘೋರವಾದ ಯುದ್ಧದ ಪ್ರಸಂಗಗಳಲ್ಲಿ ಅನಿವಾರ್ಯವಾಗಿ ಭಾಗವಹಿಸಬೇಕಾಗುತ್ತಿತ್ತು. ಹೋರಾಟಕ್ಕೆ ಎಂದೂ ಹಿಂಜರಿದ ಜನಾಂಗವಲ್ಲ. ಈಗಲೂ ಅವರ ದೃಢಕಾಯವನ್ನು ನೋಡಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಬೇರೆ ಬೇರೆ ಸೈನ್ಯಗಳಲ್ಲಿ ಸೇವೆ ಸಲ್ಲಿಸಿದ ಯುದ್ಧವೀರರೂ, ಧೈರ್ಯಶಾಲಿಗಳೂ ಹಾಗೂ ವೀರ ವಂಶಜರಾದ ಲಂಬಾಣಿಗರನ್ನು ೧೮೨೫ರಲ್ಲಿ ಬಿಶಾಪ ಹೆಬರವರು ತಾವು ತಮ್ಮ ಪ್ರವಾಸದಲ್ಲಿ ಕಂಡ ಬಗೆಯನ್ನು ಹೀಗೆ ಬರೆಯುತ್ತಾರೆ. "We passed a number of Brinjarees. Who were varying salt. They all had bows, arrows, sworded and shield, Even the Children had

many of them bows and arrows suited to their strength and I saw one young woman equipped in the same manner" (1909:212) ಬಿಶಾಪ ಹೆಬರವರ ಈ ಮಾತುಗಳು ಲಂಬಾಣಿಗರ ಯೋಧತ್ವ ಹಾಗೂ ವೀರತ್ವದ ಮೇಲೆ ಹೆಚ್ಚಿನ ಬೆಳಕನ್ನು ಚೆಲ್ಲುತ್ತವೆ. ಪ್ರತಿಯೊಬ್ಬರ ಬಳಿಯಲ್ಲಿ ಬಿಲ್ಲು, ಬಾಣ, ಖಡ್ಗ ಮುಂತಾದ ಶಸ್ತ್ರಗಳಿದ್ದವೆಂದೂ, ಮಕ್ಕಳ ಬಳಿಯಲ್ಲೂ ಹಾಗೂ ಯುವತಿಯರ ಬಳಿಯಲ್ಲೂ ಈ ಶಸಾಸ್ತ್ರಗಳಿರುವುದನ್ನು ತಾವು ಕಂಡಿರುವುದಾಗಿ ಹೇಳಿದ್ದಾರೆ.

**ವ್ಯಕ್ತಿನಾಮಗಳು:** ವ್ಯಕ್ತಿನಾಮಗಳು ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ಮಹತ್ವಪೂರ್ಣ ವಾದುದಾಗಿದೆ. ಯಾವುದೇ ವ್ಯಕ್ತಿಯ ಹೆಸರು ಅವನನ್ನು ಸಮೂಹದಿಂದ ಬೇರ್ಪಡಿಸುತ್ತದೆ. ಸಮೂಹದ ಪ್ರತಿಯೊಬ್ಬ ವ್ಯಕ್ತಿಗೂ ಒಂದೊಂದು ಬಗೆಯ ಹೆಸರು, ಕುಲ, ಗೋತ್ರಗಳಿರುತ್ತವೆ. ಪ್ರತಿಯೊಂದು ಜನಾಂಗದ ಎಲ್ಲ ವ್ಯವಹಾರಗಳಿಗೂ ಒಂದು ಮೂಲ ಹೆಸರಿದೆ. ಯಾವುದಕ್ಕೂ ಅದು ಅವನಿಗೆ ಒಂದು ನಿರ್ದಿಷ್ಟವಾದ ವ್ಯಕ್ತಿತ್ವವನ್ನು ಹಾಗೂ ಅಸ್ತಿತ್ವವನ್ನು ತಂದುಕೊಡುತ್ತದೆ. ಡಾ. ದೇ.ಜ.ಗೌಡರು ಹೇಳುವಂತೆ "ಅವು ಇತಿಹಾಸ, ಭೂಗೋಳ, ಸಾಮಾಜಿಕ ಪದ್ಧತಿ ಅಂತೆಯೇ ಜನರ ಇಷ್ಟಾನಿಷ್ಟ ಮತ್ತು ಸಾಹಸ ಕಲ್ಪನೆಗಳ ಬಗೆಗೆ ಬೆಳಕು ಚೆಲ್ಲುತ್ತವೆ; ಜನಾಂಗ ಜನಾಂಗಗಳ ನಡುವಣ ಸಾಮ್ಯ–ವೈಷಮ್ಯಗಳನ್ನು ಗುರುತಿಸುತ್ತವೆ; ಒಂದು ನಾಡಿನ ಸಮಗ್ರತೆ, ಐಕ್ಯವನ್ನು ಕಾಪಾಡುತ್ತವೆ. ಒಟ್ಟಿನಲ್ಲಿ ಅವು ಸಂಸ್ಕೃತಿಯ ನಿಶಾನಿಗಳೆಂದೂ, ಒಂದು ಜನಾಂಗದ ಭಾವಕೋಶಗಳೆಂದೂ ತಿಳಿಯಬಹುದಾಗಿದೆ".

ವ್ಯಕ್ತಿನಾಮಗಳು, ವ್ಯಕ್ತಿಯ ಹುಟ್ಟಿನೊಂದಿಗೆ ಬೆಳೆದುಬಂದವುಗಳಾಗಿವೆ. ಪರಸ್ಪರ ವ್ಯವಹಾರ ಗಳಿಗಾಗಿ ಹೆಸರು ಅಗತ್ಯವೆಂದು ಕಂಡುಬಂದಿರಬೇಕು ಅಥವಾ ಒಬ್ಬ ವ್ಯಕ್ತಿಯನ್ನು ಸ್ಪಷ್ಟವಾಗಿ ಗುರುತಿಸುವಲ್ಲಿ ಹೆಸರು ಚಲಾವಣೆಯಲ್ಲಿ ಬಂದಿರಬೇಕು. ಎಷ್ಟೋ ಸಲ ಈ ವ್ಯಕ್ತಿನಾಮಗಳು ಇಡೀ ಒಂದು ಸಮುದಾಯವನ್ನು ಪ್ರತಿನಿಧಿಸುವಂತಿರುತ್ತವೆ. ಕೇವಲ ನಾಮ ಮಾತ್ರದಿಂದಲೇ ಆ ವ್ಯಕ್ತಿಯ ಸಮುದಾಯದ ಜೀವನ ವಿಧಾನ, ಸಂಸ್ಕೃತಿ ಪರಂಪರೆಯನ್ನು ಗುರುತಿಸಿ ಕೊಳ್ಳಬಹುದು. ಹೀಗಾಗಿ ಪ್ರಾಚೀನ ಕಾಲದಿಂದಲೂ ಈ ವ್ಯಕ್ತಿನಾಮಗಳು ಚಲಾವಣೆಯಲ್ಲಿ ರುವುದನ್ನು ಗಮನಿಸಬಹುದು. "ಆದರೆ ಅವುಗಳ ಉಗಮ, ಸ್ವರೂಪಗಳು, ಅವುಗಳ ಬಗೆಗಿನ ಸಾಮಾಜಿಕ ಕಟ್ಟುಪಾಡುಗಳು ಕಾಲದಿಂದ ಕಾಲಕ್ಕೆ, ಸಮುದಾಯದಿಂದ ಸಮುದಾಯಕ್ಕೆ ವ್ಯತ್ಯಾಸವಾಗುತ್ತ ಬಂದಿವೆ"[೪೪]

---

೪೪. ದೇ. ಜವರೇಗೌಡರು, ಜನಪದ ಸೌಂದರ್ಯ, ಸಹ್ಯಾದ್ರಿ ಪ್ರಕಾಶನ, ಮೈಸೂರು–೧೯೭೮.

ವಿಶಿಷ್ಟವಾದ ಸಂಸ್ಕೃತಿ ಪರಂಪರೆಯನ್ನು ಹೊಂದಿದ ಕರ್ನಾಟಕದ ಲಂಬಾಣಿಗಳ ಹೆಸರುಗಳಲ್ಲಿ ಒಂದು ಬಗೆಯ ಪ್ರತ್ಯೇಕತೆ ಹಾಗೂ ಸ್ವಾರಸ್ಯ ಎದ್ದು ಕಾಣಿಸುತ್ತದೆ. ಮೂಲತಃ ರಾಜಸ್ಥಾನದವರಾದ ಲಂಬಾಣಿಗರು ದಕ್ಷಿಣಕ್ಕೆ ಬಂದು ಅಲ್ಲಲ್ಲಿ ತಂಡೋಪ ತಂಡಗಳಾಗಿ ಸಂಚರಿಸಿ ವ್ಯಾಪಾರವನ್ನು ಕೈ ಕೊಂಡಿದ್ದರಿಂದ ಸಾವಿರಾರು ಜನರ ಸಂಪರ್ಕ, ಅನ್ಯ ಸಂಸ್ಕೃತಿಯ ಪರಿಚಯ, ಆಯಾ ಸಮುದಾಯಗಳ ಜೀವನ ವಿಧಾನ ಮುಂತಾದವುಗಳು ಅವರ ಗಮನಕ್ಕೆ ಬಂದಿರಲು ಸಾಕು. ಇವುಗಳಿಂದ ಈ ಜನರು ಸಾಕಷ್ಟು ಪ್ರಭಾವಿತರಾಗಿ ರುವುದರಲ್ಲಿ ಯಾವ ಸಂದೇಹವಿಲ್ಲ. ವ್ಯಾಪಾರ ಮನೋಭಾವದಿಂದ ವಲಸೆ ಬಂದಿರುವ ಈ ಜನರು ಆಯಾ ಪ್ರಾದೇಶಿಕವೆನ್ನಬಹುದಾದ ಹಲವಾರು ಹೆಸರುಗಳ ಪ್ರಭಾವಕ್ಕೊಳ ಗಾಗಿರುವುದು ಸಹಜವಾಗಿದೆ. ಆದರೂ ಲಂಬಾಣಿಗರ ಮೂಲ ಹೆಸರುಗಳ ಉಚ್ಚಾರಣೆಯಲ್ಲಿ ಒಂದು ರೀತಿಯ ಸ್ವಾರಸ್ಯ ಎದ್ದುತೋರುತ್ತದೆ. ಹೆಸರುಗಳ ಉಚ್ಚಾರಣೆಯಿಂದಲೇ ಅವರು ಲಂಬಾಣಿ ಸಮಾಜದವರೆಂಬುದನ್ನು ತಟ್ಟನೇ ಗುರುತಿಸಿಕೊಳ್ಳಬಹುದು. ಕರ್ನಾಟಕದ ಈ ಸಮುದಾಯದ ವಿಚಿತ್ರವಾದ ಹೆಸರುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಒಂದೆಡೆಗೆ ಕನ್ನಡಿಗರ ಪ್ರಭಾವ; ಇನ್ನೊಂದೆಡೆಗೆ ಮುಸ್ಲೀಮರ ಪ್ರಭಾವ ಅವರ ಹೆಸರುಗಳ ಮೇಲಾಗಿರುವುದು ಕಂಡುಬರುತ್ತದೆ.

ಉತ್ತರ ಹಾಗೂ ದಕ್ಷಿಣ ಕರ್ನಾಟಕದ ಕನ್ನಡಿಗರಲ್ಲಿ ಕಾಣುವ ನಾಮವಾಚಿ ವ್ಯತ್ಯಾಸವನ್ನು ಲಂಬಾಣಿಗರಲ್ಲಿಯೂ ಸ್ಪಷ್ಟರೂಪದಲ್ಲಿ ಕಾಣುತ್ತೇವೆ. ಈ ಪ್ರಾದೇಶಿಕ ಭಿನ್ನತೆಯೊಂದಿಗೆ ಲಂಬಾಣಿಗರಲ್ಲಿ ಇನ್ನೊಂದು ಬಗೆಯ ಪ್ರಮುಖವಾದ ವ್ಯತ್ಯಾಸವನ್ನು ಕಾಣಬಹುದು. ಅದೇನೆಂದರೆ ದಕ್ಷಿಣ ಕರ್ನಾಟಕದ ಲಂಬಾಣಿ ಗಂಡಸರ ಹೆಸರುಗಳು ಸಾಮಾನ್ಯವಾಗಿ 'ನಾಯ್ಕ' ಎಂದೂ ಹೆಂಗಸರ ಹೆಸರುಗಳು 'ಬಾಯಿ' ಎಂದೂ ಕೊನೆಯಾಗುತ್ತವೆ. ಉದಾ: ಭೀಮಾನಾಯ್ಕ, ದೂದಾನಾಯ್ಕ, ಲಿಂಬ್ಯಾನಾಯ್ಕ, ಢಾಕ್ಯಾನಾಯ್ಕ, ರೂಪ್ಲಾನಾಯ್ಕ ಹಾಗೂ ರೂಪ್ಲಿಬಾಯಿ, ಸೋಮ್ಲಿಬಾಯಿ, ಧಾನಿ ಬಾಯಿ ಇತ್ಯಾದಿ. ಆದರೆ ಉತ್ತರ ಕರ್ನಾಟಕದ ಲಂಬಾಣಿ ಹೆಸರುಗಳ ಕೊನೆಯಲ್ಲಿ 'ನಾಯ್ಕ', 'ಬಾಯಿ' ಇವುಗಳು ಬರುವುದಿಲ್ಲ. ಭೀಮಾ, ದೂದಾ, ಲಿಂಬ್ಯಾ, ಢಾಕ್ಯಾ ಹಾಗೂ ರೂಪ್ಲಿ, ಸೋಮ್ಲಿ, ಧಾನಿ ಎಂದೇ ಕರೆಯುತ್ತಾರೆ. ಉತ್ತರ ಕನಾಟಕದವರಿಗೆ 'ನಾಯ್ಕ' ಎಂಬುದು ವಿಶಿಷ್ಟವಾಗಿದ್ದು ಅದನ್ನು ಕೇವಲ ತಾಂಡಾದ ಪ್ರಮುಖ ವ್ಯಕ್ತಿ ನಾಯಕನು ಮಾತ್ರ ಬಳಸಿಕೊಳ್ಳಬೇಕಾಗುತ್ತದೆ. ಆಯಾ ಮನೆತನದವರಿಗೆ ಮಾತ್ರ ಅದು ಸೀಮಿತವಾದ ಪದವಾಗಿದೆ.

**ಬಂಜಾರರಲ್ಲಿ ಸಂಸ್ಕಾರ ವಿಧಿಗಳು**

ಹುಟ್ಟು-ಸಾವು ಮಾನವ ಜೀವನದ ಎರಡು ಮಹತ್ವದ ಕ್ಷಿತಿಜಗಳು. ಜನನ ಹಾಗೂ ಮರಣಕ್ಕೆ ಸಂಬಂಧಿಸಿದ ಕೆಲವು ವಿಧಿ-ವಿಧಾನಗಳು, ಸಂಸ್ಕಾರ-ಪರಂಪರೆಗಳು ಎಲ್ಲ ಜಾತಿ, ಜನಾಂಗಗಳಲ್ಲಿಯೂ ಕಂಡುಬರುತ್ತದೇನೋ ನಿಜ. ಆದರೆ ಈ ಸಂಪ್ರದಾಯಗಳು, ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿರುವುದು ಸಹಜವಾಗಿದೆ. "ನಪುತ್ರಸ್ಯ ಗತಿರ್ನಾಸ್ತಿ" ಎಂದು ಪುರಾಣದಲ್ಲಿ ಹೇಳಿರುವಂತೆ ಪುತ್ರ ಸಂತನಾವಿಲ್ಲದೆ ಮಾನವನಿಗೆ ಮುಕ್ತಿ ದೊರೆಯಲಾಗದು. ಪುತ್ರನೇ ಮುಕ್ತಿಯ ಮಾರ್ಗ. ಹಾಗೆಯೇ ಮುಕ್ತಿಯೂ ಜೀವನದ ಅಂತಿಮ ಗುರಿಯಾಗಿದೆ.[೪೫]

ಸಂಸ್ಕಾರ ವಿಧಿಗಳು ಅನೌಪಚಾರಿಕ ವರ್ತನಾ ವಿಧಾನವಾಗಿದ್ದು, ಮಾನವ ಸಮೂಹದ ನಿಯಂತ್ರಣ ಹಾಗೂ ನಿರ್ದೇಶಿತ ವಿಧಾನಗಳೇ ಆಗಿವೆ. ಒಂದು ಘಟನೆ ಅಥವಾ ಸಂದರ್ಭದ ಪ್ರಾಮುಖ್ಯತೆಯನ್ನು ಪ್ರಕಟಿಸುವುದಕ್ಕಾಗಿ ನಡೆಸಲಾಗುವ ಧಾರ್ಮಿಕ ಪ್ರಕ್ರಿಯೆಯಾಗಿದೆ. ಸಂಸ್ಕಾರ ವಿಧಿಗಳು ಸಂದರ್ಭಗಳು ಔಚಿತ್ಯವನ್ನು ಕಾಪಾಡುತ್ತವೆ ಮತ್ತು ಜನರಿಗೆ ಸಮೂಹದ ಮೇಲೆ ಗೌರವ ಮೂಡುವಂತೆ ಮಾಡುತ್ತವೆ. ಇವು ಭಾವನಾತ್ಮಕ ಪರಿಸರವನ್ನು ಸೃಷ್ಟಿಸಿ ಪರಿಸರದೊಂದಿಗೆ ವ್ಯಕ್ತಿಗಳನ್ನು ಅನ್ಯೋನ್ಯವಾಗಿ ಹೊಂದಿಸಿಕೊಳ್ಳುತ್ತವೆ. ದಕ್ಷಿಣ ಭಾರತದ ಬಂಜಾರರ ಸಮೂಹದಲ್ಲಿ ಕಂಡುಬಂದಿರುವ ಕೆಲವಾರು ಸಂಸ್ಕಾರಗಳು ವಿಧಿಗಳು ಇಲ್ಲಿ ಪ್ರಸ್ತಾಪಿಸಲಾಗಿದ್ದೂ, ಬಹುಪಾಲು ಆಚರಣಾ ವಿಧಾನಗಳೆಲ್ಲವೂ ಉತ್ತರ ಭಾರತೀಯ ಬಂಜಾರ ಸಮುದಾಯಗಳ ನೆಲೆಗಟ್ಟಿನಲ್ಲಿಯೇ ಮುಂದುವರಿಯುತ್ತಿವೆ. ಈ ಹಿನ್ನಲೆಯಲ್ಲಿ ವ್ಯಕ್ತಿಯೋರ್ವನ ಜನನ ಮತ್ತು ಮರಣ ಸಂಸ್ಕಾರಗಳು ಪ್ರತಿ ಬಂಜಾರ ಸಮುದಾಯಗಳ ಆದಿ ಮತ್ತು ಅಂತ್ಯಗಳಂತಿರುವ ಹಾಗೂ ಸಮುದಾಯಗಳ ನಿರಂತರತೆಯನ್ನು ಕಾಯ್ದುಕೊಳ್ಳುವಂತಹ ಒಂದು ಪ್ರಮುಖ ಸಂಸ್ಕಾರಗಳೇ ಆಗಿವೆ.

ಅಲೆಮಾರಿಗಳಾದ ಲಂಬಾಣಿಗಳು ವ್ಯಾಪಾರಕ್ಕಾಗಿ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಅಲೆಯುತ್ತಿದ್ದರೂ ಅವರು ತಮ್ಮ ಸತ್‌ಸಂಪ್ರದಾಯಗಳನ್ನು ಎಂದೂ ಮರೆಯುತ್ತಿರಲಿಲ್ಲ; ಯಾವ ವಿಧಿ-ವಿಧಾನ ಹಾಗೂ ಆಚರಣೆಗಳನ್ನೂ ಕೈಬಿಡುತ್ತಿರಲಿಲ್ಲ. ಹೀಗೆ ಅಲೆಯುವಾಗ ಯಾವುದಾದರೂ ಮಹಿಳೆಗೆ ಹೆರಿಗೆಯಾಗಿ ಗಂಡು ಮಗುವಿನ ಜನನವಾಗಿದ್ದರೆ ಅದೇ ವೇಳೆಗೆ ನಗಾರಿ ಬಾರಿಸಿ ವಿಷಯವನ್ನು ಗುಂಪಿನ ಜನರಿಗೆ ತಿಳಿಸುತ್ತಿದ್ದರು. ನಗಾರಿ

---

೪೫. ಎಂ.ಚಿದಾನಂದ ಮೂರ್ತಿ, ಸಂಶೋಧನಾ ತರಂಗ, ಸಂಪುಟ-೨, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಬಾರಿಸುವುದರಿಂದ ಇವರಲ್ಲಿ ಗಂಡು ಮಗುವಿನ ಜನನವಾಗಿದೆಯೆಂದು ಗ್ರಹಿಕೆ. ಹೀಗೆ ಗಂಡು ಮಗುವಿನ ಜನನದ ಸಂದರ್ಭವು ಕೇವಲ ತಾಯಿ-ತಂದೆಗಳಿಗೆ ಮಾತ್ರವಲ್ಲದೆ, ತಂಡದ ಎಲ್ಲ ಜನರಿಗೂ ಸಂತೋಷದ ವಿಷಯವಾಗಿದೆ. ತಂಡದ ನಾಯಕ, ಕಾರಭಾರಿ, ಡಾವಸಾಣ ಹಾಗು ಪಂಚಜನರನ್ನು ಕರೆದು ಸಂತೋಷಾರ್ಥವಾಗಿ ಅವರಿಗೆ ಕುಡಿಯಲು ಸರಾಯಿ ಕೊಡುತ್ತಾರೆ. ಕುಡಿಯುವುದರಿಂದಲೇ ಇವರಿಗೆ ಇನ್ನಷ್ಟು ಖುಷಿ, ಸಮಾಧಾನ.

ಮೊದಲನೆ ಹೆರಿಗೆ ಸಾಮಾನ್ಯವಾಗಿ ಗಂಡನ ಮನೆಯಲ್ಲಿಯೇ ಆಗಬೇಕು.ತವರಿನಲ್ಲಿ ಆದರೂ ಯಾವ ದೋಷವಿಲ್ಲ. ಆದರೆ ತವರು ಮನೆಯಲ್ಲಿ ಗಂಡುಮಗುವಿನ ಜನನವಾದಲ್ಲಿ 'ವಳಂಗಶಾಸ್ತ್ರ' ಗಂಡನ ಮನೆಗೆ ಬಂದ ಮೇಲೆಯೇ ಆಗಬೇಕು. ಗಂಡನ ಮನೆಯಲ್ಲಿ ಹೆರಿಗೆಯಾದರೆ ಆ ದಿನವೇ ಈ ಶಾಸ್ತ್ರ ನಡೆಯುತ್ತದೆ. ಏಳು ತಿಂಗಳು ತುಂಬಿದ ಬಳಿಕ ತವರಿನ ಮನೆಯವರು ಕರೆದುಕೊಂಡು ಹೋಗುವ ಪದ್ಧತಿ ಇದೆ. ಇವರಲ್ಲಿ ಗರ್ಭಿಣಿ ಮಹಿಳೆಯರಿಗೆ ಯಾವುದೇ ಸೀಮಾಂತ ಇಲ್ಲವೆ ಉಡಿ ತುಂಬುವ ಕಾರ್ಯಗಳಿಲ್ಲವಾದರೂ ಇತ್ತೀಚೆಗೆ ಆಧುನಿಕತೆಗಳೊಳಗಾಗಿರುವ ವಿದ್ಯಾವಂತರು ಇಂಥ ಕಾರ್ಯಗಳನ್ನು ಮಾಡುತ್ತಾರೆ. ಈ ಸೀಮಂತ ಇಲ್ಲವೆ ಉಡಿತುಂಬುವ ಕಾರ್ಯಗಳಿಲ್ಲವಾದರೂ ಇತ್ತೀಚೆಗೆ ಆಧುನಿಕತೆ ಗಳೊಳಗಾಗಿರುವ ವಿದ್ಯಾವಂತರು ಇಂಥ ಕಾರ್ಯಗಳನ್ನು ಮಾಡುತ್ತಾರೆ. ಈ ಸೀಮಾಂತ ಕಾರ್ಯ ಇಂಥಲ್ಲೇ ಆಗಬೇಕೆಂಬ ನಿಯಮವಿಲ್ಲ. ತವರಿನಲ್ಲಾಗಲೀ, ಇಲ್ಲವೆ ಗಂಡನ ಮನೆಯಲ್ಲಾಗಲೀ ಮಾಡಬಹುದು. ಈ ಕಾರ್ಯವನ್ನು ಸಾಮಾನ್ಯವಾಗಿ ಐದು ಇಲ್ಲವೆ ಏಳನೇ ತಿಂಗಳಲ್ಲಿ ಮಾಡುತ್ತಾರೆ.

ಹೆರಿಗೆಗೆ ಮುಂಚೆ ಬಾಣಂತಿಗೆ ಬೇಕಾಗುವ ಅವಶ್ಯಕ ವಸ್ತುಗಳನ್ನು ಸಿದ್ಧಪಡಿಸಿರುತ್ತಾರೆ. ಸಾಮಾನ್ಯವಾಗಿ ಅವರು ಹೆರಿಗೆಗಾಗಿ ಯಾವತ್ತೂ ಆಸ್ಪತ್ರೆಗಳಿಗೆ ಹೋಗುವುದಿಲ್ಲ ಕಾರಣ ಆಸ್ಪತ್ರೆಯಲ್ಲಿ ದಾದಿಗಳು ಹೆರಿಗೆ ಸಮಯದಲ್ಲಿ ಕಷ್ಟವಾದಾಗ ಗರ್ಭಕೋಶದೊಳಗೆ ಕೈಹಾಕಿ ಹೆರಿಗೆ ಮಾಡಿಸುವರೆಂದೂ, ಪ್ರತಿನಿತ್ಯ ಬಿಸಿನೀರಿನ ಸ್ನಾನ ಕೊಡಲಾರರೆಂದೂ, ಮನೆಯವರಂತೆ ಕಾಳಜಿ ವಹಿಸಲಾರರೆಂದೂ ಹಾಗೂ ಹೆರಿಗೆಯಾದಾಗ ಮಕ್ಕಳನ್ನು ಅದಲು-ಬದಲು ಮಾಡುವರೆಂದೂ ಇವರು ಹೆದರುತ್ತಾರೆ. ಹೀಗಾಗಿ ಹೆರಿಗೆ ಎಷ್ಟೇ ಕಷ್ಟವಾದರೂ ತಮ್ಮಲ್ಲಿಯೇ ಅನುಭವವುಳ್ಳ ಸ್ತ್ರೀಯರನ್ನು ಕರೆಯಿಸಿ ಹೆರಿಗೆ ಮಾಡಿಸುತ್ತಾರೆ. ಸೂತಕ, ಮುಟ್ಟು ಮೈಲಿಗೆ ಗಳನ್ನು ಬಹಳಷ್ಟು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಹೀಗಾಗಿ ಹೆರಿಗೆಗೆ ಪ್ರತ್ಯೇಕ ಗುಡಿಲು, ಮನೆಗಳನ್ನು ಸಿದ್ಧಪಡಿಸುತ್ತಾರೆ. ಬಾಣಂತಿಯರು ಮನೆಯ ಬಚ್ಚಲಿನಲ್ಲಿ ಸ್ನಾನ ಮಾಡುವಂತಿಲ್ಲ. ಅದಕ್ಕಾಗಿ ಮನೆಯ ಎದುರಿನಲ್ಲಿ ಆಸರೆ ಮಾಡುತ್ತಾರೆ. ಅಲ್ಲಿಯೇ ಬಿಸಿನೀರಿಗಾಗಿ ಒಂದು

ದೊಡ್ಡ ಮಣ್ಣಿನ ಹರಿವೆಯನ್ನು ಇಡುತ್ತಾರೆ. ಹೆರಿಗೆಯಾದಂದಿನಿಂದ ಎರಡೂ ಹೊತ್ತು ಬಿಸಿನೀರಿನ ಸ್ನಾನ ಮಾಡುತ್ತಾರೆ. ಮೈಮೇಲೆ ಎಷ್ಟು ಸಾಧ್ಯವೋ ಅಷ್ಟು ಚೆನ್ನಾಗಿ ಕಾಯ್ದ ಬಿಸಿನೀರನ್ನು ಹಾಕಿಕೊಂಡರೆ ಬಾಣಂತಿಯ ಬೇಗನೇ ಚೇತರಿಸಿ ಕೊಳ್ಳುತ್ತಾಳೆಂದು ಭಾವಿಸಿದ್ದಾರೆ.

**ಏಕಳ ಪೂಯೇರೊ**

ಗಂಡು ಮಗುವಿನ ಹೆರಿಗೆಯಾದ ಸಂದರ್ಭದಲ್ಲಿ ಮಾಡುವ ಈ ಶಾಸ್ತ್ರಕ್ಕೆ "ಏಕಳ ಪೂಯೇರೊ" ಎನ್ನುತ್ತಾರೆ. ಬಳಗದ ನಾಲ್ಕು ಜನ ಹೆಣ್ಣುಮಕ್ಕಳಿಗೆ 'ಖಂಡ' ಹಾಕುವುದೇ ಇಲ್ಲಿಯ ಮುಖ್ಯ ಉದ್ದೇಶವಾಗಿದೆ. ಹೆರಿಗೆಯಾದ ಸಾಯಂಕಾಲ ತಾಂಡಾದ ಹಿರಿಯ ಹೆಣ್ಣು ಮಕ್ಕಳು ಸೇರಿ ಮಂಗಳ ಗೀತೆಯನ್ನು ಹಾಡುತ್ತಾರೆ. ಸ್ವಾಭಾವಿಕವಾಗಿ ಹಾಡುವುದು, ಬಾರಿಸುವುದು, ಕುಡಿಯುವುದು ರಾತ್ರಿ ಸಮಯವೇ ಸೂಕ್ತವೆಂದು ತಿಳಿದಿದ್ದಾರೆ. ಯಾವ ಶಾಸ್ತ್ರವನ್ನೇ ಮಾಡಲಿ ಇವರು ಹಗಲಿನಲ್ಲಿ ಮಾಡುವುದಿಲ್ಲ. ಕಾರಣ ಹಗಲಿನಲ್ಲಿ ತಮ್ಮ ಹೊಟ್ಟೆ ಪಾಡಿಗಾಗಿ ಮನೆಬಿಟ್ಟು ದುಡಿಯಲು ಹೋಗುತ್ತಾರೆ. ಶ್ರಮಜೀವಿಗಳಾದ ಇವರು ರಾತ್ರಿ ಸಮಯದ ಶಾಂತಾವಾತಾವರಣದಲ್ಲಿ ತಮ್ಮ ಸಂತೋಷ ಉತ್ಸಾಹಗಳನ್ನು ವ್ಯಕ್ತಪಡಿಸುತ್ತಾರೆ. ಈ ಸಂದರ್ಭದಲ್ಲಿ ಗಂಡು ಮಗುವಿನ ತಂದೆ ಸಂತೋಷಾರ್ಥವಾಗಿ ಕುಡಿಯಲು ಸರಾಯಿ ಕೊಡುತ್ತಾನೆ. ಈ ಶಾಸ್ತ್ರಕ್ಕಾಗಿ ಮನೆಯಲ್ಲಿ ಗೋಮೂತ್ರದಿಂದ ನೆಲಸಾರಿಸಿ ರಂಗೋಲಿ ಹಾಕುತ್ತಾರೆ. ತಮ್ಮ ಕುಲದೇವರುಗಳಿಗೆಲ್ಲ ಕಾಯಿ, ಕರ್ಪೂರ ಹಾಗೂ ನೈವೇದ್ಯವನ್ನು ಸಲ್ಲಿಸುತ್ತಾರೆ. ಪೂರ್ವಜರಿಗೂ ಸರಾಯಿ ಕೊಟ್ಟು ಎಡೆಮಾಡುತ್ತಾರೆ. ಆಮೇಲೆ ಕುಲಸ್ಥರಿಗೆ ಕೊಬ್ಬರಿ ಬೆಲ್ಲ ಹಂಚುತ್ತಾರೆ. ಬಳಗದವರಿಗೆ ಊಟಕ್ಕೆ ಹಾಕುತ್ತಾರೆ. ಹೆಣ್ಣು ಕೂಸಿನ ಜನನವಾಗಿದ್ದರೆ ಈ ಶಾಸ್ತ್ರವಿಲ್ಲ.

**ದಳವಾ ಧೋಕಾಯೇರೊ**

ಹೆರಿಗೆಯಾದ ಐದು ದಿನಕ್ಕೆ ಮಾಡುವ ಶಾಸ್ತ್ರ ಇದಾಗಿದೆ. ಇದಕ್ಕೆ ಅವರು 'ದಳವಾ ಧೋಕಾಯೇರೊ' ಇಲ್ಲವೆ 'ಜಲವಾ ಧೋಕಾಯೇರೊ' ಎನ್ನುತ್ತಾರೆ. ಸಾಯಂಕಾಲ ಮನೆಯ ಅಂಗಳದಲ್ಲಿ ಒಂದು ಚಿಕ್ಕ ಗುಂಡಿ ತೆಗೆದು ಸುತ್ತಲೂ ಗೋಮೂತ್ರದಿಂದ ಸಾರಿಸಿ, ಗುಂಡಿಯ ಬಳಿಗೆ ಒಂದಿಷ್ಟು ಗೋಮೂತ್ರ ಹಾಗೂ ಹಿಟ್ಟಿನಿಂದ ತಯಾರಿಸಿದ ನಾಲ್ಕು ದೀಪಗಳನ್ನು ಹಚ್ಚಿಡುತ್ತಾರೆ. ಅಲ್ಲದೆ ತೊಗರಿ ಸೌದೆ, ಭತ್ತದ ಕಡ್ಡಿ(ಸೀಂಕಳಿ)ಗಳನ್ನಿಟ್ಟು ಛಟಿ ಮಾತಾಳ ಪೂಜೆಯನ್ನು ಮಾಡುತ್ತಾರೆ. ತಾಂಡಾದ ಹಿರಿಯ ಸ್ತ್ರೀಯರು ಸೇರಿ ಬಾಣಂತಿಯ ಉಡಿಯಲ್ಲಿ ಅಕ್ಕಿ ಹಾಗೂ ಮಗುವಿಗಾಗಿ ಸಿದ್ಧಪಡಿಸಿದ ಬಟ್ಟೆಗಳನ್ನು ಹಾಕಿ ಉಡಿತುಂಬಿದ ಮೇಲೆ ಐದು ಜನ ಅಪ್ರಾಪ್ತ ಬಾಲಕರು ಬಾಣಂತಿಯ ತಲೆಯಮೇಲೆ ಒಂದು ವಿಶೇಷ

ವಾದ ಕಸೂತಿ ಹಾಕಿರುವ ಸಿಂಬೆಯನ್ನು ಇಟ್ಟು ಜೋಡು ಕಳಸ ಹೊರಿಸುತ್ತಾರೆ. ಹೀಗೆ ಕಳಸಹೊತ್ತು, ದಾರಿಯುದ್ದಕ್ಕೂ ಅಕ್ಕಿ ಚೆಲ್ಲುತ್ತ ಗುಂಡಿಯ ಬಳಿಗೆ ಬಂದು ಪ್ರದಕ್ಷಿಣೆ ಹಾಕಿದ ಮೇಲೆ ಅಲ್ಲಿಟ್ಟಿರುವ ಗೋಮೂತ್ರವನ್ನು ಬಲಗಾಲಿನ ಹೆಬ್ಬೆರಳಿನಿಂದ ಏಳು ಸಲ ಮುಟ್ಟಿ ಗುಂಡಿಗೆಯನ್ನು ನಮಸ್ಕರಿಸುವಳು.

### ನಾಮಕರಣ

ಮಗುವಿನ ನಾಮಕರಣ ಮಾಡುವುದು ಲಂಬಾಣಿಗರಲ್ಲಿ ಅಷ್ಟೊಂದು ಮಹತ್ವವನ್ನು ಪಡೆದಿರುವುದಿಲ್ಲವಾದರೂ ಒಂದು ಶುಭಮೂಹರ್ತದಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕುತ್ತಾರೆ. ಎರಡು ಅಥವಾ ಮೂರು ತಿಂಗಳಾದ ಮೇಲೆ ಇಲ್ಲವೆ ಮನೆಯಲ್ಲಿ ಯಾವುದಾದರೂ ಶುಭಕಾರ್ಯ ನಡೆದಾಗ ನಾಮಕರಣ ಮಾಡುವ ಸಂಪ್ರದಾಯವಿದೆ. ಮಗು ಮನೆಯಲ್ಲಿಯ ಹಿರಿಯರನ್ನು ಹೋಲುತ್ತಿದ್ದರೆ ಅದೇ ಹೆಸರಿನಿಂದ ಕರೆಯುತ್ತಾರೆ. ಎಷ್ಟೋ ಸಲ ಮಗುವಿನ ಬಣ್ಣ, ರೂಪ, ಆಕಾರಗಳನ್ನು ಆಧರಿಸಿ ಹೆಸರು ಕಟ್ಟುತ್ತಾರೆ. ಆದರೂ ಸಾಮಾನ್ಯವಾಗಿ ಊರಲ್ಲಿಯ ಪೂಜಾರಿ ಇಲ್ಲವೆ ಒಳ್ಳೇ ಪಂಡಿತರ ಕಡೆಗೆ ಹೋಗಿ ಮಗುವಿನ ಭವಿಷ್ಯ, ನಕ್ಷತ್ರ, ಹೆಸರು ಮುಂತಾದವುಗಳನ್ನು ಕೇಳಿ ಶುಭದಿನದಂದು ಗೋಮೂತ್ರದಿಂದ ಮನೆಯನ್ನು ಸ್ವಚ್ಛಗೊಳಿಸಿ, ಮಗುವಿಗೆ ಹೊಸ ಬಟ್ಟೆಗಳನ್ನು ಹಾಕಿ, ತೊಟ್ಟಿಲು ಪೂಜೆಯ ಜೊತೆಗೆ ಕುಲದೇವತೆ ಹಾಗೂ ಛಟಿ ಮಾತಾಳ ಪೂಜೆ ಮಾಡುತ್ತಾರೆ. ಮಗುವಿನ ನಾಮಕರಣ ಮಾಡುವುದಕ್ಕೆ ಸೋದರತ್ತೆ ಇರಲೇಬೇಕು. ಇರದಿದ್ದರೆ ಹತ್ತಿರದ ಸಂಬಂಧಿಕರು ಹೆಸರಿಡುತ್ತಾರೆ. ಹೆಸರಿಡುವವರು ಮಗುವನ್ನು ತೊಟ್ಟಿಲಿಗೆ ಹಾಕಿ ಕುಲದೇವತೆ ಇಲ್ಲವೆ ಪೂರ್ವಜರ ಹೆಸರುಗಳನ್ನು ಹೇಳಿ, 'ಕುರ್ರ ಕುರ್ರ ಕುಕಡಿ ಕುರ್ರ' ಎಂದಾಗಿ ಮಗುವಿನ ಕಿವಿಯಲ್ಲಿ ಐದು ಸಲ ಕೂಗುತ್ತಾರೆ. ನಾಮಕರಣ ಕಾರ್ಯಕ್ಕೆ ಬಂದು ಸೇರಿದ ಜನರಿಗೆ ಐದು ತರಹದ ಧಾನ್ಯಗಳನ್ನು ಬೆರೆಸಿ ಕುಚ್ಚಿದ ಗುಗ್ಗರಿಯನ್ನು ತಿನ್ನಲು ಕೊಡುತ್ತಾರೆ. ತೊಟ್ಟಿಲಿನಲ್ಲಿ ನಾಲ್ಕಾರು ಇರುವೆಗಳನ್ನು(ಪರಕಣ್ ಕೀಡಿ) ಬಿಡುತ್ತಾರೆ. ಇದರಿಂದ ಮಕ್ಕಳು ಹಟಮಾಡುವುದಿಲ್ಲ ಎಂಬ ಬಲವಾದ ನಂಬಿಕೆ ಇದೆ. ಮಗುವನ್ನು ಸೋದರತ್ತೆಯು ತೊಟ್ಟಿಲಿಗೆ ಹಾಕಿ ಹೆಸರು ಹೇಳಿದ ಬಳಿಕ, ಮಗುವಿನ ತಂದೆ, ತಾಯಿ, ಬಂಧು-ಬಳಗದ ಮುತ್ತೈದೆಯರು ಐದೈದು ಹೆಸರು ಹೇಳಿ ತೊಟ್ಟಿಲು ತೂಗುತ್ತಾರೆ.

### ಜವುಳ ತೆಗೆಯಿಸುವುದು

ಮಗುವಿಗೆ 'ಜವುಳ' ಇಲ್ಲವೆ 'ಮುಡಿ' ತೆಗೆಯಿಸುವ ಸಂಸ್ಕಾರ ಲಂಬಾಣಿಗರಲ್ಲಿ ಅತ್ಯಂತ ಮಹತ್ವವನ್ನು ಪಡೆದಿದೆ. ಇದು ಮಗುವಿನ ಜೀವನದಲ್ಲಿ ಹೊಸ ಚೈತನ್ಯವನ್ನು ಕೊಡುವ

ಸಂಸ್ಕಾರವಾಗಿದೆ. ಸಮಾಜದಲ್ಲಿ ಇಂಥ ಮಂಗಲ ಕಾರ್ಯಗಳು ಅನಿವಾರ್ಯವಾಗಿ ಬಂದ ಸಂಸ್ಕಾರಗಳಾಗಿವೆ. ಸಾಮಾನ್ಯವಾಗಿ ಈ ಕಾರ್ಯ ಹೆಚ್ಚು ವೆಚ್ಚದಾಯಕವಾಗಿದೆ. ಕಾರಣ ಮನೆಯಲ್ಲಿ ಒಂದೇ ಮಗುವಿನ ಜವುಳ ತೆಗೆಯಿಸುವ ಕಾರ್ಯ ನಡೆಯದೆ, ಎರಡಕ್ಕೂ ಹೆಚ್ಚು ಮಕ್ಕಳು ಇರವಲ್ಲಿ ಈ ಕಾರ್ಯ ಹೆಚ್ಚು ವೈಭವಯುತವಾಗುತ್ತದೆ. ಈ ಮಕ್ಕಳು ತಮ್ಮ ವಂಶಪರಂಪರೆಗೆ ಸಂಬಂಧಪಟ್ಟವುಗಳಾಗಿರಬೇಕು. ಇವರ ಕುಲದೇವರುಗಳಾದ ಬಾಲಾಜಿ, ದುರ್ಗಮ್ಮ, ಮರಿಯಮ್ಮ ಹಾಗೂ ತುಳಜಮ್ಮ ಇವರ ಹೆಸರುಗಳ ಮೇಲೆ ಮಗುವಿನ ಜವುಳ ತೆಗೆಯಿಸುತ್ತಾರೆ. ಇದಕ್ಕೆ ಅವರು 'ಬಾಳ ಲಟ್ಪಾ ಕಡಾಯೇರೊ' ಅಥವಾ 'ಜವುಳ ಕಡಾಯೆರೊ' ಎನ್ನುತ್ತಾರೆ.

ಈ ಮಂಗಲ ಕಾರ್ಯದಲ್ಲಿ ಬಾಲಾಜಿಯನ್ನು ಹೊರತುಪಡಿಸಿ ಇನ್ನುಳಿದ ಕುಲದೇವರು ಗಳಿಗೆ ತಮ್ಮ ಶಕ್ತ್ಯಾನುಸಾರ ಎರಡರಿಂದ ಮೂರು ಬಲಿಕೊಡುತ್ತಾರೆ. ಈ ಕಾರ್ಯ ಸಾಮಾನ್ಯವಾಗಿ ಬೆಳಗಿನಿಂದಲೇ ಪ್ರಾರಂಭವಾಗುತ್ತದೆ. ಗೋಮೂತ್ರದಿಂದ ಮನೆಯನ್ನು ಸಾರಿಸಿ, ಮಾವಿನ ಹಾಗೂ ಬೇವಿನ ತುರಾಯಿಗಳನ್ನು ಕಟ್ಟಿ ಮನೆಯಲ್ಲಿ ಪೂಜೆಗಾಗಿ ಜಗಲಿಯ ಮೇಲೆ ರಂಗೋಲಿ ಬರೆಯುತ್ತಾರೆ. ದೇವರುಗಳಿಗೆ ದೀಪ–ಧೂಪವನ್ನು ಹಚ್ಚುತ್ತಾರೆ. ಈ ಸಮಯದಲ್ಲಿ ತಾಯಿಯು ಮಗುವನ್ನು ಎತ್ತಿಕೊಂಡು ಪೂಜಾಸ್ಥಾನದ ಸಮೀಪದಲ್ಲಿ ಕುಳಿತು ಕೊಳ್ಳುತ್ತಾಳೆ. ಮಗುವಿನ ಸೋದರಮಾವನ ಪಾತ್ರ ಇಲ್ಲಿ ಹಿರಿದಾಗಿರುತ್ತದೆ. ಕೈಯಲ್ಲಿ ಕತ್ತರಿ ತೆಗೆದುಕೊಂಡು ಮಗುವಿನ ಜವುಳ ತೆಗೆಯುತ್ತಾನೆ. ಈ ಸಂದರ್ಭದಲ್ಲಿ ಸೋದರಮಾವನಗೆ ತಮ್ಮ ಶಕ್ತ್ಯಾನುಸಾರ ಒಂದರಿಂದ ಇಪ್ಪತ್ತೈದು ರೂಪಾಯಿಗಳವರೆಗೂ ಕಾಣಿಕೆ ಕೊಡುತ್ತಾರೆ. ಅಲ್ಲದೆ ಒಂದು ಸೇರು ಜೋಳ, ಎಲೆ–ಅಡಿಕೆ ಇತ್ಯಾದಿಗಳನ್ನು ಕೊಡುತ್ತಾರೆ. ಈ ಸಂದರ್ಭ ದಲ್ಲಿ ಸ್ತ್ರೀಯರು ಮಂಗಳಗೀತೆಗಳನ್ನು ಹಾಡುತ್ತಾರೆ.

**ಮರಣ ಸಂಸ್ಕಾರ (ಅಪರಕರ್ಮ)**

ಪ್ರಪಂಚದಲ್ಲಿ ಹುಟ್ಟು–ಸಾವುಗಳು ಚಕ್ರಾಕಾರವಾಗಿ ಒಂದೇ ರೀತಿಯಿಂದ ತಿರುಗುತ್ತಲೇ ಇರುತ್ತವೆ. ಹುಟ್ಟಿದ ಪ್ರತಿಯೊಬ್ಬ ವ್ಯಕ್ತಿ ಸಾಯಲೇಬೇಕೆಂಬ ನಿಯಮವಿದೆ. ದೇವತೆಗಳನ್ನು ಬಿಟ್ಟರೆ ಪಶು, ಪಕ್ಷಿ, ಮನುಷ್ಯ ಎಲ್ಲರೂ ಅಶಾಶ್ವತ, ಹೀಗಾಗಿ ಪ್ರತಿಯೊಂದು ಸಮಾಜದಲ್ಲಿ ಹುಟ್ಟಿದ ವ್ಯಕ್ತಿಗೆ ಕೆಲವು ಆಚರಣೆ, ವಿಧಿ–ವಿಧಾನಗಳನ್ನು ಮಾಡುವಂತೆ, ಸಾಯುವಾಗಲೂ ಕೆಲವು ವಿಧಿ–ವಿಧಾನಗಳನ್ನು ಆಚರಿಸುತ್ತಾರೆ. ಸತ್ತ ಮೇಲೆ ಸತ್ತವನ ತಿಥಿ ಮಾಡುವ ಸಂಪ್ರದಾಯ ಪ್ರತಿಯೊಂದು ಜಾತಿ, ಪಗಂಡಗಳಲ್ಲಿಯೂ ಕಾಣುತ್ತೇವೆ.

ಲಂಬಾಣಿಗರಲ್ಲಿ ಸತ್ತ ಮನುಷ್ಯ ಪಾಪ-ಪುಣ್ಯಗಳ ಆಧಾರದ ಮೇಲೆ ಸ್ವರ್ಗವಾಸಿಯಾಗಿ ದೇವತೆಯಾಗುವನೆಂದೂ, ಇಲ್ಲವೆ ನರಕದಲ್ಲಿ ಬಿದ್ದು ದೆವ್ವ, ಪಿಶಾಚಿಯಾಗುತ್ತಾನೆಂದೂ ಬಲವಾದ ನಂಬಿಕೆ ಇದೆ. ಇದಕ್ಕಾಗಿ ಅವರು ಅಪರಕರ್ಮಗಳನ್ನು ಮಾಡುವಾಗ ಅನೇಕ ರೀತಿಯಿಂದ ಪರೀಕ್ಷಿಸುತ್ತಾರೆ. ಲಂಬಾಣಿಗರು ಯಾವುದೇ ವಿಧಿ-ವಿಧಾನ, ಆಚರಣೆಯಲ್ಲಿ ವಿಶಿಷ್ಟತೆಯನ್ನು ಹೊಂದಿರುವಂತೆ ಅಪರಕರ್ಮ ಮಾಡುವಾಗಲೂ ತಮ್ಮದೇ ಆದ ವಿಶಿಷ್ಟ ಆಚರಣೆಗಳನ್ನು ಪಾಲಿಸಿಕೊಂಡು ಬಂದಿದ್ದಾರೆ.

ವ್ಯಕ್ತಿಗೆ ಮರಣ ಸಮೀಪಿಸುತ್ತಿದೆ ಎನ್ನುವಾಗಲೇ ತಂಡದಲ್ಲಿ ಮನೆಗೊಬ್ಬರಂತೆ ಬಂದು ಸಹಾಯಕ್ಕೆ ನಿಲ್ಲುತ್ತಾರೆ. ಹತ್ತಿರದ ಬಂಧು-ಬಳಗಕ್ಕೂ ಸುದ್ದಿ ಮುಟ್ಟಿಸುತ್ತಾರೆ. ಅಪರಕರ್ಮಕ್ಕಾಗಿ ಬೇಕಾಗುವ ಸರ್ವಸಿದ್ಧತೆಗಳನ್ನು ಮಾಡಿಕೊಳ್ಳುತ್ತಾರೆ. ಹೆಣವನ್ನು ಸಾಮಾನ್ಯವಾಗಿ ಹೆಚ್ಚು ಕಾಲ ತಾಂಡದಲ್ಲಿ ಇಟ್ಟುಕೊಳ್ಳುವುದಿಲ್ಲ. ಕಾರಣ ಹೆಣ ಹೋಗುವವರೆಗೆ ಭಯದಿಂದ ಮನೆಯಲ್ಲಿ ಯಾರೂ ಒಲೆ ಹಚ್ಚುವುದಿಲ್ಲ. ರಾತ್ರಿ ವೇಳೆ ಸಾವು ಸಂಭವಿಸಿದರೆ ಸತ್ತವನ ಮನೆಯ ಮುಂದೆ ಬೆಂಕಿ ಹಾಕಿ ಹಿರಿಯರು ಹೆಣ ಕಾಯುತ್ತಾರೆ. ದುಃಖಿಗಳಿಗೆ ರಾತ್ರಿಯಿಡೀ ಸಮಾಧಾನ ಹೇಳುತ್ತಾರೆ. ಹೆಣ್ಣುಮಕ್ಕಳು ಹೊಟ್ಟೆ, ಎದೆ, ಹಣೆ ಬಡಿದುಕೊಳ್ಳುತ್ತ ಹಾಡಿ ಗುಣಗಾನ ಮಾಡಿ ಅಳುತ್ತಾರೆ. ಅವರ ದುಃಖಕ್ಕೆ ಮಿತಿಯೇ ಇಲ್ಲ. ಸತ್ತವನ ಹೆಂಡತಿ, ಸಂಬಂಧಿಕರು ಆತನ ವ್ಯಕ್ತಿತ್ವ, ಶೀಲ ಚಾರಿತ್ರ್ಯಗಳನ್ನು ಸ್ಮರಿಸಿಕೊಂಡು ಗುಣಗಾನ ಮಾಡಿ ದುಃಖಿಸುತ್ತಾರೆ. ಈ ಸಂದರ್ಭದಲ್ಲಿ ಯಾವುದೇ ಬಗೆಯ ಮೋಜು, ತಮಾಷೆ, ಭಜನೆ, ಕೀರ್ತನೆ, ವಾದ್ಯ, ಮದ್ದು ಹಾರಿಸುವಿಕೆ, ಕುಣಿಯುವುದು ಮುಂತಾದ ಮನರಂಜನೆ ಗಳಗಿಗೆ ಅವಕಾಶವಿಲ್ಲ ಸಂಪೂರ್ಣವಾಗಿ ದುಃಖಸೂಚನೆಯೊಂದಿಗೆ ಮೌನವಾಗಿರುತ್ತಾರೆ. ಹತ್ತಿರದ ಸಂಬಂಧಿಕರು ಮಣ್ಣುಮಾಡುವ ಸಮಯಕ್ಕೆ ಬಂದು ಕೂಡುವಂತೆ ಕಾಯುತ್ತಾರೆ. ಇನ್ನುಳಿದ ದೂರದ ಸಂಬಂಧಿಗಳಿದ್ದರೆ ಮೂರನೇ ದಿನದ ತಿಥಿಗೆ ಬಂದು ಪಾಲ್ಗೊಳ್ಳಬಹುದು.

### ೨.೫. ಬಂಜಾರ ಸಮುದಾಯದ ಜಾನಪದ ವೈಶಿಷ್ಟತೆಗಳು

ಬಂಜಾರರಲ್ಲಿನ ಜಾನಪದ ಸಂಸ್ಕೃತಿಯ ಒಂದು ಮೌಖಿಕ ಪರಂಪರೆಯನ್ನು ಪ್ರತಿನಿಧಿಸುತ್ತದೆ. ಇದು ಈ ಜನಾಂಗದ ಸಮಗ್ರ ಮಾನವಶಾಸ್ತ್ರೀಯ ಬೆಳವಣಿಗೆಯನ್ನು ತಿಳಿಸುವ ಪ್ರಯತ್ನವಾಗಿದೆ. ವಿಶ್ವಮಟ್ಟದಲ್ಲಿ ವಿವಿಧ ಹೆಸರುಗಳಿಂದ ಕರೆಯಲ್ಪಡುವ ಬಂಜಾರರು ತಮ್ಮ ಉಡುಗೆ-ತೊಡುಗೆಗಳಿಂದ ಮಾತ್ರವಲ್ಲದೆ, ಬಹುರೂಪಿ ಸಂಸ್ಕೃತಿಯ ಹಾಗೂ ಆಯಾ ಭೌಗೋಳಿಕ ಪರಿಸರಕ್ಕೆ ತಮ್ಮ ಬದುಕನ್ನು ಹೊಂದಿಸಿಕೊಳ್ಳುತ್ತಾ ತಮ್ಮದೇ ಆದ ಜೀವನ

ವಿಧಾನವನ್ನು ಪರಂಪರಾಗತವಾಗಿ ಅನುಸರಿಸುತ್ತಾ ಬಂದವರಾಗಿದ್ದಾರೆ. ಈ ಹಿನ್ನಲೆಯಲ್ಲಿ ಬಂಜಾರರಲ್ಲಿ ಕಂಡುಬರುವ ಸಂಪದ್ಭರಿತವಾದ ಜಾನಪದ ಸಾಹಿತ್ಯ ಹಾಗೂ ಕಲೆಗಳನ್ನು ಕುರಿತಾದ, ಜನಪದಗೀತೆ, ಕಥೆ, ಗಾದೆ ಹಾಗೂ ಒಗಟುಗಳು ಹೆಚ್ಚು ಆಕರ್ಷಣೀಯವು ಮತ್ತು ವಿಶಿಷ್ಟವಾದ ಪರಂಪರೆಯನ್ನು ಸೂಕ್ಷ್ಮವಾಗಿ ತಿಳಿಸುವ ಪ್ರಯತ್ನ ಈ ಅಧ್ಯಯನದಲ್ಲಿ ಮಾಡಲಾಗಿದೆ. ಇಲ್ಲಿ ಬಂಜಾರರ ಜನಪದ ವಾದ್ಯಗಳತ್ತ ಗಮನ ಹರಿಸಲಾಗಿದೆ.

ಜನಪದ ಸಂಸ್ಕೃತಿಯ ಅನೇಕ ಆಚರಣೆಗಳಲ್ಲಿ ವಾದ್ಯಗಳು ಪ್ರಮುಖ ಪಾತ್ರವಹಿಸಿವೆ. ಜನಪದ ವಾದ್ಯಗಳು ಒಟ್ಟು ಸಮುದಾಯದ ಆಸ್ತಿ. ಅವುಗಳ ಬಳಕೆಯನ್ನು ಆ ಸಮುದಾಯವು ಒಪ್ಪಿ, ಅವುಗಳ ಮಹತ್ವವನ್ನು, ಬಳಕೆಯ ವಿಧಾನವನ್ನು ತಲೆಮಾರಿನಂದ ತಲೆಮಾರಿಗೆ ವರ್ಗಾಯಿಸುತ್ತದೆ. ನಮ್ಮ ಜನಪದ ಗಾಯಕರಿಗೆ ವಾದ್ಯಗಳ ಬಗೆಗೆ ದೇವರಲ್ಲಿ ಇಟ್ಟಷ್ಟೇ ಭಕ್ತಿ ಗೌರವ ಇರುವುದನ್ನು ಕಾಣುತ್ತೇವೆ. ಅಂತೆಯೇ ಹಾಡಿಗೆ ಮೊದಲು ವಾದ್ಯಗಳಿಗೆ ಪೂಜೆ ಸಲ್ಲಿಸಲಾಗುತ್ತದೆ. ಜನಪದ ಸಮುದಾಯಗಳಲ್ಲಿ ಬಳಕೆಯಾಗುವ ವಾದ್ಯಗಳು ಕೇವಲ ಮನರಂಜನೆಯ ದೃಷ್ಟಿಯಿಂದ ಉಪಯೋಗಿಸಲ್ಪಡುವ ವಸ್ತುವಿಶೇಷ ವಾಗಿರದೆ, ಸಂಪ್ರದಾಯ, ಆಚರಣೆ, ನೃತ್ಯ, ಉತ್ಸವ ಮೊದಲಾದ ಸಂದರ್ಭಗಳಲ್ಲಿ ಪ್ರಮುಖವಾಗಿ ಬಳಕೆಯಾಗುತ್ತವೆ. ಬಂಜಾರ ಸಮುದಾಯದಲ್ಲಿ ತಮ್ಮದೇ ಆದ ಸಾಂಪ್ರದಾಯಿಕ ವಾದ್ಯ ವಿಶೇಷಗಳಿವೆ. ತಮ್ಮ ಹಾಡು ನೃತ್ಯ, ಲಾವಣಿ, ಕಥನಗೀತೆ, ಭಜನೆ, ಪೂಜೆ–ಪುನಸ್ಕಾರ, ದೇವತಾಕಾರ್ಯ ಮತ್ತು ಜನನಸಂಸ್ಕಾರ ಮೊದಲಾದ ಸಂದರ್ಭಗಳಲ್ಲಿ ವಾದ್ಯ ಪರಿಕರಗಳನ್ನು ಬಳಸುತ್ತಾರೆ. ಅವುಗಳ ಹೆಸರು, ರೂಪ, ಸ್ವರೂಪ ಹಾಗೂ ಬಳಸುವ ಹಿನ್ನಲೆಯಲ್ಲಿ ಪ್ರಾದೇಶಿಕ ವ್ಯತ್ಯಾಸ ಕಂಡುಬಂದರೂ, ಪರಿಣಾಮದಲ್ಲಿ ಅವೆಲ್ಲವೂ ಒಂದೇ ಬಗೆಯಾಗಿವೆ.

ಲಂಬಾಣಿಗಳ ವಾದ್ಯಪರಿಕರಗಳನ್ನು ಸ್ಥೂಲವಾಗಿ ಎರಡು ರೀತಿಯಿಂದ ವಿಂಗಡಿಸ ಬಹುದು. ೧) ಪ್ರಾಚೀನ ವಾದ್ಯಗಳು ೨) ಆಧುನಿಕ ವಾದ್ಯಗಳು. ಪ್ರಾಚೀನ ವಾದ್ಯಗಳು – ಇದರಲ್ಲಿ ಎರಡು ವಿಧಗಳಿವೆ.

I. ಲೋಹವಾದ್ಯಗಳು II. ಚರ್ಮವಾದ್ಯಗಳು.

I. ಲೋಹವಾದ್ಯಗಳು: ಈ ಲೋಹವಾದ್ಯಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದು.

ಕಂಚಿನ ಗಂಗಾಳ, ಕಂಚಿನ ತಾಳ, ಘಟಮ್(ಲೋಹ ಅಥವಾ ಮಣ್ಣಿನಿಂದ ಮಾಡಿರುವ ಬಿಂದಿಗೆ)

**i. ಕಂಚಿನ ಗಂಗಾಳ:** **'ಕಾಸೇರ್ ಥಾಳಿ'** ಎಂದು ಕರೆಯಲ್ಪಡುವ ಈ ವಸ್ತುವು ಬಂಜಾರರ ಸಾಂಸ್ಕೃತಿಕ ಬದುಕಿನ ಅವಿಭಾಜ್ಯ ಅಂಗವೆನಿಸಿದೆ. ಒಂದು ಅಡಿ ವ್ಯಾಸದ ನಾಲ್ಕು ಅಂಗುಲ ಎತ್ತರದ ಈ ಗಂಗಾಳವು ಮದುಮಗಳಿಗೆ ತವರು ಮನೆಯ ಪ್ರೀತಿಯ ಕಾಣಿಕೆಯಾಗಿ ತಪ್ಪದೆ ಕೂಡುವಂತಹ ವಸ್ತು. ಲಂಬಾಣಿಗರಿಗೆ ಇದು ತುಂಬಾ ಪವಿತ್ರವಾದ ವಸ್ತು. ಆದ್ದರಿಂದ ತಮಗಿಂತ ಕೀಳೆಂದು ಭಾವಿಸುವ ಜನರಿಗೆ, ಮುಟ್ಟು ಮೈಲಿಗೆಯಾದ ಹೆಂಗಸರಿಗೆ ಇದರಲ್ಲಿ ಊಟ ಹಾಕುವುದಿಲ್ಲ. ಹಾಗೆಯೇ ಮಾಂಸದೂಟ ಮಾಡಲು ಸಹ ಈ ಗಂಗಾಳವನ್ನು ಬಳಸುವುದಿಲ್ಲ. ಮನೆಯ ಯಜಮಾನನಿಗೆ ಇದರಲ್ಲಿ ಊಟ ಹಾಕುತ್ತಾರೆ. ಕಂಚಿನ ಗಂಗಾಳದಲ್ಲಿ ಊಟ ಮಾಡುವುದು ಇವರಲ್ಲಿ ಪ್ರತಿಷ್ಠೆಯ ಸಂಕೇತ. ಜೊತೆಗೆ ದೇವರ ಪೂಜೆಯ ಸಂದರ್ಭದಲ್ಲಿ ಕಂಚಿನ ಗಂಗಾಳವನ್ನು ಬಳಸುತ್ತಾರೆ. ಅಲೆಮಾರಿಗಳಾದ ಬಂಜಾರರು ಸದಾಕಾಲ ತಮ್ಮೊಂದಿಗಿರುವ ಸುಲಭ ಲಭ್ಯವಾದ ಮತ್ತು ಅಪ್ಯಾಯಮಾನವಾದ, 'ಥಳ್ ಥಳ್' ಶಬ್ದವನ್ನು ಹೊರಡಿಸಬಲ್ಲ ಕಂಚಿನಗಂಗಾಳವನ್ನು ಕಥನಗೀತೆ, ಹಾಡು, ಕಥೆ ಹೇಳುವಾಗ 'ವಾದ್ಯ ಪರಿಕರ'ವನ್ನಾಗಿ ಬಳಸಿಕೊಳ್ಳುತ್ತಾರೆ. ವೈದಿಕ ಸಂಸ್ಕೃತಿಯಲ್ಲಿ ತಮ್ಮ ಪೂಜಾ ವೇಳೆಯಲ್ಲಿ ಕಂಚಿನ ಜಾಗಟೆ ಭಾರಿಸುವ ವಿಧಾನದಿಂದ ಬಹುಶಃ ಬಂಜಾರರು ಪ್ರೇರೇಪಿತರಾಗಿರಬಹುದು. ಕಥನಗೀತೆ ಲಾವಣಿಗಳನ್ನು ಸ್ತ್ರೀ ಪುರುಷರಿಬ್ಬರೂ ಹಾಡುತ್ತಾರೆ. ಇವರು ಗೀತೆಗಳನ್ನು ನಿಂತು ಹಾಡುತ್ತಾದರೂ ಹೆಚ್ಚು ಕುಳಿತುಕೊಂಡೇ ಹಾಡುತ್ತಾರೆ. ಎಡಗೈಯಲ್ಲಿ ಕಂಚಿನಗಂಗಾಳವನ್ನು ಹಿಡಿದುಕೊಂಡು, ಬಲಗೈ ಮಧ್ಯದ ಬೆರಳಿನಲ್ಲಿ ಬೆಳ್ಳಿಯ ಉಂಗುರ ಹಾಕಿಕೊಂಡು, ಪಲ್ಲವಿ ಅನುಪಲ್ಲವಿಗೊಮ್ಮೆ ಲಯಬದ್ಧವಾಗಿ ಬಡಿ ಯುತ್ತಾರೆ. ಇದರ ನಾದವನ್ನು ಅವರ ತಾಂಡಕ್ಕೆ ಹೋಗಿ ನೋಡಿ, ಕೇಳಿಯೇ ಸವಿಯಬೇಕು. ಹತ್ತಾರು ಜನರು ಕುಳಿತು ಒಟ್ಟಿಗೆ ಬಾರಿಸುವುದರಿಂದ ಅವುಗಳಿಂದ ಹೊಮ್ಮುವ ನಾದ ಅಪ್ಯಾಯತೆ ಯಿಂದ ಕೂಡಿರುತ್ತದೆ.

ಬಂಜಾರರು ಕಂಚಿನಗಂಗಾಳವನ್ನು ಹಲವು ಕಾರಣಗಳಿಂದ ತಮ್ಮ ವಾದ್ಯಗಳನ್ನಾಗಿ ಬಳಸಿಕೊಂಡಿರಬಹುದು. ಇದು ಇವರೊಂದಿಗೆ ಸದಾಕಾಲ ಇದ್ದು ಸುಲಭ ಲಭ್ಯವಾಗು ವಂತಹುದು. ತಿದ್ದಿತೀಡಿ ಹುರಿಗೊಳಿಸುವ ಅಗತ್ಯತೆ ಇಲ್ಲದಿರುವುದು. ಮಳೆಗಾಲ, ಚಳಿಗಾಲ, ಬೇಸಿಗೆಕಾಲಗಳಲ್ಲಿ ಶಬ್ದಗಳಲ್ಲಿ ಯಾವುದೇ ಏರಿಳಿತ ಇಲ್ಲದಿರುವುದು. ಅಲ್ಲದೆ ಅದರ ಅನುರಣನ ನಾದ ಬಹುದೂರದವರೆಗೂ ಕೇಳಿಸುತ್ತಿದ್ದುದರಿಂದ ಕಾಡುಪ್ರಾಣಿಗಳ ದಾಳಿಯನ್ನು ನಿಯಂತ್ರಿಸುವುದು. ಹೀಗೆ ಹಲವಾರು ಉಪಯೋಗವು ಅದರ ಬಳಕೆಯಿಂದಾಗುತ್ತಿತ್ತು. ಒಟ್ಟಾರೆ ಬಂಜಾರರು 'ಗೋರ್‌ಬೋಲಿ' ಭಾಷೆಯಲ್ಲಿ 'ಥಾಳೀರ್‌ಗೀದ್'(ಗಂಗಾಳ ಬಡಿಯುತ್ತ

ಹಾಡುವ ಗೀತೆ) ಎಂದೇ ಕರೆಯಲ್ಪಡುವ ಈ ಹಾಡಿಗೆ ಕಂಚಿನಗಂಗಾಳವೇ ಪ್ರಮುಖ ವಾದ್ಯವಾಗಿದೆ.ಲಂಬಾಣಿಗರ ಭಜನೆಯ ಮೇಳಗಳಲ್ಲಿ ಕಂಚಿನತಟ್ಟೆಗೆ ವಿಶಿಷ್ಟ ಸ್ಥಾನವಿದೆ.

**ii. ಕಂಚಿನ ತಾಳ**: ಬಂಜಾರರ ಭಾಷೆಯಲ್ಲಿ 'ಝಾಂಚ್' ಎಂದು ಕರೆಯಲ್ಪಡುವ ಈ ತಾಳವು ಗೇಣಗಲದ ನಡುವೆ ಬಟ್ಟಲಿನಾಕಾರದ ಉಬ್ಬಿರುವ ಅವುಗಳಿಗೆ ಒಂದೊಂದು ರಂಧ್ರಗಳಿದ್ದು ಕಂಚಿನದಾಗಿರುತ್ತದೆ. ತಾಳದ ರಂಧ್ರಗಳಿಗೆ ಹುರಿ ಪೋಣಿಸಿ ಅದಕ್ಕೆ ಮೂರು ಅಂಗುಲ ದುಂಡಾದ ಕಟ್ಟಿಗೆ ಕಟ್ಟಿರುತ್ತಾರೆ. ಈ ಕಟ್ಟಿಗೆ ತುಂಡುಗಳನ್ನು ತೋರುಬೆರಳು ಹಾಗೂ ಹೆಬ್ಬೆಟ್ಟಿನ ಮಧ್ಯಭಾಗದಲ್ಲಿ ಸಿಲುಕಿಸಿ, ಎರಡೂ ಕೈಗಳಲ್ಲಿ ಒಂದೊಂದು ತಾಳಗಳನ್ನು ಹಿಡಿದುಕೊಂಡು ನಗಾರಿ ಅಥವಾ ಕಂಚಿನ ಗಂಗಾಳದ ತಾಳಗತ್ತುಗಳನ್ನು ಅನುಸರಿಸಿ ಈ ಪಕ್ಕವಾದ್ಯವನ್ನು ನುಡಿಸುತ್ತಾರೆ. ಮೇಳದ ಮಧ್ಯದಲ್ಲಿ ನಿಂತು 'ಚಣ ಚಣ' ಎಂದು ಬಾರಿಸುವ ಈ ವಾಧ್ಯದ ಧ್ವನಿ ತುಂಬಾ ಇಂಪಾಗಿರುತ್ತದೆ.

**iii. ಘಟಮ್(ಮಣ್ಣಿನ ಇಲ್ಲವೆ ಲೋಹದ ಬಿದಿಗೆ)**: ಬಂಜಾರ ಸ್ತ್ರೀಯರು ತಮ್ಮ ಕುಣಿತಕ್ಕೆ ಹಿನ್ನಲೆಯಾಗಿ ಹಾಡು ಇಲ್ಲವೆ ಪಕ್ಕವಾದ್ಯಗಳನ್ನು ಉಪಯೋಗಿಸಿಕೊಳ್ಳುವುದು ಸ್ವಾಭಾವಿಕ. ನಿಸರ್ಗ ರಮಣೀಯವಾದ ಪರಿಸರದಲ್ಲಿ ಕೆಲವೊಮ್ಮೆ ಈ ಮಹಿಳೆಯರು, ಪುರುಷರು ಬಾರಿಸುವ ಪಕ್ಕವಾದ್ಯಗಳನ್ನು ಬಿಟ್ಟು ತಾವೇ ಮಣ್ಣಿನ ಅಥವಾ ಲೋಹದ ಬಿಂದಿಗೆ ಇತ್ಯಾದಿಗಳನ್ನು ಕೈ ಹಿಡಿದು ತಮ್ಮ ಕುಣಿತದ ಲಯಕ್ಕನುಗುಣವಾಗಿ ಬಿಂದಿಗೆಯನ್ನು ಮೇಲೆ ಕೆಳಗೆ ಆಡಿಸಿ ಕುಣಿಯುತ್ತಾರೆ. ಇಂಥ ಸಂದರ್ಭಗಳಲ್ಲಿ ಕುಣಿಯುವ ಕುಣಿತಗಳು ವಿಶಿಷ್ಟ ಬಗೆಯದಾಗಿವೆ. ಹಾಡಿನ ತಾಳ ಲಯಕ್ಕನುಸರಿಸಿ ವಿವಿಧ ಭಂಗಿಗಳಿಂದ ಮನದಣಿಯದೆ ಕುಣಿಯುತ್ತಾರೆ. ಈ ಕುಣಿತಗಳನ್ನು ನೋಡಿಯೇ ಆನಂದಿಸಬೇಕು. ತುಂಬಾ ಸೊಗಸಾಗಿರುತ್ತದೆ.

**II. ಚರ್ಮವಾದ್ಯಗಳು**

**i. ನಗಾರಿ**: ಬಂಜಾರ ಬಳಗದ ಆಸ್ತಿಯಾದ ನಗಾರಿಯನ್ನು ತಮ್ಮ ಭಾಷೆಯಲ್ಲಿ 'ನಗಾರಾ', 'ನಂಗಾರಾ'ಗಳೆಂದು ಕರೆದುಕೊಳ್ಳುತ್ತಾರೆ. 'ನಗಾರಿ' ಲಂಬಾಣಿಗರ ಎಲ್ಲ ತಾಂಡ ಗಳಲ್ಲಿಯೂ ಇದ್ದೇ ಇರುತ್ತದೆ. ಇದು ಸಮುದಾಯದ ಆಸ್ತಿಯಾಗಿರುವುದರಿಂದ ಸೇವಾಭಾಯಾ ಅಥವಾ ತಾಂಡದ ದೇವಸ್ಥಾನದಲ್ಲಿ ಇದನ್ನು ಇಟ್ಟಿರುತ್ತಾರೆ. ಹಬ್ಬ, ಜಾತ್ರೆ, ಉತ್ಸವಗಳಲ್ಲಿ ಮತ್ತು ಕುಟುಂಬಗಳು ಪ್ರತ್ಯೇಕವಾಗಿ ಆಚರಿಸುವ ಕುಲದೇವತಾರಾಧನೆಯ ಸಮಯಗಳಲ್ಲಿ ಇದನ್ನು ವಾದ್ಯವನ್ನಾಗಿ ಬಳಸಿಕೊಳ್ಳುತ್ತಾರೆ. ಬಂಜಾರರ ಅರ್ಧ ಗೋಳಾಕಾರದ ಚರ್ಮದ ವಾದ್ಯ. ದೊಡ್ಡ ಕಬ್ಬಿಣದ ಕಡಾಯಿಯ ಬಾಯಿಗೆ ಹದ ಮಾಡಿದ ಎಮ್ಮೆ ಅಥವಾ ದನದ

ಚರ್ಮವನ್ನು ಬಿಗಿದಿರುತ್ತಾರೆ. ಬಿಗಿಯುವ ಮೊದಲು ಅದರ ಒಡಲಲ್ಲಿ ಐದು ಕವಡೆ, ಎರಡು ಅಡಿಕೆ, ಒಂದು ದೊಡ್ಡ ಗೆಜ್ಜೆ ಹಾಗೂ ಒಂದು ಪಂಚಲೋಹದ ಬಟ್ಟಲನ್ನು ಹಾಕುತ್ತಾರೆ. ಇದರಿಂದ ನಗಾರಿ ಬಾರಿಸುವಾಗ ಒಳಗಡೆಯಿಂದ ಮಧುರವಾದ ಕಿಂಕಿಣಿನಾದವೂ ಕೇಳಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ನಗಾರಿಯ ಬಳಕೆ ಅತೀ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ರಾಜಮಹಾರಾಜರ ಕಾಲದಲ್ಲಿ ಯುದ್ಧಕ್ಕೆ ಹೊರಡುವಾಗ, ಶತ್ರು ಸೈನ್ಯದ ಆಗಮನದ ಮುನ್ಸೂಚನೆ ಸಂದರ್ಭದಲ್ಲಿ ನಗಾರಿಯನ್ನು ಬಾರಿಸುತ್ತಿದ್ದರು. ನಗಾರಿಯನ್ನು ಗೌರವ ಘನತೆಯ ಸಂಕೇತವಾಗಿಯೂ ಬಾರಿಸಲಾಗುತ್ತಿತ್ತು. ಹೀಗೆ ಭಾರತೀಯರಲ್ಲಿದ್ದ ನಗಾರಿಯನ್ನು ಬಂಜಾರರು ತಮ್ಮ ವಾದ್ಯವನ್ನಾಗಿ ಮಾಡಿ ಕೊಂಡಿರುವುದು ಆಶ್ಚರ್ಯದ ಸಂಗತಿಯೇನಲ್ಲ.

ಬಂಜಾರರಿಗೆ ನಗಾರಿಗಳ ಮೇಲೆ ದೇವರಲ್ಲಿ ಇಟ್ಟಷ್ಟೇ ಭಕ್ತಿ, ಪ್ರೀತಿ ಇರುತ್ತದೆ.ನಗಾರಿಯನ್ನು ಬಂಜಾರರು ಹಲವು ಸಂದರ್ಭಗಳಲ್ಲಿ ಬಳಸುತ್ತಾರೆ. ತಾಂಡದಲ್ಲಿ ನಡೆಯುತ್ತಿದ್ದ ಹಬ್ಬದ ಸಂಭ್ರಮವನ್ನು ಮತ್ತೊಂದು ತಾಂಡದವರಿಗೆ ಸೂಚಿಸಲು, ಸಾಂಪ್ರದಾಯಿಕ ಲಾವಣಿಗಳನ್ನು ಹಾಡುವಾಗ, ಪೂಜೆ ಪುನಸ್ಕಾರಗಳು ನಡೆಯುವಾಗ ನಗಾರಿಯನ್ನು ಲಯಬದ್ಧವಾಗಿ ಬಾರಿಸುತ್ತಾರೆ. ಅಂತೆಯೇ ಪುತ್ರ ಜನನದ ಸಂದರ್ಭದಲ್ಲಿಯೂ ನಗಾರಿ ಬಾರಿಸಿ ತಾಂಡದ ಜನತೆಗೆ ವಿಷಯವನ್ನು ತಿಳಿಸುತ್ತಾರೆ.ಇದು ಲಂಬಾಣಿಗರಿಗೆ ಪುತ್ರ ಪ್ರಾಪ್ತಿಯ ಸಂತೋಷದ ಸಂಕೇತವಾಗಿದೆ. ಹೋಳಿ ಹಬ್ಬದಲ್ಲಿ 'ನಗಾರಿ ಹೊರತೆಗೆಯುವ ಶಾಸ್ತ್ರ' ಇದೆ. ಅಲ್ಲದೆ ತಾಂಡದಲ್ಲಿ ನಡೆಯುವ ಪೂಜೆಯ ಸೂಚನೆಯನ್ನು ನಗಾರಿ ಬಾರಿಸುವುದರ ಮೂಲಕ ಕೊಡಲಾಗುತ್ತದೆ.ನಗಾರಿ ಬಾರಿಸುವ ಶಬ್ದವು ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತದೆ. ಒಟ್ಟಿನಲ್ಲಿ ಅತ್ಯಂತ ಮಾನವೀಯ ಸಂದರ್ಭದಲ್ಲಿ ಇದರ ಬಳಕೆಯಾಗುತ್ತಿದೆ.

**೨. ಆಧುನಿಕ ವಾದ್ಯಗಳು**

'ಪರಿವರ್ತನೆ ಜಗದ ನಿಯಮ' ಎನ್ನುವ ಮಾತಿನಂತೆ ಲಂಬಾಣಿಗಳು ಕಾಲಗತಿಸಿದಂತೆ ತಮ್ಮ ಆಚಾರ-ವಿಚಾರ, ಉಡುಗೆ-ತೊಡುಗೆ, ಮದುವೆ-ಮುಂಜಿ ಇತ್ಯಾದಿಗಳಲ್ಲಿ ಅಲ್ಪಸ್ವಲ್ಪ ಪರಿವರ್ತಿತರಾಗಿರುವಂತೆ ವಾದ್ಯ ಪರಿಕರಗಳಲ್ಲಿಯೂ ಬದಲಾವಣೆಗಳನ್ನು ಮಾಡಿ ಕೊಂಡಿರು ವುದು ಆಶ್ಚರ್ಯವನ್ನುಂಟು ಮಾಡಲಾರದು. ಪ್ರಾಚೀನ ವಾದ್ಯ ಪರಿಕರಗಳನ್ನು ಸಂಪೂರ್ಣವಾಗಿ ತೊಡೆದು ಹಾಕದೆ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಆಧುನಿಕ ವಾದ್ಯಗಳನ್ನು ಬಳಸುತ್ತಿರುವುದು ಗಮನಸಬೇಕಾದ ಅಂಶ. ಇತ್ತೀಚಿನ ದಿನಗಳಲ್ಲಿ ಲಂಬಾಣಿಗಳು ಹಲವಾರು ವಾದ್ಯಗಳನ್ನು

ಬಳಸಿಕೊಂಡು ಲಾವಣಿಗಳನ್ನು ಹಾಡುತ್ತಾರೆ. 'ಡಗ್ಗಾ' – ಎನ್ನುವ ವಿಶೇಷ ಪ್ರಕಾರದ ಚರ್ಮ ವಾದ್ಯ 'ತಬಲಾ' – ಕೈಯಲ್ಲಿ ಯಾವುದೇ ಸಾದನದಂಡವನ್ನು ಹಿಡಿದುಕೊಳ್ಳದೆ ಬರಿಗೈ ಯಿಂದಲೇ ಈ ವಾದ್ಯವನ್ನು ನವೀನ ತಾಳಗತ್ತುಗಳಿಂದ ನುಡಿಸುತ್ತಾರೆ. 'ಡಪ್ಪು' –ದಪ್ಪು, ಹಲಗೆ, ತಮ್ಮಟೆ ಮುಂತಾದ ಹೆಸರುಗಳಿಂದ ಕರೆಯಲ್ಪಡುವ ಚರ್ಮವಾದ್ಯಕ್ಕೆ ಬಂಜಾರರು 'ಡಬ್ಡಾ' ಎಂದು ಕರೆಯುತ್ತಾರೆ. 'ಡುಮಕಿ' ದಿಮ್ಮಿ, ದುಮಕಿ, ಡುಮಕಿ, ಗಮಕಿ ಇತ್ಯಾದಿ ಹೆಸರುಗಳಿಂದ ಕರೆಯಲ್ಪಡುವ ಈ ಚರ್ಮವಾದ್ಯವನ್ನು ಬಂಜಾರರು ಮೋಜು ಮಜಲುಗಳಲ್ಲಿ ಡಪ್ಪು ವಾದ್ಯದ ಜೊತೆಗೆ ಏಕಕಾಲದಲ್ಲಿ ಬಳಸುತ್ತಾರೆ. 'ಗೆಜ್ಜೆ ಸರ'– ಬಂಜಾರ ಮಹಿಳೆ ಹಾಗೂ ಪುರುಷರು ಕೆಲವೊಮ್ಮೆ ತಮ್ಮ ನೃತ್ಯಗಳಿಗೆ ಹಿನ್ನಲೆಯಾಗಿ ಕೈಗಳಿಗೆ ಅಥವಾ ಕಾಲಿಗೆ ಗೆಜ್ಜೆಸರಗಳನ್ನು ಕಟ್ಟಿಕೊಂಡು ನರ್ತಿಸುವುದು ಕಂಡುಬರುತ್ತದೆ.ಈ ಗೆಜ್ಜೆಸರಗಳಿಗೆ ಅವರು **'ಘುಘರಾ'** ಎಂದು ಕರೆಯುತ್ತಾರೆ.**'ಕಂಜರ'** ಅಥವಾ **'ಖಂಜೀರಾ'** ಎಂಬುದು ಚರ್ಮವಾದ್ಯ. ಸುಮಾರು ಎಂಟು ಅಂಗುಲ ವ್ಯಾಸ ಹಾಗೂ ವೃತ್ತಾಕಾರವುಳ್ಳ ಇದರ ಒಂದು ಭಾಗವನ್ನು ಆಡಿನ ಚರ್ಮದಿಂದ ಹೊದಿಸಿ ಮರೋಜ್ರದಿಂದ ಲೇಪಿಸಿರುತ್ತಾರೆ. ಸುತ್ತಲೂ ಸಮಾನವಾದ ಅಂತರದಲ್ಲಿ ರಂಧ್ರಗಳನ್ನು ಕೊರೆದು ಅನೇಕ ಲೋಹದ ಬಿಲ್ಲೆಗಳನ್ನು ಅಳವಡಿಸಿರುತ್ತಾರೆ. 'ಕೊಳಲು' – ಬಂಜಾರ ಭಾಷೆಯಲ್ಲಿ 'ವಾಸಳಿ' ಎಂದು ಕರೆಯುವ ಇದೊಂದು ಊದುವ ವಾದ್ಯ. ಈ ನವೀನ ವಾಧ್ಯಗಳನ್ನು ಬಳಸಿ ಹಾಡುವ, ನರ್ತಿಸುವ ಹಲವಾರು ಮೇಳಗಳು ಬಂಜಾರ ತಾಂಡಗಳಲ್ಲಿ ತಲೆ ಎತ್ತಿವೆ. ಜನರು ಹಬ್ಬ–ಹರಿದಿನಗಳಲ್ಲಿ, ಮದುವೆ ಮುಂಜಿಗಳಲ್ಲಿ ಇಂತಹ ನೃತ್ಯ ಮೇಳದವರನ್ನು ಕರೆಸಿ ಅವರ ಹಾಡು ನರ್ತನ ವನ್ನು ಕೇಳಿ, ನೋಡಿ ಆನಂದಿಸುತ್ತಾರೆ.

ಒಟ್ಟಿನಲ್ಲಿ ಕಾಲಕಾಲಕ್ಕೆ ಬದಲಾವಣೆಯನ್ನು ಒಪ್ಪಿಕೊಂಡು ಅನುಕರಿಸುವ ಈ ಜನ, ನವನವೀನ ವಾದ್ಯ ಪರಿಕರಗಳನ್ನು ಬಳಸಿಕೊಂಡು ಅವುಗಳಿಗನುಗುಣವಾಗಿ ಹಾಡಿ ಕುಣಿಯುವುದು, ಈ ಜನರು ಪರಿವರ್ತಿತರಾಗುತ್ತಿರುವುದನ್ನು ಸೂಚಿಸುತ್ತದೆ. ಈ ನವಹಾಡು ಗಾರರಲ್ಲಿ ಸಿನಿಮಾ, ಟಿ.ವಿ. ರೇಡಿಯೋ ಇತರೆ ಆಧುನಿಕ ಮನರಂಜನಾ ಮಾಧ್ಯಮಗಳ ಹಾಡುಗಳ ಪ್ರಭಾವ ಹೆಚ್ಚಾಗಿ ಕಂಡುಬಂದರೂ, ಪ್ರಾಚೀನ ವಾದ್ಯಗಳಾದ ನಗಾರಿ, ಕಂಚಿನ ಗಂಗಾಳ ಕಂಚಿನ ತಾಳ – ಇವು ತಮ್ಮ ಜನಪ್ರಿಯತೆಯನ್ನು ಉಳಿಸಿಕೊಂಡಿರುವುದು 'ಜಾನಪದ ಅವಿನಾಶಿಯಾದುದು' ಎಂಬ ಮಾತಿಗೆ ಸಾಕ್ಷಿಯಾಗಿದೆ.

## ೨.೬. ಬಂಜಾರ ಸಮುದಾಯದಲ್ಲಿನ ಹಬ್ಬ ಆಚರಣೆಗಳು

**ಬಂಜಾರರಲ್ಲಿ ದೀಪಾವಳಿಯ ಹಿನ್ನಲೆ:** ಕತ್ತಲನ್ನು ಹೊಡೆದೋಡಿಸಿ ಬೆಳಕನ್ನುಂಟು ಮಾಡುವ ದೀಪಾವಳಿ ಬಂಜಾರರಿಗೆ ಅತಿ ಮಹತ್ವದ ಹಬ್ಬವಾಗಿದೆ. ಅಲೆಮಾರಿಗಳಾದ ಇವರು ವ್ಯಾಪಾರಕ್ಕಾಗಿ ಊರಿಂದೂರಿಗೆ ಕಾಡು–ಮೇಡು, ಬೆಟ್ಟಗುಡ್ಡಗಳ ಮೂಲಕ ಸಂಚರಿಸುವಾಗ ಪಂಜುಗಳನ್ನು ಹಿಡಿದು ಅದರ ಬೆಳಕಿನಲ್ಲಿ ಮುಂದೆ ಸಾಗುತ್ತಿದ್ದರು. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಹಬ್ಬ ಇದು. ಲಂಬಾಣಿಗಳು ದೀಪಾವಳಿ ಹಬ್ಬವನ್ನು ವಿಭಿನ್ನ ನೆಲೆಯಲ್ಲಿ ಆಚರಿಸುವುದರಿಂದ ಈ ಹಬ್ಬದ ಅಧ್ಯಯನವು ಅವರ ಸಂಸ್ಕೃತಿಯ ಮುಖಗಳನ್ನು ಪರಿಚಯಿಸುವಲ್ಲಿ ಸಹಕಾರಿಯಾಗಬಲ್ಲದು. ದೀಪಾವಳಿಯನ್ನು ಬಂಜಾರರು 'ದವಾಳಿ' ಎಂದು ಕರೆಯುತ್ತಾರೆ. ಇದು ಹಿಂದಿಯ 'ದಿವಾಲಿ'ಯಿಂದ ಬಂದುದಾಗಿದೆ. ಇವರು ಮೊದಲಿನಿಂದಲೂ ಹಿಂದೂ ಸಂಪ್ರದಾಯಕ್ಕೆ ಅಂಟಿಕೊಂಡು ಬದುಕು ಸಾಗಿಸುತ್ತಿದ್ದರೂ, ತಮ್ಮದೇ ವಿಶಿಷ್ಟವಾದ ರೀತಿಯಲ್ಲಿ ಹಬ್ಬ–ಹರಿದಿನಗಳನ್ನು ಆಚರಿಸುತ್ತಾ ಬಂದಿದ್ದಾರೆ. ಅಲೆಮಾರಿಗಳಾಗಿದ್ದ ಬಂಜಾರರಿಗೆ ನಿರ್ದಿಷ್ಟವಾದ ಖಾಯಂ ನೆಲೆಗಳಿರಲಿಲ್ಲ. ಹೀಗಾಗಿ ಈ ದೀಪಾವಳಿ ಹಬ್ಬವನ್ನು ಆಚರಿಸುವ ಸಂದರ್ಭದಲ್ಲಿ ಅವರ ಎಲ್ಲ ಗುಂಪುಗಳು ಒಂದೆಡೆಯಲ್ಲಿ ಸೇರಿ ತಮ್ಮ ಸಂತೋಷ ಸಂಭ್ರಮವನ್ನು ಹಂಚಿಕೊಳ್ಳುತ್ತಿದ್ದವು. ಅಲ್ಲದೆ ಪ್ರಾಯಕ್ಕೆ ಬಂದ ಮಕ್ಕಳ ಮದುವೆಗಳನ್ನು ಇದೇ ಸಂದರ್ಭದಲ್ಲಿ ಮಾಡಿ ಮುಗಿಸುತ್ತಿದ್ದರು. ಲಂಬಾಣಿಗಳು ದೀಪಾವಳಿ ಹಬ್ಬವನ್ನು ದಡಿಯಾರ್ ಅಮಾಸ್, ಕಾಳಿಮಾಸ್ ಮತ್ತು 'ದವಾಳಿ'ಗಳೆಂದು ಮೂರು ದಿನಗಳ ಕಾಲ ಬೇರೆ ಬೇರೆ ವಿಧಿವಿಧಾನಗಳಿಂದ ಈ ಹಬ್ಬವನ್ನು ಆಚರಿಸುತ್ತಾರೆ.

ದಡಿಯಾರ್ ಅಮಾಸ್(ಬೆಟ್ಟದ ಅಮವಾಸ್ಯೆ) – ಇದು ದೀಪಾವಳಿ ಹಬ್ಬದ ಮೊದಲದಿನ. ಈ ದಿನದಂದು 'ಸೊಕ್ ಪುಜಾ'(ಸಿಹಿ ನೈವೇದ್ಯದ ಪೂಜೆ) ನಡೆಯುತ್ತದೆ. ಮನೆ ಸಾರಿಸಿ ಮನೆಮಂದಿಯೆಲ್ಲ ಶುಚಿಯಾಗಿರುತ್ತಾರೆ. ಮನೆಯ ಮುಂದಿನ ಅಂಗಳದಲ್ಲಿ ಗಂಡಸರು ಗುಂಡಿತೋಡಿ ಒಲೆಹೂಡಿ ಅಡುಗೆ ಮಾಡುತ್ತಾರೆ. ಈ ಸಮಯದಲ್ಲಿ ಅವರನ್ನು ಯಾರೂ ಮಾತನಾಡಿಸುವಂತಿಲ್ಲ. ಅವರು ತಮ್ಮ ಬಾಯಿಗೆ ಬಟ್ಟೆಕಟ್ಟಿಕೊಂಡು ಒಂದು ಚೂರು ಎಂಜಲಾಗದಂತೆ ಅಡುಗೆ ಮಾಡುವರು. ಪಕ್ಕದಲ್ಲೇ ಮೂರು ಮೂರು ಕಲ್ಲುಗಳನ್ನಿಟ್ಟು ಹನುಮಾನ್ ಹಾಗೂ ಗುರೂಜಿ(ಬಾಲಾಜಿ)ಗೆ ಅಕ್ಕಿರೊಟ್ಟಿ ಮಾಡುತ್ತಾರೆ. ಈ ಅಡುಗೆ ಮಾಡುವಾಗ ಹೆಂಗಸರು ಹತ್ತಿರ ಸುಳಿಯುವುದಿಲ್ಲ. ಮುಟ್ಟುತಟ್ಟು ಆಗುವಂತಿಲ್ಲ. ಅತ್ಯಂತ ಭಯಭಕ್ತಿಯಿಂದ ಈ ಕಾರ್ಯ ನೆರವೇರುವುದು. ಅಡುಗೆಯನ್ನೆಲ್ಲ ಮಾಡಿ ಮೂರು ಕಂಚಿನ

ಗಂಗಾಳದಲ್ಲಿ ಬಾಲಾಜಿ(ತಿರುಪತಿ) ಹನುಮಾನೇರರೂಟ ಮತ್ತು ಗುರೂಜಿ ಇವರಿಗೆ ಬೇರೆ ಬೇರೆಯಾಗಿಯೇ ನೈವೇದ್ಯ ತೆಗೆದಿಟ್ಟು ಅಕ್ಕಪಕ್ಕದವರನ್ನೆಲ್ಲ ಪೂಜೆಗೆ ಆಹ್ವಾನಿಸಿ, ಎಲ್ಲರಿಗೂ ಕೇಳುವಂತೆ ಎರಡು ಕಿವಿಗಳಲ್ಲಿ ತೋರು ಬೆರಳುಗಳನ್ನಿಟ್ಟು ಈ ರೀತಿ ಮೂರುಬಾರಿ ಕೂಗುತ್ತಾರೆ. 'ಸಳೋ ಸಾಂಬ್ಯೊ ಬಾಲಗೋಪಾಲಗುರು ಮಾರಾಜೇರ್ ಚೂರಿ ತಯಾರೆವೇಗಿ, ಅವೋ ಭಾಯಿ ಸಂತೋಷ್'(ಎಲ್ಲರೂ ಕೇಳಿ ಬಾಲಗೋಪಾಲ ಗುರು ಮಹಾರಾಜರ ಅಡುಗೆ ತಯಾರಾಗಿದೆ ಸಂತೋಷದಿಂದ ಎಲ್ಲರೂ ಬನ್ನಿ) ಈ ರೀತಿ ಕೂಗುತ್ತಿದ್ದಂತೆ ಈ ಕೂಗನ್ನು ಕೇಳಿದವರೆಲ್ಲರೂ ತಪ್ಪದೇ ಪೂಜೆಗೆ ಬರುತ್ತಾರೆ. ಗಂಗಾಳದಲ್ಲಿಟ್ಟಿದ್ದ ಅನ್ನಸಾರು ಕುಂಬಳಕಾಯಿ ಪಲ್ಯವನ್ನು ಕಲಿಸಿ ತುಪ್ಪದೊಂದಿಗೆ ಒಲೆಯೊಳಗಿನ ಕೆಂಡದ ಮೇಲಿಡುತ್ತಾರೆ. ಇದೇ ರೀತಿ ಬಾಲಾಜಿ ಗುರೂಜಿ ಇವರಿಗೂ ನೈವೇದ್ಯ ಸಲ್ಲಿಸುತ್ತಾರೆ. ಹೀಗೆ ನೈವೇದ್ಯ ಮಾಡುವಾಗ ಜ್ವಾಲೆ ಚೆನ್ನಾಗಿ ಬಂದರೆ ದೇವರು ಸಂತುಷ್ಟನಾಗಿದ್ದಾನೆಂದು ಜ್ವಾಲೆ ಸರಿಯಾಗಿ ಬರದಿದ್ದಲ್ಲಿ ದೇವರು ಮುನಿಸಿಕೊಂಡಿದ್ದಾನೆಂದೂ ಭಯಭೀತರಾಗಿ ಹರಕೆ ಕಟ್ಟಿಕೊಳ್ಳುತ್ತಾರೆ. ಇದನ್ನು ಆಚರಿಸುವುದರಲ್ಲಿಯೂ ಭಿನ್ನತೆಯನ್ನು ಕಾಣುತ್ತೇವೆ. ಒಟ್ಟಿನಲ್ಲಿ ಇದು ಬಹಳ ಕಟ್ಟುನಿಟ್ಟಾದ ಆಚರಣೆಯಾಗಿದೆ. ದೇವರಿಗೆ ಅರ್ಪಿತವಾದ ನಂತರ ಗಂಗಾಳದಲ್ಲಿ ಉಳಿದುದನ್ನು ಪ್ರಸಾದವಾಗಿ ಎಲ್ಲರಿಗೂ ಹಂಚುತ್ತಾರೆ. ಬಾಲಾಜಿ ಗುರೂಜಿಯ ಪ್ರಸಾದವನ್ನು ಎಲ್ಲರೂ ಹಂಚಿ ತಿಂದರೆ, 'ಹನುಮಾನ'ನ ಪ್ರಸಾದವನ್ನು ಗಂಡಸರು ಮಾತ್ರ ಹಂಚಿಕೊಂಡು ತಿನ್ನುತ್ತಾರೆ. ಹೆಂಗಸರಿಗೆ ಕೊಡುವುದಿಲ್ಲ. ಒಂದು ವೇಳೆ ಈ ಪ್ರಸಾದವನ್ನು ಹೆಂಗಸರು ಸೇವಿಸಿದರೆ ಕಿವುಡರುಗಳಾಗುತ್ತಾರೆಂದು ಬಲವಾಗಿ ನಂಬುತ್ತಾರೆ. ಈ ಆಚರಣೆಯನ್ನು 'ಬೋಗ್‌ಲಗಾಡೇರೋ' ಎಂದು ಕರೆಯುತ್ತಾರೆ. ಈ ಆಚರಣೆಯಲ್ಲಿ ಹೆಣ್ಣನ್ನು ದೂರವಿಡುವುದರ ಮೂಲಕ ಅವಳು ಶುದ್ಧಳಲ್ಲ, ದೇವರ ಪ್ರಸಾದವನ್ನು ಸ್ವೀಕರಿಸಲು ಅನರ್ಹಳು ಎಂಬುದನ್ನು ನೇರವಾಗಿ ಹೇಳದೆ ಅಪ್ರತ್ಯಕ್ಷವಾಗಿ ಪ್ರಸಾದ ಸ್ವೀಕರಿಸಿದರೆ ಕಿವುಡಳಾಗುತ್ತಾಳೆಂಬ ಭಯ ಹುಟ್ಟಿಸಿ ತಾನಾಗಿಯೇ ಸ್ವೀಕರಿಸದಂತೆ ಮಾಡಿರುವುದು ಗಮನಿಸಬೇಕಾದ ಅಂಶ. ಬೆಟ್ಟದ ಅಮಾವಾಸ್ಯೆಯ ಸಂಜೆ ತಾಂಡದ ಮುತ್ತೈದೆಯರೆಲ್ಲ ಸೇರಿ ಗುಡಿ(ದೇವಸ್ಥಾನ)ಯ ಮುಂದೆ ನೃತ್ಯ ಮಾಡುತ್ತಾರೆ. ಬೆಳಿಗ್ಗೆ ಪೂಜೆಯ ಪವಿತ್ರ ಕಾರ್ಯದಲ್ಲಿ ದೂರವಿದ್ದ ಮಹಿಳೆ, ಸಂಜೆಯ ವೇಳೆಗೆ ನೃತ್ಯ ಪ್ರದರ್ಶನ ದಿಂದ ಎಲ್ಲರನ್ನೂ ಮನರಂಜಿಸುತ್ತಾಳೆ. ಇಲ್ಲಿ ಹೆಣ್ಣು 'ಮನರಂಜನೆಯನ್ನು ಕೊಡುವವಳು' ಎಂಬ ಅಂಶ ಗಮನಾರ್ಹವಾದುದು. ಕತ್ತಲಾಗುತ್ತಿದ್ದಂತೆ ಯುವಕರೆಲ್ಲ ಪಂಜನ್ನು ಹಚ್ಚಿಕೊಂಡು ಬೆಳಕಿನ ಹಬ್ಬವಾದ ಇಂದು ಪ್ರಾಣಿಗಳಿಗೆಲ್ಲ ಬೆಳಕು ತೋರಿಸಿ, ಪ್ರಾಣಿ ಸಂಕುಲಕ್ಕೆ, ತಾಂಡಕ್ಕೆ

ಯಾವುದೇ ತೊಂದರೆಯಾಗಬಾರದೆಂದು ತಾಂಡದ ಬೀದಿಗಳಲ್ಲಿ 'ಅಗ್‌ಝುಡ್-ಬಗ್‌ಝುಡ್' (ತೊಣಚಿ ಉದುರು-ಉಣ್ಣಿ ಉದುರು) ಎಂದು ಹೇಳುತ್ತ ಪಂಜುಗಳನ್ನು ಬೀಸುತ್ತ ಕೇಕೆ ಹಾಕುತ್ತ ಒಂದೆರಡು ಮೈಲಿ ಕಾಡಿನಲ್ಲಿ ಸಂಚರಿಸಿ ಬರುತ್ತಾರೆ. ಈ ಕ್ರಿಯೆಯಿಂದ ಹೆಣ್ಣು ಬಹುದೂರ ಉಳಿದು ಬಿಡುತ್ತಾಳೆ.

**ಹೋಳಿಹಬ್ಬ:** ಹೋಳಿಹಬ್ಬ ಭಾರತೀಯ ಸಂಸ್ಕೃತಿ ಹಾಗೂ ಪರಂಪರೆಯ ದ್ಯೋತಕವಾಗಿದೆ. ಇಡೀ ರಾಷ್ಟ್ರದಲ್ಲೆಲ್ಲಾ ಭಾರತೀಯರು ಇದನ್ನು ಭಿನ್ನಭಿನ್ನವಾದ ರೀತಿಯಲ್ಲಿ ಸಂಭ್ರಮದಿಂದ ಆಚರಿಸುತ್ತಾರೆ. ಬಂಜಾರರ ಪ್ರಮುಖ ಹಬ್ಬಗಳಲ್ಲಿ ಈ ಹಬ್ಬವು ಒಂದಾಗಿದೆ. ತಮ್ಮದೇ ಆದ ವಿಶಿಷ್ಟ ಪರಂಪರೆಯೊಂದಿಗೆ ಇದನ್ನು ಆಚರಿಸುತ್ತಾರೆ. ವಿಶೇಷವಾಗಿ ಈ ಹಬ್ಬವು ಪುರುಷ ಪ್ರಧಾನವಾಗಿದ್ದರೂ ಸ್ತ್ರೀಯರಿಲ್ಲದೆ ಅಷ್ಟೊಂದು ಸ್ವಾರಸ್ಯಕರವೆನಿಸಲಾರದು. ಪೂರ್ವದಲ್ಲಿ ಈ ಹಬ್ಬದ ಆಚರಣೆ ಬಂಜಾರರಲ್ಲಿ ಇರಲಿಲ್ಲ. ಬಹುಶಃ ನಂತರದಲ್ಲಿ ಹಿಂದುಗಳ ಆಚರಣೆಯ ಪ್ರಭಾವದಿಂದಾಗಿ ಸೇರಿಕೊಂಡಂತಿದೆ. ಇದರ ಆಚರಣೆಯಲ್ಲಿ ಅನೇಕ ಬಗೆಯ ಗೀತ ನರ್ತನೆಗಳಲ್ಲಿ ಮೈಮರೆಯುತ್ತಾರೆ. ಸರಸ ವಿನೋದಗಳಲ್ಲಿ ತೊಡಗುತ್ತಾರೆ. ಹಲಗೆ, ಡೋಲು, ಕೋಲುಗಳ ಶಬ್ದದೊಂದಿಗೆ ಬಂಜಾರರ ಮನಸ್ಸು ಕೋಗಿಲೆಯಂತೆ ಕೂಗಲು ಪ್ರಯತ್ನಿಸುತ್ತದೆ. ತಮ್ಮ ಬದುಕಿನ ಬೇನೆ-ಬೇಸರಿಕೆಗಳನ್ನು ಮರೆಯಲು ತಮ್ಮ ವೈಯಕ್ತಿಕವಾದ ರಾಗ-ದ್ವೇಷಗಳನ್ನು ಬಿಟ್ಟು ಎಲ್ಲರೂ ಒಂದಾಗಿ ಸಂತೋಷದಿಂದ ಹೋಳಿ ಉತ್ಸವದಲ್ಲಿ ಭಾಗವಹಿಸಿ ಬನ್ನಿ ಹಾಡೋಣ ಎಂಬ ಗೀತೆಯು ಬಂಜಾರರ ಹೃದಯ ವೈಶಾಲ್ಯತೆ ಹಾಗೂ ಸಾಮಾಜಿಕ ಐಕ್ಯತಾ ಮನೋಭಾವಗಳಿಗೆ ಹಿಡಿದ ಕನ್ನಡಿಯಂತಿದೆ. ಇಂತಹ ಸಾಮರಸ್ಯ ಭಾವನೆಗಳಿಲ್ಲದೆ ಸಮಾಜದ ಉಳಿವು ಹಾಗೂ ಬೆಳವಣಿಗೆ ಸಾಧ್ಯವಿಲ್ಲ.

**ಶೀತಲ ಮಾಸಾ (ಆಷಾಡ ದೇವತೆ):** ಆಷಾಡ ಮಾಸದಲ್ಲಿ ಬಂಜಾರರು ಸತೀಭವಾನಿ (ಏಳುಜನದೇವಿಯರು) ಹಾಗು ಲುಕ್ಕಡ(ಸೇವಕ)ನಿಗೆ ಪೂಜೆ ಸಲ್ಲಿಸುತ್ತಾರೆ. ಆಷಾಡಮಾಸದಲ್ಲಿ ಶೀತವಾತಾವರಣದ ಆಗಮನದಿಂದಾಗಿ ಅನೇಕ ಬಗೆಯ ರೋಗರುಜ್ಜಿನಗಳು ಬರಲು ಪ್ರಾರಂಭವಾಗುವುದರಿಂದ ತಮ್ಮ ಸಮಾಜಕ್ಕೆ ಯಾವುದೇ ರೀತಿಯ ಅನಾರೋಗ್ಯಗಳು, ಬಂದಂತೆ ಶಕ್ತಿದೇವತೆಗಳಾದ ತುಳಜಾ ಭವಾನಿ, ಶೀತಲಾ ಭವಾನಿ, ಭೋಜರಿ ಭವಾನಿ, ಮತರಾಲ ಭವಾನಿ, ಮಸೂರ ಭವಾನಿ, ವಾಗ್ಜಾಯಿ ಹಾಗೂ ಹಿಂಗಳಾ ಮಾತಾ ಮತ್ತು ಅವರ ಸೇವಕನಾದ ಲುಕ್ಕಡನಿಗೆ ಪೂಜೆ ಸಲ್ಲಿಸುತ್ತಾರೆ. ಸಿಹಿ ಹಾಗೂ ಮಾಂಸದ ಅಡಿಗೆ ನೈವೇದ್ಯವನ್ನು ಅರ್ಪಿಸಿ ತಾಂಡಾದ ಪ್ರಮುಖ ಸ್ತ್ರೀಯರು ದೇವತೆಗಳಿಗೆ ಪ್ರಾರ್ಥನೆ ಸಲ್ಲಿಸುತ್ತಾರೆ.

**ತೀಜ್(ಗೋದಿಸಸಿ) ಹಬ್ಬ:** ಈ ಹಬ್ಬವನ್ನು ಮಹಾನವಮಿಯ ಸಂದರ್ಭದಲ್ಲಿ ಕೆಲವು ಕಡೆಗಳಲ್ಲಿ ಆಚರಿಸಿದಂತೆ ಮತ್ತೆ ಕೆಲವು ಕಡೆಗಳಲ್ಲಿ ಯುಗಾದಿಯ ಸಂದರ್ಭದಲ್ಲಿ ಆಚರಿಸುತ್ತಾರೆ. ಇನ್ನೂ ಕೆಲವು ಪ್ರದೇಶಗಳಲ್ಲಿ ಶ್ರಾವಣ ಇಲ್ಲವೆ ಭಾದ್ರಪದ ಮಾಸಗಳಲ್ಲಿಯೂ ಆಚರಿಸುವುದುಂಟು. ದೀಪಾವಳಿ ಹಾಗೂ ಹೋಳಿ ಹಬ್ಬಗಳಂತೆ ಈ ಹಬ್ಬವನ್ನು ಅತಿ ಸಂಭ್ರಮದಿಂದ ಆಚರಿಸುತ್ತಾರೆ. ನರ್ತನ ಹಾಗೂ ಗೀತೆಗಳ ಸುರಿಮಳೆಯಾಗಿರುವ ಈ ಹಬ್ಬದಲ್ಲಿ ಕೋರು ಹುಡುಗಿಯರಿಗೆ ವಿಶೇಷ ಪ್ರಾಧಾನ್ಯತೆ ಇರುತ್ತದೆ. ಪುರುಷರು ಅಂಶಿಕ ವಾಗಿ ಪಾಲ್ಗೊಳ್ಳುತ್ತಾರೆ. ಪ್ರಸ್ತುತ ಹಬ್ಬವನ್ನು ಶ್ರೀಕೃಷ್ಣನಿಗೆ ಪೂಜೆ ಸಲ್ಲಿಸುವ ಹಿನ್ನಲೆಯಲ್ಲಿ ಆಚರಿಸುತ್ತಾರೆ. ಗೋಧಿ ಸಸಿಗಳ ಪೂಜೆಗೂ ಶ್ರೀಕೃಷ್ಣನಿಗೂ ಇರುವ ಸಂಬಂಧ ಕುರಿತು ಬಂಜಾರರಲ್ಲಿ ಚಾರಿತ್ರಿಕ ಹಿನ್ನೆಲೆಯಿದೆ.

ಪ್ರಸ್ತುತ ಸಂಶೋಧನಾ ಅಧ್ಯಯನದಲ್ಲಿ ಕಂಡುಕೊಂಡಿರುವಂತೆ ಈ ಮೇಲ್ಕಂಡ ಹಬ್ಬಗಳ ಆಚರಣೆಯಲ್ಲಿ ಕೆಲವೊಂದು ಮಾರ್ಪಾಡುಗಳು ಇಲ್ಲವೆ ವ್ಯತ್ಯಾಸಗಳು ಕಂಡುಬಂದಿವೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ೧೫ ತಾಂಡಗಳಲ್ಲಿ ದೀಪಾವಳಿ ಹಾಗು ಹೋಳಿ ಹಬ್ಬಗಳೆರಡನ್ನೂ ಅನುಸರಿಸಿಕೊಂಡು ಚಾಚೂತಪ್ಪದೆ ಅನುಸರಿಸಿಕೊಂಡು ಬಂದರೆ, ಉಳಿದ ಶೀತಲ ಮಾತಾ ಮತ್ತು ತೀಜ್ ಹಬ್ಬದ ಆಚರಣೆಗಳು ಬದಲಾದ ಭೌಗೋಳಿಕ ಪರಿಸರ ಇಲ್ಲವೆ ಋತುಮಾನಗಳ ಹಿನ್ನಲೆಯಲ್ಲಿ ಅನುಷ್ಠಾನಕ್ಕೆ ಬರುತ್ತದೆ. ಉದಾಹರಣೆ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಳ್ಳಿ ತಾಲ್ಲೂಕಿನ ಮರವ ಪಳ್ಳಿ ತಾಂಡಾ, ಪಾರ್ವತಿಪುರ ತಾಂಡ ಮತ್ತು ಕ್ಯೊಯಗುಟ್ಟ ತಾಂಡಗಳ ಮಾಹಿತಿದಾರ ಕುಟುಂಬಗಳಲ್ಲಿ ಕಂಡುಬಂದಿರುವಂತೆ ಶೀತಲಮಾತಾ ಮತ್ತು ತೀಜ್ ಹಬ್ಬಗಳ ಬಗ್ಗೆ ಜನರು ಹೆಚ್ಚಾಗಿ ಆಸಕ್ತಿವಹಿಸಿರುವುದಿಲ್ಲ. ಆದರೆ ದೀಪಾವಳಿ ಮತ್ತು ಹೋಳಿ ಹಬ್ಬಗಳೆರಡನ್ನೂ ಅತಿ ಸಂಭ್ರಮದಿಂದ ಆಚರಿಸುವವರಾಗಿದ್ದಾರೆ. ಕಾರಣ ವೇನೆಂದರೆ ಈ ತಾಂಡಗಳಲ್ಲಿ ಕಂಡುಬರುವ ನಿರುದ್ಯೋಗ, ಬಡತನ, ವಲಸೆ ಹಾಗೂ ಬರದ ಪರಿಸ್ಥಿತಿಗಳೇ ಆಗಿರುತ್ತವೆ.

ಉಳಿದಂತೆ ಚಿತ್ರದುರ್ಗ ಹಾಗೂ ಚಿಕ್ಕಮಗಳೂರು ಜಿಲ್ಲೆಗಳ ಆಯ್ಕೆ ಕ್ಷೇತ್ರಗಳ ಕುಟುಂಬ ಗಳ ಮಾಹಿತಿದಾರರಲ್ಲಿ ಕಂಡುಬಂದಿರುವಂತೆ ಈ ನಾಲ್ಕು ಹಬ್ಬಗಳನ್ನು ಆಚರಿಸುವವರಾಗಿದ್ದರೂ, ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕಿನ ಉಪ್ಪಿನಹಳ್ಳಿ ತಾಂಡ ಮತ್ತು ಬಸವನಹಳ್ಳಿ ತಾಂಡಗಳಲ್ಲಿ ಶೀತಲಮಾತಾ ಹಬ್ಬಕ್ಕೆ ಪ್ರಾಶಸ್ತ್ಯ ನೀಡಿದರೆ ತೀಜ್ ಹಬ್ಬಕ್ಕೆ ಅಷ್ಟೇನೂ ಪ್ರಾಮುಖ್ಯತೆ ನೀಡುವುದಿಲ್ಲ. ಆದರೆ ದೀಪಾವಳಿ ಮತ್ತು ಹೋಳಿಹಬ್ಬಗಳೆರಡನ್ನೂ ಚಾಚೂತಪ್ಪದೆ ಆಚರಿಸುವವರಾಗಿದ್ದಾರೆ.

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಆಯ್ಕೆಯಾಗಿರುವ ಐದೂ ತಾಂಡಗಳಲ್ಲಿನ ಮಾಹಿತಿದಾರ ಕುಟುಂಬಗಳ ಅಭಿಪ್ರಾಯದಂತೆ ಹಾಗೂ ಅವಲೋಕನೆಯ ಪ್ರಕಾರ ಬಹುತೇಕ ಎಲ್ಲಾ ತಾಂಡಗಳು ಎಲ್ಲಾ ಹಬ್ಬಗಳನ್ನು ಆಚರಿಸುವವರಾಗಿದ್ದು, ಸಕ್ರಿಯವಾಗಿ ಭಾಗವಹಿಸಿ, ಯಾಸಸ್ವಿಗಳಿಸುತ್ತಾರೆ. ಕಾರಣ ಇಲ್ಲಿನ ತಾಂಡಗಳು ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕವಾಗಿ ಅಷ್ಟೇನೂ ನಿಕೃಷ್ಟ ಸ್ಥಿತಿಯಲ್ಲಿರದೆ, ಅಭಿವೃದ್ಧಿ ಪಥದಲ್ಲಿನ ಹಿನ್ನಲೆಯಲ್ಲಿ ಹಬ್ಬ ಆಚರಣೆಗಳು ಸದಾ ನಿರಂತರವಾಗಿರುತ್ತವೆ.

### ೨.೭. ಬಂಜಾರರಲ್ಲಿ ಸಾಂಪ್ರದಾಯಿಕ ಆಹಾರ ಪದ್ಧತಿಗಳು

ಯಾವುದೇ ಒಂದು ಪ್ರದೇಶದಲ್ಲಿ ವಾಸ ಇರುವ ಜನರ ಆಹಾರ ಪದ್ಧತಿಯು ಅಲ್ಲಿನ ಭೌಗೋಳಿಕ ಪರಿಸರ, ಹವಾಗುಣ ಅದಕ್ಕೆ ಪೂರಕವಾಗಿ ತೆಗೆದುಕೊಳ್ಳುವ ವೇಳೆ ಇದರ ಜೊತೆಗೆ ಆರ್ಥಿಕ ಹಾಗೂ ಸಾಮಾಜಿಕ ಸ್ಥಿತಿಗತಿಯನ್ನು ಅವಲಂಬಿಸಿರುತ್ತದೆ. ಯಾವುದೇ ಬುಡಕಟ್ಟುಗಳ ಆಹಾರ ಪದ್ಧತಿ ತಮ್ಮ ಪರಿಸರದಲ್ಲಿ ದೊರೆಯುವ ಗಿಡದಬೇರು, ಹಣ್ಣು, ಕಾಯಿ, ಗೆಡ್ಡೆ–ಗೆಣಸು ಹಾಗೂ ಸಸ್ಯಜನ್ಯದಿಂದ ಮತ್ತು ಪ್ರಾಣಿಜನ್ಯದಿಂದ ಬರುವ ಸಾಮಾಗ್ರಿಗಳನ್ನು ಅವಲಂಬಿಸಿರುತ್ತದೆ.

ಬಂಜಾರರು ಮೂಲತಃ ಮಾಂಸಾಹಾರಿಗಳು ಹಾಗೂ ಕಾಡುಗಳ ತಪ್ಪಲಲ್ಲಿ ವಾಸ ಮಾಡುವವರಾದ್ದರಿಂದ ಬೇಟೆ ಮೂಲಕ ಅಥವಾ ಸಾಕಿದ ಪ್ರಾಣಿಗಳನ್ನು ಕೊಂದು ತಿನ್ನುವ ಮೂಲಕ ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಾರೆ ದವಸಧಾನ್ಯಗಳಿಂದಲೂ ಆಹಾರವನ್ನು ತಯಾರಿಸಿಕೊಂಡು ತಮ್ಮ ಅಗತ್ಯತೆಯನ್ನು ಪೂರೈಸಿಕೊಳ್ಳುತ್ತಾರೆ. ಇವರು ಪ್ರಾದೇಶಿಕವಾಗಿ ಬಳಕೆಯಲ್ಲಿರುವ ರಾಗಿ, ಜೋಳ, ನವಣೆ, ಅರ್ಕಾ, ಸಾಮೆ ಮುಂತಾದವುಗಳನ್ನು ಉಪಯೋಗಿಸುತ್ತಾರೆ.

ಬಂಜಾರರು ಯಾವತ್ತೂ ಮಣ್ಣಿನ ಪಾತ್ರೆಗಳಲ್ಲಿಯೇ ಆಹಾರವನ್ನು ತಯಾರಿಸಿಕೊಳ್ಳುತ್ತಾರೆ. ಅಲ್ಯುಮಿನಿಯಂ, ಸ್ಟೀಲ್, ಕಂಚಿನಪಾತ್ರೆಗಳಲ್ಲಿ ತಯಾರಿಸಿದ ಅಡುಗೆ ರುಚಿಕರವಲ್ಲವೆಂದೂ, ಅವು ಅನಾರೋಗ್ಯಕ್ಕೆ ಈಡು ಮಾಡುತ್ತವೆಂದು ನಂಬಿದ್ದಾರೆ. ಮಣ್ಣಿನ ಮಡಕೆಗಳಲ್ಲಿ ತಯಾರಿಸಿದ ಅಡುಗೆ ಅತ್ಯಂತ ರುಚಿಯಾಗಿರುತ್ತದೆಂದು, ಮನುಷ್ಯನ ಆರೋಗ್ಯಕ್ಕೆ ಬಹಳ ಒಳ್ಳೆಯದೆಂದು ಭಾವಿಸುತ್ತಾರೆ. ಅದರಲ್ಲಿಯೂ ಹಾಲು, ಮೊಸರು, ಮಜ್ಜಿಗೆಯಂತಹ ಪದಾರ್ಥಗಳಿಗಾಗಿ ಮಣ್ಣಿನ ಮಡಕೆಗಳನ್ನು ಬಳಸುವುದು ಸೂಕ್ತವೆಂದು ಭಾವಿಸುತ್ತಾರೆ.

ಬಂಜಾರರಲ್ಲಿ ಸಿಹಿ ಅಡುಗೆಗಿಂತ ಖಾರದ ಅಡುಗೆ ಬಲು ಇಷ್ಟವಾದುದು. ಇವರು ಮಾಂಸಾಹಾರದ ಅಡುಗೆಯನ್ನು ಅತಿಸುಲಭವಾಗಿ ತಯಾರಿಸುತ್ತಾರೆ. ವಾರದಲ್ಲಿ ಯಾವುದಾದರೊಂದು ದಿನ ಮಾಂಸದೂಟವನ್ನು ಮುಟ್ಟುವುದಿಲ್ಲ. ಉಳಿದ ದಿನಗಳಲ್ಲಿ ಮಾಂಸತಿನ್ನಲು ಯಾವ ಅಭ್ಯಂತರವೂ ಇಲ್ಲ. ಇವರಿಗೆ ದಿನಂಪ್ರತಿ ಮಾಂಸದ ಊಟವಿದ್ದರೂ ಬೇಸರವಿಲ್ಲ. ಮಾಂಸಾಹಾರಕ್ಕಾಗಿ ಇವರು ಬಳಸುವ ಪ್ರಾಣಿಗಳೆಂದರೆ: ಕುಕ್ಡಿ–ಕೋಳಿ, ಭೇಳಿ–ಆಡು, ಗೋಲ್ರಿ–ಕುರಿ, ಸಸ್ಯಾ–ಮೊಲ, ಚಿತ್ಲಾ–ಜಿಂಕೆ, ಸಾಂಬರ್–ಕಡವೆ, ಜಾಡೀರ್ ಗೋಲ್ರಿ–ಕಾಡುಕುರಿ, ಜಾಡೀರ್ ಕುಕ್ಡಿ–ಕಾಡುಕೋಳಿ, ಔಷಧಿಗಾಗಿ– ಗಂಡ್ಸೂರ ಕೂರಂದಿ, ಹಣೂತ್–ಮುಷ್ಬಾ, ಗೋಯಿ–ಉಡಾ – ಈ ಪ್ರಾಣಿಗಳ ಮಾಂಸವನ್ನು ಉಪಯೋಗಿಸುತ್ತಾರೆ.ಇವುಗಳ ಜೊತೆಗೆ ಪಕ್ಷಿಗಳಾದ: ಸೋರೆ–ಸೊರಕ್ಕಿ, ಕಬೂತರ್–ಪಾರಿವಾಳ, ತಿತ್ತರ್–ಗೌಜಲಕ್ಕಿ, ಬಟವಾಡೆಕುಕ್ಡಿ–ಹಾರುವ ಕೋಳಿ, ಜಳ್‌ಕುಕ್ಡಿ–ಕೆಸ್ವಕೋಳಿ – ಈ ಪಕ್ಷಿಗಳ ಮಾಂಸವನ್ನು ಬಳಸುವುದರೊಂದಿಗೆ ಜಲಚರಗಳಾದ: ಮಾಚಳಿ–ಮೀನು, ಝೀಂಗ–ಸೀಗಡಿ, ಕೇಂಕ್ಡೋ–ನಳ್ಳಿ, ಕಾಚ್ವೋ–ಆಮೆ ಇವುಗಳನ್ನು ಉಪಯೋಗಿಸುತ್ತಾರೆ. ಪ್ರಾಣಿಗಳ ಮಾಂಸವನ್ನು ಬೇಯಿಸಿ, ಅದಕ್ಕೆ ಮೆಣಸಿನಕಾಯಿ, ಕೊತ್ತಂಬರಿ, ಜೀರಿಗೆ, ತೆಂಗಿನಕಾಯಿ ಮತ್ತು ಚಕ್ಕೆಗಳನ್ನು ಸಮಪ್ರಮಾಣದಲ್ಲಿ ಬೆರೆಸಿ ರುಬ್ಬಿ ಸೇರಿಸಿ ಅಡುಗೆ ಮಾಡಿ ಊಟ ಮಾಡುತ್ತಾರೆ.

ಲಂಬಾಣಿಗಳು ಮೂಲತಃ ಅಲೆಮಾರಿಗಳು. ಅವರು ಬೆಟ್ಟ ಗುಡ್ಡ, ಕಾಡು ಕಣಿವೆಗಳಲ್ಲಿ ಸಂಚರಿಸುತ್ತಾ ತಮ್ಮ ಹೊಟ್ಟೆ ಹೊರೆಯುತ್ತಿದ್ದರು. ಆ ಸಂದರ್ಭದಲ್ಲಿ ಪ್ರಕೃತಿಯಲ್ಲಿ ಸಿಗುವ ಗೆಡ್ಡೆ ಗೆಣಸುಗಳನ್ನು ಸಂಗ್ರಹಿಸಿ, ಅವನ್ನು ಸುಟ್ಟೋ ಅಥವಾ ಬೇಯಿಸಿ ಇಲ್ಲವೆ ಹಸಿಯಾಗಿಯೇ ಆಹಾರವಾಗಿ ಬಳಸುತ್ತಿದ್ದರು. ಅವರು ತಿನ್ನುವ ಗೆಡ್ಡೆ–ಗೆಣಸುಗಳೆಂದರೆ: ಕಾಂಟಾಳೊ ಗಡ್ಡ – ನೊರೇಗೆಣಸು, ಚರಪ್ಪೊ ಗಡ್ಡ – ನೊಪ್ಪೇಗೆಣಸು, ವೆಳ್ಳಿವಾಳೊ ಗಡ್ಡ – ತೋಟದ ಅಂಬು, ಕಲೋಡ್ – ಹುಲ್‌ಗೆಣಸು, ಸಕ್ಕರ್ ಗಂಜ – ಬೆಲ್ ಗೆಣಸು, ಲಕಡೀರ್ ಗಡ್ಡ – ಮರಗೆಣಸು, ಮಿಟೋಗಡ್ಡ – ಸಿಹಿಗೆಣಸು, ಕಜೂರೀರ್ ಗೋಬಾ – ನಟ್ಟಿ, ಸಿಬ್ಬೀರ್ ಗಡ್ಡ – ಕೊತ್ತಿ ಗೆಂಡೆ, ವಾಸುಟ – ಬಿದಿರು ಕಳಲೆ, ನೇವೇಗೆಣಸು – ಈ ಗೆಡ್ಡೆ ಗೆಣಸುಗಳನ್ನೆಲ್ಲ ಬಳಸುತ್ತಾರೆ. ಆದರೆ ಈಗ ಕಾಡಿನ ಪರಿಸರದಲ್ಲಿ ಸುಲಭವಾಗಿ ಗೆಡ್ಡೆ–ಗೆಣಸುಗಳು ಲಭ್ಯವಾಗುವುದಿಲ್ಲವೆನ್ನುತ್ತಾರೆ.

ನಿಸರ್ಗಪ್ರಿಯರಾದ ಲಂಬಾಣಿಗಳು ಬೆಟ್ಟ–ಗುಡ್ಡಗಳಲ್ಲಿ ಸಿಗುವ ಹಣ್ಣು ಹಂಪಲುಗಳನ್ನು ತಿಂದು ಜೀವಿಸಿದವರು. ಇವರು ಉಪಯೋಗಿಸುವ ಹಣ್ಣು–ಹಂಪಲುಗಳೆಂದರೆ: ಡೀಕಾಂಬ್ಳಿ –

ಕಾಡು ಕಂಬಿಹಣ್ಣು, ಖಾಟ್ ಆಮ್ಲಿ – ಸಾಗಡೆ ಹಣ್ಣು, ತೀಂದೂ – ತೂಪರದ ಹಣ್ಣು, ಬೋರ್ – ಎಲ್ಚಿಹಚ್ಚು, ಮೋಟೋದಾಮಣ್ – ದೊಡ್ಡದಡ್ಸಲ್ ಮರದ ಹಣ್ಣು, ನಾನ್ಕ್ಯಾ ದಾಮಣ್ – ಚಿಕ್ಕ ದಡ್ಸಲ್ ಹಣ್ಣು, ಲೋದ್ ಪಠಾಣ್ – ಮಗ್ಗಾರೆ ಹಣ್ಣು, ಕೋಟ್ಯಾ– ಬೇಲದ ಹಣ್ಣು, ನಾನ್ಕಿ ಕಜೂರಿ – ಕಾಡು ಈಚಲಹಣ್ಣು, ಜಾಂಬೂ – ನೇರಳೆಹಣ್ಣು, ಕೋಕ್ಡಿ – ಕಾಡುಗೇರಿಹಣ್ಣು, ಮೋಟೋಗೊಂದಾ – ದೊಡ್ಡಸಳ್ಳಿ ಹಣ್ಣು, ನಾನ್ಕ್ಯಾಗೊಂದಾ – ಸಣ್ಣ ಸೆಳ್ಳಿಹಣ್ಣು, ದುಬ್‌ಕೇಳಾ – ಮುಳ್‌ಬಾಳೆಹಣ್ಣು, ಪರ್‌ವಾಳೀರ್ ಪಾಕಾ – ದೊಡ್ಡಹುಲ್ಪೇ ಹಣ್ಣು, ಪಾಕೋಬಿಲ್ಲಾ – ಬಿಲ್ವ ಹಣ್ಣು, ಕಾಂಸ್ಕಯಾರ್ ಪಾಕಾ – ಈಜೆಹಣ್ಣು, ಜಾಡೀರ್ ಪಣಸ – ಕಾಡುಹಲಸಿನಹಣ್ಣು, ನಕ್ರ – ಕವಳದ ಕಾಯಿ, ಕರ್ಮಂದಾ – ಕವಳದ ಕಾಯಿ, ಅಂಬ್ಳಾ – ನೆಲ್ಲಿಕಾಯಿ ಈ ಮುಂತಾದ ಹಣ್ಣು ಹಂಪಲುಗಳನ್ನು ಆಹಾರಕ್ಕಾಗಿ ಉಪಯೋಗಿ ಸುತ್ತಿದ್ದರು. ಆದರೆ ಇತ್ತೀಚೆಗೆ ಇವುಗಳು ಕಾಡಿನ ಪರಿಸರದಲ್ಲಿ ವಿರಳವಾಗುತ್ತಿರುವುದು ವಿಷಾದದ ಸಂಗತಿಯಾಗಿದೆ.

**ಪಾನೀಯಗಳು ಅಥವಾ ಪೇಯಗಳು:** ಪ್ರಕೃತಿ ಪ್ರಿಯರಾದ ಲಂಬಾಣಿಗಳು ಸಾರ್ವಜನಿಕ ರೂಪದಲ್ಲಿಯೂ ವೈಯಕ್ತಿಕವಾಗಿಯೂ ಮಾದಕ ಪಾನೀಯಗಳನ್ನು ಉಪಯೋಗಿಸುವುದುಂಟು. ಸಭೆ–ಸಮಾರಂಭಗಳಲ್ಲಿ ಹಬ್ಬ–ಹರಿದಿನಗಳಲ್ಲಿ, ಜಾತ್ರೆ–ಉತ್ಸವಗಳಲ್ಲಿ ಸಾರ್ವಜನಿಕವಾಗಿ ಉಪಯೋಗಿಸಿದರೆ, ಮನೆಯಲ್ಲಿ ಮಾಂಸಾಹಾರವಿದ್ದಾಗ ಸಾಮಾನ್ಯವಾಗಿ ವೈಯಕ್ತಿಕವಾಗಿ ಉಪಯೋಗಿಸುತ್ತಾರೆ. ಅವರು ಉಪಯೋಗಿಸುವ ಮಾದಕ ಪಾನೀಯಗಳೆಂದರೆ: **ಭಾಂಗ್:** ಅಫೀಮು ಅಥವಾ ಭಂಗಿಸೊಪ್ಪಿನಿಂದ ತಯಾರಿಸಿದ ಪೇಯವಿದಾಗಿದೆ. ಭಂಗಿಸೊಪ್ಪನ್ನು ಹೊಗೆಸೊಪ್ಪಿನೊಂದಿಗೆ ಸೇರಿಸಿ ಎಡ ಅಂಗೈಯಲ್ಲಿಟ್ಟು ಬಲ ಹೆಬ್ಬೆಟ್ಟಿನಿಂದ ಚೆನ್ನಾಗಿ ಹದ ಬರುವತನಕ ಉಜ್ಜುತ್ತಾರೆ. ಹದವಾದ ಮೇಲೆ ಚುಟ್ಟಾ ಅಥವಾ ಚಿಲ್ಮಿಯಲ್ಲಿ ಸೇರಿಸಿ ಬೆಂಕಿ ಸೋಕಿಸಿ ಸೇವಿಸುತ್ತಾರೆ. ಹಬ್ಬ–ಮದುವೆಯ ಸಂದರ್ಭಗಳಲ್ಲಿ ಸಾರ್ವಜನಿಕವಾಗಿ ಸೇವಿಸಿದರೆ, ಮನೆಯಲ್ಲಿ ವೈಯಕ್ತಿಕವಾಗಿಯೂ ಉಪಯೋಗಿಸುತ್ತಾರೆ. **ಘೋಟಾ:** (ಪಾನಕ) – ನೀರಿಗೆ ಗಸಗಸೆ ಬೆಲ್ಲ, ಶುಂಠಿ, ಏಲಕ್ಕಿ ಸೇರಿಸಿ ತಯಾರಿಸಿದ ಪಾನೀಯವಿದು. ಮದುವೆಯ ಸಂದರ್ಭದಲ್ಲಿ ಇದನ್ನು ಅಗತ್ಯವಾಗಿ ಸಿದ್ಧಪಡಿಸಿ ಉಪಯೋಗಿಸಲಾಗುತ್ತದೆ. **ದಾರೂ: (ಸಾರಾಯಿ)**– ತೆಂಗಿನ ಹೊಂಬಾಳೆ, ಗೊಬ್ಬಳಿಮರದ ಚಕ್ಕೆ, ಬಾಳೆಹಣ್ಣಿನ ಸಿಪ್ಪೆ, ಕಿತ್ತಳೆಹಣ್ಣಿನ ಸಿಪ್ಪೆ, ಬೆಲ್ಲ– ಇವನ್ನೆಲ್ಲ ಜಜ್ಜಿ, ಒಂದು ದೊಡ್ಡ ಮಡಕೆಯಲ್ಲಿ ಚೆನ್ನಾಗಿ ನೆನೆಸಿ, ಕಾಯಿಸಿ ತೆಗೆದ ಪಾನೀಯವಿದು. ಇದನ್ನು ಹಬ್ಬ ಹರಿದಿನಗಳಲ್ಲಿ, ಮದುವೆ ಸಮಾರಂಭಗಳಲ್ಲಿ, ಸಾರ್ವಜನಿಕವಾಗಿ ಉಪಯೋಗಿಸಿದರೆ, ಮನೆಯಲ್ಲಿ ವೈಯಕ್ತಿಕವಾಗಿಯೂ ಉಪಯೋಗಿ

ಸುವುದುಂಟು. ಇತ್ತೀಚೆಗಂತೂ ಇದನ್ನು ಪ್ರತಿ ಮನೆಯಲ್ಲಿಯೂ ನಿತ್ಯ ಪಾನೀಯವನ್ನಾಗಿ ಉಪಯೋಗಿಸುತ್ತಿರುವುದು ಕಂಡುಬರುತ್ತಿದೆ. ಕಾರಣ ಕೇಳಿದಾಗ, "ಹೊತ್ತು ಗೊತ್ತು ಇಲ್ಲದೆ ದೇಹ ದಂಡಿಸಿ ದುಡಿವ ನಮ್ಮಂತಹ ಶ್ರಮಜೀವಿಗಳಿಗೆ ಬಿಡುಗಡೆಯ ಸಲುವಾಗಿ ಹೆಂಡ ಸಾರಾಯಿ ಅನಿವಾರ್ಯ" ಎಂದು ಹೇಳುತ್ತಾರೆ. **ಸೇಂದಿ(ಹೆಂಡ):** ತೆಂಗಿನ ಮರ, ಈಚಲುಮರ ಹಾಗೂ ಪನೆನುಂಗು ಮರಗಳಿಂದ ಸೇಂದಿ ಇಳಿಸಿ ಕುಡಿಯುತ್ತಾರೆ. ಇದರೊಂದಿಗೆ ಇತ್ತೀಚೆಗೆ ದೇಶೀಯ ಹಾಗೂ ಆಧುನಿಕ ಮದ್ಯಗಳನ್ನು ಉಪಯೋಗಿಸಲಾಗುತ್ತಿದೆ. **ತಂಬಾಕು(ಹೊಗೆಸೊಪ್ಪು):–** ಲಂಬಾಣಿಗಳಲ್ಲಿ ಪೇಯಗಳ ಜೊತೆಗೆ ಹೊಗೆಸೊಪ್ಪಿಗೂ ವಿಶೇಷ ಮಹತ್ವವಿದೆ. ಮದುವೆ ಸಮಾರಂಭಗಳಲ್ಲಿ ಹಿರಿಯರಿಗೆ 'ಹೋಕಾ' ಅಥವಾ 'ಗುಡುಗುಡಿ' ಕೊಟ್ಟು ಗೌರವಿಸುವುದು ರೂಢಿಯಲ್ಲಿದೆ. ಇವರಲ್ಲಿ ಕಾಫಿ, ಟೀ, ಕುಡಿಯುವ ಅಭ್ಯಾಸ ಹೆಚ್ಚಾಗಿದೆ. ಈ ಪಾನೀಯಗಳಿಗೆ ಬೆಲ್ಲವನ್ನು ಬಳಸಲಾಗುತ್ತದೆ. ಹಾಗೆಯೇ ಹೊಗೆಸೊಪ್ಪು ಹಾಗೂ ಬೀಡಿ ಸೇದುವ ಚಟವೂ ಇದೆ. ವೀಳ್ಯೆದೆಲ್ ಅಡಕೆಯ ಬಳಕೆ ಬಹು ಸಾಮಾನ್ಯ ವಾಗಿದೆ. ಇತ್ತೀಚಿನ ದಿನಗಳಲ್ಲಿ ಇತರ ಸಮುದಾಯದವರೊಡನೆ ಸಂಪರ್ಕ ಉಂಟಾಗುತ್ತಿರು ವುದರಿಂದ ಇವರ ಪಥ್ಯವಿಧಿಗಳಲ್ಲಿ ಬದಲಾವಣೆಗಳು ಕಂಡುಬರುತ್ತಿವೆ.

### ೨.೮. ಬಂಜಾರ ಸಮುದಾಯದಲ್ಲಿನ ಆರೋಗ್ಯ ಮತ್ತು ಚಿಕಿತ್ಸಾ ಕ್ರಮಗಳು

ಮಾನವನ ಪ್ರಯತ್ನಗಳೆಲ್ಲ ಬಹುಪಾಲು ಬದುಕುವುದಕ್ಕಾಗಿಯೇ ವಿನಿಯೋಗವಾಗುತ್ತದೆ. ಬದುಕಲು ಆರೋಗ್ಯಬೇಕು. ಈ ಆರೋಗ್ಯವನ್ನು ಕಾಪಾಡಿಕೊಳ್ಳುವಲ್ಲಿ ಆದಿವಾಸಿಗಳು ಬಹಳ ಹಿಂದಿನಿಂದ ನೈಸರ್ಗಿಕ ವಿಧಾನವನ್ನೇ ಒಪ್ಪಿಕೊಂಡು ಅದನ್ನೇ ಆಚರಣೆಗೆ ತಂದಿದ್ದಾರೆ. ಪ್ರಕೃತಿಯ ಈ ಜನರನ್ನು ಕಾಡುವ ಅಧಿಕ ರಕ್ತದೊತ್ತಡ, ಹೃದಯಸಂಬಂಧಿ ಕಾಯಿಲೆ, ಸಕ್ಕರೆ ಕಾಯಿಲೆಯಂತಹ ರೋಗಗಳು ಬರುವುದೇ ಕಡಿಮೆ. ಕುಡಿವ ನೀರು, ಸ್ವಚ್ಛತೆಯ ಕೊರತೆಯಿಂದ ಕೆಲವು ಸಾಂಕ್ರಾಮಿಕ ರೋಗಗಳು ಹರಡುವುದಿದೆ. ಅದಕ್ಕೂ ಮುಂಜಾಗರೂಕತೆ ವಹಿಸಿ ಮದ್ಯಪಾನ ಮಾಡಿ ಚೇತರಿಸಿಕೊಳ್ಳುತ್ತಾರೆ. ಸಂಪೂರ್ಣ ನಿರ್ಲಕ್ಷ್ಯ ಮಾಡಿದವರು ಸದ್ದಿಲ್ಲದೇ ಸಾವಿನದವಡೆಗೆ ಸೇರುತ್ತಾರೆ. ಆದಿವಾಸಿಗಳಲ್ಲಿ ಅವರಿಗೆ ಬರುವ ರೋಗ-ರುಜಿನಗಳಿಗೆ ಅವರು ತಿನ್ನುವ ಆಹಾರವನ್ನೇ ಔಷಧಿಯಾಗಿ ಬಳಸುವ ಪದ್ಧತಿಯಿದೆ. ಆಹಾರವೇ ಔಷಧಿಯಾಗುವ ಈ ಪದ್ಧತಿ ಆದಿವಾಸಿಗಳಿಗೆ ವಿಶೇಷವಾದದ್ದು. ಲಂಬಾಣಿಗಳು ಈ ಮೇಲಿನ ಮಾತಿಗೆ ಹೊರತಾಗಿಲ್ಲ. ಇವರಿಗೆ ಪ್ರಕೃತಿಯೇ ಸಂಜೀವಿನಿ. ಮರ, ಬಳ್ಳಿ, ನಾರು-ಬೇರು, ಎಲೆ, ಮಣ್ಣು, ನೀರು, ಗುಡ್ಡ, ಗಿಡಗಂಟಿ, ಸೊಪ್ಪು-ಸೆದೆಗಳೊಂದಿಗೆ ಬದುಕುವ ಲಂಬಾಣಿಗಳು ಹಿತ್ತಲಗಿಡವನ್ನು ಮದ್ದನ್ನಾಗಿ ಉಪಯೋಗಿಸುತ್ತಾರೆ.

ಜನಪದ ವೈದ್ಯವನ್ನು ನಾಟಿ ಔಷಧಿ, ಕೈಔಷಧಿ, ಮನೆ ಔಷಧಿ, ಹಳ್ಳಿ ಔಷಧಿ ಎಂಬುದಾಗಿ ಕರೆಯುವುದುಂಟು. ಜಾನಪದ ಸಮೂಹದಲ್ಲಿ ಈ ವೈದ್ಯ ಪದ್ಧತಿ ತಲೆಮಾರಿನಿಂದ ತಲೆಮಾರಿಗೆ ಸಾಗಿಬಂದಿರುವಂತಹದ್ದು. ಜನಪದ ವೈದ್ಯ ಮನುಷ್ಯನ ಅನುಭವದ ಆಧಾರದ ಮೇಲೆ ಉದ್ಭವಗೊಂಡ ಪದ್ಧತಿ. ತಮ್ಮ ಸುತ್ತಲಿನ ಪರಿಸರದಲ್ಲಿ ತಮಗೆ ಚಿರಪರಿಚಿತವಾದ ವಸ್ತುಗಳೇ ಜನಪದ ವೈದ್ಯ ವಿಧಾನ. ಅದಕ್ಕಾಗಿ ಊರೂರು ಅಲೆಯ ಬೇಕಿಲ್ಲ. ಹೆಚ್ಚಾಗಿ ಸುತ್ತಲಿನ ಪ್ರಕೃತಿಯಲ್ಲಿ ಸಿಗುವ ವಸ್ತುಗಳೇ ನಾಟಿ ಔಷಧಿಗೆ ಮೂಲ.

ಆಧುನಿಕ ವೈದ್ಯ ಪದ್ಧತಿ ಬರುವ ಮುಂಚೆಯೇ ಲಂಬಾಣಿಗಳು ತಮ್ಮದೇ ಆದ ವೈದ್ಯ ಪದ್ಧತಿಯನ್ನು ರೂಢಿಸಿಕೊಂಡಿದ್ದರು. ಅಡವಿಗಳಲ್ಲಿ ಬದುಕುತ್ತಿದ್ದ ಇವರಿಗೆ ತಮ್ಮ ರೋಗ – ರುಜ್ಜಿನಗಳನ್ನು ಗುಣಪಡಿಸಿಕೊಳ್ಳುವ ಪದ್ಧತಿ ಸಹಜವಾಗಿಯೇ ಮೂಡಿಬಂದಿರಬೇಕು. ಜೊತೆಗೆ ಇದು ಅನಿವಾರ್ಯವಾಗಿತ್ತು ಕೂಡ. ಪ್ರಕೃತಿಯಿಂದಲೇ ವೈದ್ಯಕ್ಕೆ ಬೇಕಾದ ವಸ್ತುಗಳಾದ, ಬೇರು, ಎಲೆ, ತೊಗಟೆ ಇತ್ಯಾದಿಗಳನ್ನು ಬಳಸುತ್ತಿದ್ದರು. ಈ ವೈದ್ಯ ಪದ್ಧತಿ ತಂದೆಯಿಂದ ಮಗನಿಗೆ ಅಥವಾ ತಾಯಿಯಿಂದ ಮಗಳಿಗೆ ಮುಂದುವರಿದುಕೊಂಡು ಬಂದಿದೆ.

ಲಂಬಾಣಿಗಳಲ್ಲಿನ ಈ ವೈದ್ಯ ಪದ್ಧತಿಯನ್ನು ಪ್ರಧಾನವಾಗಿ ನಾಲ್ಕು ರೀತಿಯಲ್ಲಿ ವಿಂಗಡಿಸಬಹುದು.

**೧. ಮಕ್ಕಳಿಗೆ ಚಿಕಿತ್ಸೆ**

➢ **ನೆಗಡಿ ಅಥವಾ ಶೀತ:** ಒಂದು ಕಾಡುಗೇರು ಬೀಜತಂದು ತಂತಿ ಇಲ್ಲವೆ ದಬ್ಬಳಕ್ಕೆ ಪೋಣಿಸಿ, ಬೆಂಕಿಯಲ್ಲಿ ಕಾಯಿಸಿ, ಮೂರು ಹನಿಯಷ್ಟು ಅದರ ರಸ ತೆಗೆದು, ತಾಯಿ ಮೊಲೆಹಾಲಿನೊಂದಿಗೆ ಮಿಶ್ರಣ ಮಾಡಿ ಮಗುವಿಗೆ ಕುಡಿಸಿದರೆ ಶೀತ ನೆಗಡಿ ಕಡಿಮೆಯಾಗುತ್ತದೆ.

➢ **ಶೀತಜ್ವರದ ಕಫ:** ಕೊಂಡ್ಗೆ ಸೊಪ್ಪು(ಸಿಂಗ್ಡೀರ್ ಪಾನ್), ವೀಳ್ಯದೆಲೆ, ಎಕ್ಕೆಗಿಡದ ಒಂದರ್ಥ ಹಣ್ಣಾದ ಎಲೆ – ಈ ಮೂರನ್ನು ತಂದು ಸ್ವಲ್ಪ ಬಿಸಿಮಾಡಿ ಅವುಗಳ ರಸ ಹಿಂಡಿ ಎರಡು ಕಸ್ತೂರಿ ಮಾತ್ರೆ, ಒಂದು ಚೂರು ಇಂಗ್, ಹಿಪ್ಲಿ– ಇವನ್ನು ನುಣ್ಣಗೆ ಅರೆದು ಪುಡಿಮಾಡಿ, ಎಲೆಗಳ ರಸದೊಂದಿಗೆ ಮಿಶ್ರಣ ಮಾಡಬೇಕು. ಈ ಮಿಶ್ರಣವನ್ನು ಒಂದು ಬಟ್ಟಲಿಗೆ ತುಂಬಿ, ಸ್ವಲ್ಪ ಬಿಸಿಮಾಡಿ ಮಗುವಿಗೆ ಕುಡಿಸಿ ಉಳಿದುದನ್ನು ಮಗುವಿನ ಎದೆಯ ಮೇಲೆ ಲೇಪ ಹಾಕಿದರೆ ಶೀತಜ್ವರ ಕಫ ಕ್ರಮೇಣ ಕಡಿಮೆಯಾಗುತ್ತದೆ.

➢ **ಸಿಡುಬು:** ಲಂಬಾಣಿ ಭಾಷೆಯಲ್ಲಿ 'ಆಯಿ', 'ಬೋದ್ರಿ' ಎಂದು ಕರೆಸಿಕೊಳ್ಳುವ ಈ ಕಾಯಿಲೆ ಬಂದಾಗ ವಿಶೇಷ ಆಚರಣೆಗಳನ್ನು ಮಾಡುತ್ತಾರೆ. ಮನೆಸಾರಿಸಿ, ಮನೆಯ

ಜನರೆಲ್ಲ ಸ್ನಾನಮಾಡಿ ಭಯ ಭಕ್ತಿಯಿಂದಿರುತ್ತಾರೆ. ಸಮೀಪದ ಮಾರಮ್ಮ ದೇವಿಗೆ ಮುಡಿಪು ಕಟ್ಟಿ ಹರಕೆ ಕಟ್ಟಿಕೊಳ್ಳುತ್ತಾರೆ. ಮನೆಯ ಹೊಸ್ತಿಲಿನ ಬಳಿ ಸಗಣಿಯಿಂದ ಒಂದು ಗೂಡನ್ನು ಮಾಡಿ ಅದರೊಳಗೆ ಆಕಳ ಗಂಜಳವನ್ನು ಹಾಕಿ ಬೇವಿನಸೊಪ್ಪನ್ನು ಇಟ್ಟಿರುತ್ತಾರೆ. ಮನೆಗೆ ಬರುವ ಯಾರೆ ಆಗಲಿ ಕೈಕಾಲುಗಳನ್ನು ತೊಳೆದುಕೊಂಡು ಗೂಡಿನಲ್ಲಿದ್ದ ಗಂಜಳವನ್ನು ಬೇವಿನಸೊಪ್ಪಿನಿಂದ ಮೈಮೇಲೆ ಸಿಂಪಡಿಸಿಕೊಂಡು ಬರಬೇಕು. ಸಿಡುಬು, ಮಕ್ಕಳಿಗೆ ಕಂಡ ದಿನದಿಂದ ಬೇವಿನಸೊಪ್ಪಿನಲ್ಲಿಯೇ ಮುಚ್ಚಿರುತ್ತಾರೆ. ಬೇವಿನಸೊಪ್ಪನ್ನು ಅರೆದು ಮೈತುಂಬ ಹಚ್ಚುತ್ತಾರೆ. ಮಕ್ಕಳನ್ನು ಆಸ್ಪತ್ರೆಗೆ ಕರೆದುಕೊಂಡು ಹೋದರೆ ಸಿಡುಬು ಹೆಚ್ಚಾಗುತ್ತವೆಂಬುದಾಗಿ ನಂಬುತ್ತಾರೆ. ಈ ದಿನಗಳಲ್ಲಿ ಮುಟ್ಟು-ತಟ್ಟು ನಡೆಯದಂತೆ ಕಠಿಣವಾಗಿ ವ್ರತವನ್ನು ಆಚರಿಸುತ್ತಾರೆ. ಬೇರೆ ಮನೆಯ ಹೆಂಗಸರನ್ನು ಪರೀಕ್ಷಿಸಿ ಮನೆಯ ಒಳಗಡೆ ಬಿಡುತ್ತಾರೆ. ಮಗುವಿನ ತಂದೆ-ತಾಯಿಗಳು ಆ ದಿನಗಳಲ್ಲಿ ಜೊತೆಯಾಗಿ ಮಲಗುವಂತಿಲ್ಲ. ಕಾಯಿಲೆ ಹೆಚ್ಚಾದರೆ ಅದು ಮೈಲಿಗೆಯ ದೋಷವೆಂದು ಭಾವಿಸುತ್ತಾರೆ. ಸಿಡುಬು ಕಂಡ ಒಂಬತ್ತನೇ ದಿನಕ್ಕೆ ಮಕ್ಕಳಿಗೆ ಸ್ನಾನ ಮಾಡಿಸುತ್ತಾರೆ. ಮನೆಸಾರಿಸಿ ಗಂಜಳವನ್ನು ಚಿಮುಕಿಸಿ ಸ್ವಚ್ಛ ಮಾಡುತ್ತಾರೆ. ಸಿಹಿ ಅಡುಗೆ ಮಾಡಿ ಸಿಡುಬು ಅಮ್ಮನಿಗೆ ನೈವೇದ್ಯ ಮಾಡಿ ತಾಂಡದ ಮಕ್ಕಳನ್ನು ಕರೆದು ಪ್ರಸಾದವನ್ನು ಹಂಚುತ್ತಾರೆ. ಮನೆಯಲ್ಲೆಲ್ಲ ಸಿಹಿ ಊಟ ಮಾಡುತ್ತಾರೆ. ಇದರಿಂದ ಸಿಡುಬಿನ ಅಮ್ಮ ಸಂತೃಪ್ತಳಾಗುತ್ತಾಳೆಂಬ ನಂಬಿಕೆಯಿದೆ.

**೨. ಹಿರಿಯರಿಗೆ ಚಿಕಿತ್ಸೆ**

➢ **ದಮ್ಮು:** ಸಾಮಾನ್ಯವಾಗಿ ವೃದ್ಧರಿಗೆ ಬರುವ ಕಾಯಿಲೆ ಇದು. ಕರಿಮೆಣಸು, ವೀಳ್ಯದೆಲೆ, ಪನೆಬೆಲ್ಲ, ಬೆಳ್ಳುಳ್ಳಿ ಎರಡೆಸಳು, ಅಂತರಗಂಗೆ ಸೊಪ್ಪು, ಹಳೆಹುಣಸೆಹಣ್ಣು, ಜಗಳಗಂಟಿಸೊಪ್ಪು, ಕಕ್ಕೆಸೊಪ್ಪು, ಆಚಲ್‌ಸೊಪ್ಪು, ಒಂದು ಎಳೆಯ ಕೋಳಿಮರಿ ಇವುಗಳನ್ನೆಲ್ಲ ಒಟ್ಟಿಗೆ ಸೇರಿಸಿ ನುಣ್ಣಗೆ ಅರೆದು ಸಣ್ಣ ಸಣ್ಣ ಗುಳಿಗೆ ಮಾಡಿಟ್ಟುಕೊಂಡು ೮ ರಿಂದ ೧೦ ದಿನಗಳವರೆಗೆ ದಿನಕ್ಕೊಂದರಂತೆ ಗುಳಿಗೆ ನುಂಗಿದರೆ ದಮ್ಮು ಗುಣವಾಗುತ್ತದೆ. ಹಾಗೆಯೇ ದಮ್ಮು ಸೂಲು ಇರುವವರಿಗೆ ಕೆರೆ ಹಾವಿನ ಸಾರುಮಾಡಿ ಮಾಂಸ ತಿನ್ನಿಸಿ, ಅದರ ರಸ ಕುಡಿಸಿದರೆ ದಮ್ಮು ಸೂಲು ಕಡಿಮೆಯಾಗುತ್ತದೆ.

➢ **ಜ್ವರ:** ಲಂಬಾಣಿಗಳಿಗೆ ವಿಪರೀತ ಜ್ವರ ಬಂದಾಗ, ಒಂದು ಸಣ್ಣ ಮಡಕೆಯಲ್ಲಿ ನೀರು ಹಾಕಿ ಚೆನ್ನಾಗಿ ಕುದಿಸುತ್ತಾರೆ. ಕೆಂಡದೊಳಗಿನ ಬೆಣಚುಗಲ್ಲು ಕೆಂಪಗಾಗುತ್ತಿದ್ದಂತೆ, ಜ್ವರವಿರುವ ವ್ಯಕ್ತಿಯ ಬಳಿ ಕುದಿಯುತ್ತಿರುವ ನೀರಿನ ಮಡಕೆಯಿಟ್ಟು, ಅದರೊಳಗೆ ಕಾದ

ಬೆಣಚುಕಲ್ಲು ಹಾಕಿ, ನೀರಿನ ಶಾಖ ರೋಗಿಯ ಮುಖಕ್ಕೆ ತಾಗುವಂತೆ ಕೂರಿಸಿ ದಪ್ಪನಾದ ಕಂಬಳಿ ಹೊದಿಸುತ್ತಾರೆ. ಶಾಖದ ತಾಪದಿಂದಾಗಿ ರೋಗಿಯು ಚೆನ್ನಾಗಿ ಬೆವರುತ್ತಾರೆ. ಸ್ವಲ್ಪ ಸಮಯದ ನಂತರ ಕಂಬಳಿ ತೆಗೆದು ರೋಗಿಯನ್ನು ಒಂದು ಕಡೆ ಮಲಗಿಸುತ್ತಾರೆ. ಆತ ಇನ್ನಷ್ಟು ಬೆವರಿ ಜ್ವರದ ತಾಪದಿಂದ ಮುಕ್ತನಾಗುತ್ತಾನೆ.

➢ **ಕೈಕಾಲು ಸೆಳೆತಕ್ಕೆ:** ಸಪ್‌ಸೀಗೆಸೊಪ್ಪು, ಬೆಟ್ಟದ ನೆಲ್ಲಿಕಾಯಿ ಬೀಜ, ಮರಾಳೆ ಚಕ್ಕೆ, ಕರಿಬೇವಿನಸೊಪ್ಪು, ಕೊತ್ತಂಬರಿಸೊಪ್ಪು, ಜೀರಿಗೆ – ಇವನ್ನೆಲ್ಲ ನುಣ್ಣಗೆ ಅರೆದು, ಒಗ್ಗರಣೆ ಹಾಕಿ ಚೆನ್ನಾಗಿ ಕುದಿಸುತ್ತಾರೆ. ಈ ರಸವನ್ನು ಅವರು 'ಆಂಬ್ರಾ' ಎಂದು ಕರೆಯುತ್ತಾರೆ. ಇದೇ ರಸದಲ್ಲಿ ಅನ್ನ ಅಥವಾ ಮುದ್ದೆ ಊಟ ಮಾಡಿಸಿ, ಒಂದೊಂದು ಲೋಟ ರಸವನ್ನು ಕುಡಿಸುತ್ತಾರೆ. ಹೀಗೆ ಮೂರು ದಿನಗಳ ಕಾಲ ಕುಡಿದರೆ ಕ್ರಮೇಣ ಕೈಕಾಲು ಸೆಳೆತ ಕಡಿಮೆಯಾಗುತ್ತದೆ.

➢ **ನಂಜು:** ಮೈಗೆ ನಂಜಾಗಿ ಜ್ವರ ಬಂದರೆ, ನಂಜನಕೋಟು(ಕೊರಚ್ಲ)ವನ್ನು ತೇಯ್ದು ಒಂದು ಲೋಟ ನೀರಿನೊಂದಿಗೆ ಬೆರೆಸಿ ಕುಡಿಸುತ್ತಾರೆ. ಸ್ವಲ್ಪ ಮೈಕೈಗೆಲ್ಲ ಹಚ್ಚಿಕೊಳ್ಳುತ್ತಾರೆ. ಇದು ತುಂಬಾ ಕಹಿಯಾಗಿರುತ್ತದೆ. ಇದರಿಂದ ಜ್ವರ ಉಪಶಮನವಾಗುತ್ತದೆಂದು ಭಾವಿಸುತ್ತಾರೆ.

➢ **ಆಮಸಂಕೆ ಅಥವಾ ರಕ್ತಬೇಧಿ:** ರಕ್ತ ಬೇಧಿಯಾದರೆ, 'ಮುಟ್ಟಿದರೆ ಮುನಿ' ಸೊಪ್ಪನ್ನು ನುಣ್ಣಗೆ ಅರೆದು, ಮೊಸರಿನೊಂದಿಗೆ ಮಿಶ್ರಣಮಾಡಿ ಕುಡಿಸಿದರೆ ರಕ್ತಬೇಧಿ ನಿಲ್ಲುತ್ತದೆ. ಇದೇ ಕಾಯಿಲೆಗೆ ಸೂರ್ಯೋದಯಕ್ಕೆ ಮೊದಲು ಕಪ್ಪು ಬಣ್ಣದ ಕುರಿಯ ಹಾಲನ್ನು ನೇರವಾಗಿ ನಿಂಬೆಹಣ್ಣಿನ ಹೋಳಿಗೆ ಹಿಂಡಿ ತಕ್ಷಣವೇ ತಿನ್ನುತ್ತಾರೆ. ಮೂರು ದಿನ ನಿರಂತರವಾಗಿ ಹೀಗೆ ಮಾಡುತ್ತ ಬಂದರೆ ರಕ್ತಬೇಧಿಯು ಕಡಿಮೆಯಾಗುತ್ತದೆ.

➢ **ಕಣ್ಣುನೋವಿಗೆ:** ಉಷ್ಣಕ್ಕೆ ಕಣ್ಣು ಕೆಂಪಾಗಿ ಉರಿಯುತ್ತಿದ್ದರೆ, ಮರಾಳೆಕುಡಿ, ಸಣ್ಣ ಈರುಳ್ಳಿ, ಅರಿಶಿಣದ ಪುಡಿ– ಈ ಮೂರನ್ನು ಚೆನ್ನಾಗಿ ಜಜ್ಜಿ, ನೆತ್ತಿಗೆ ಮೆತ್ತಿ, ಅದರ ಮೇಲೆ ಮರಾಳೆ ಇಲ್ಲವೆ ಹರಳೆಲೆ ಇಟ್ಟು ಬಿಗಿಯಾಗಿ ಕಟ್ಟಿ ಮಲಗಿಕೊಂಡರೆ ಕಣ್ಣು ಕೆಂಪು ಹೋಗುವುದರೊಂದಿಗೆ, ಉರಿ ಕಡಿಮೆಯಾಗಿ ತಂಪಾಗುತ್ತದೆ.

➢ **ಒಳೇಟು:** ಶರೀರದ ಮೇಲೆ ಎಲ್ಲಿಯೂ ಗಾಯವಾಗದೆ ಒಳೇಟು ಬಿದ್ದು ಊದಿಕೊಂಡು ನೋವಾಗುತ್ತಿದ್ದರೆ, ಬಟ್ಟೆಸೋಪು, ಅರಿಶಿಣದ ಪುಡಿ, ಹುಣಸೆಹಣ್ಣು, ಸುಣ್ಣ– ಈ ನಾಲ್ಕನ್ನು ಅರೆದು ಸ್ವಲ್ಪ ಬಿಸಿಮಾಡಿ ಊತ ಬಂದಿರುವ ಜಾಗದಲ್ಲಿ ಲೇಪ ಹಾಕುತ್ತಾರೆ. ಇದರಿಂದ ನೋವು ಕಡಿಮೆಯಾಗುತ್ತದೆಂದು ನಂಬುತ್ತಾರೆ.

➤ **ಭುಜ, ತೊಡೆ, ಸಂದುನೋವಿಗೆ:** ಭುಜ ಅಥವಾ ತೊಡೆಗೆ ಪೆಟ್ಟು ಬಿದ್ದು ಅದು ತುಂಬಾ ಹಳೆಯದಾಗಿ ನಿರಂತರವಾಗಿ ನೋವು ಕೊಡುತ್ತಿದ್ದರೆ, ಮುಂಡುಗಳ್ಳಿ (ಜಾಡುತೋರ್‍ಯ) ಹಾಲನ್ನು ಒಂದು ಎಲೆಯನ್ನು ಕರೆದು ತಂದು ಕೆಂಡದ ಮೇಲಿಟ್ಟು ಬಿಸಿಮಾಡಿ ನೋವಿರುವ ಕಡೆಯಲ್ಲಿ ಲೇಪ ಹಾಕುತ್ತಾರೆ. ಇದೇ ರೀತಿ ಮೂರು ದಿನಗಳ ಕಾಲ ಮಾಡಿದರೆ ನೋವು ಶಮನವಾಗುತ್ತದೆ.

➤ **ಮೂತ್ರ ನಿಂತರೆ:** ಶರೀರದಲ್ಲಿ ಏನಾದರೂ ಏರುಪೇರಾದಾಗ ಮೂತ್ರ ನಿಂತುಬಿಡುತ್ತದೆ. ಹೊಟ್ಟೆಯೊಳಗೆ ಸಂಕಟವಾಗಿ ವ್ಯಕ್ತಿಯು ಸಂಕಟಪಡುತ್ತಿರುತ್ತಾನೆ. ಈ ಸಂದರ್ಭದಲ್ಲಿ ಗರಿಗರಿಯಾಗಿರುವ ನಾಲ್ಕು ಲೋಕ್ಸರ(ಕುಂವಾರ) ತಂದು ಒಂದೊಂದನ್ನು ನಾಲ್ಕು ಕಡೆ ಸಮನಾಗಿ ಕತ್ತರಿಸಿ, ಒಂದು ಕಡೆ ಮಾತ್ರ ಸಿಪ್ಪೆ ಸುಲಿದು, ರೋಗಿಯನ್ನು ಅಂಗಾತವಾಗಿ ಮಲಗಿಸಿ ಆತನ ಕೆಳಹೊಟ್ಟೆಯ ಮೇಲೆ ಲೋಕ್ಸರವನ್ನಿಟ್ಟು ಒಂದು ಬಟ್ಟೆಯಿಂದ ಬಿಗಿದು ಕಟ್ಟುತ್ತಾನೆ. ಹೀಗೆ ಮಾಡಿದ ಅರ್ಧ ಗಂಟೆಯೊಳಗೆ ಮೂತ್ರ ವಿಸರ್ಜನೆಯಾಗುತ್ತದೆ.

➤ **ಅರ್ಧತಲೆನೋವು:** ಅರ್ಧತಲೆನೋವು ಬಹಳ ದಿನಗಳಿಂದ ಇದ್ದು, ಯಾವುದೇ ಔಷಧಿಗಳಿಂದ ವಾಸಿಯಾಗದಿದ್ದಾಗ ಹಣೆಯ ಮೇಲಿನ ನರಗಳಿಂದ ರಕ್ತ ತೆಗೆಸುತ್ತಾರೆ. ಅರ್ಧ ಅಡಿ ಉದ್ದವಿರುವ ಕೋಲಿಗೆ ಬಿಳಿಯ ಕಲ್ಲಿನ ಚಕ್ಕೆಯನ್ನು ಕೊಡಲಿಯಂತೆ ಗಟ್ಟಿಯಾಗಿ ಕಟ್ಟುತ್ತಾರೆ. ಸೂರ್ಯೋದಯದ ಸಮಯದಲ್ಲಿ ರೋಗಿಯನ್ನು ಸೂರ್ಯಾಭಿಮುಖವಾಗಿ ಕುಳ್ಳರಿಸುತ್ತಾರೆ. ಉದ್ದನೆಯ ಬಟ್ಟೆಯಿಂದ ರೋಗಿಯ ಕುತ್ತಿಗೆಯನ್ನು ನಿಧಾನವಾಗಿ ಬಿಗಿಯುತ್ತಾರೆ. ರೋಗಿಯ ಗಂಟಲು ಬಿಗಿದಾಗ ಹಣೆಯ ಮೇಲೆ ನರಗಳು ಮೇಲಿಟ್ಟು ನಿಧಾನವಾಗಿ ಹೊಡೆಯುತ್ತಾರೆ. ನರಗಳೂ ಸೀಳಿ ರಕ್ತ ಸುರಿಯುತ್ತದೆ. ಒಂದೆರಡು ಕಡೆ ನರಗಳ ಮೇಲೆ ಗಾಯವನ್ನು ಮಾಡಿ ಸಾಕಷ್ಟು ರಕ್ತ ಹೊರಬರುವಂತೆ ಮಾಡುತ್ತಾನೆ. ಇದರಿಂದ ತಲೆನೋವು ವಾಸಿಯಾಗುತ್ತದೆ. ರಕ್ತ ಸೋರುವಿಕೆಯಿಂದ ಕಾಯಿಲೆಯನ್ನು ಗುಣಪಡಿಸುವ ವಿಧಾನ ಗುಡ್ಡಗಾಡು ಜನರಲ್ಲಿ ಆಚರಣೆಯಲ್ಲಿದೆ. ಇದು ಲಂಬಾಣಿಗಳಲ್ಲಿ ತಮ್ಮ ಜೀವಾನುಭವದಿಂದ ರೂಢಿಯಲ್ಲಿ ಬಂದಿರಬೇಕೆನಿಸುತ್ತದೆ.

➤ **ಗಾಯಕ್ಕೆ:** ಕಬ್ಬಿಣದ ವಸ್ತುಗಳಿಂದ ಕೈಕಾಲುಗಳಿಗೆ ಗಾಯಮಾಡಿಕೊಂಡಿದ್ದರೆ, ಅಡ್ಡಿಗೆ ಸೊಪ್ಪು(ಪಟ್ಯಾರ್ ಬಾಜಿ), ನಾಲ್ಕು ಹೆಸಳು ಬೆಳ್ಳುಳ್ಳಿ– ಇವೆರಡನ್ನು ಸೇರಿಸಿ ನುಣ್ಣಗೆ ಅರೆದು ಗಾಯಕ್ಕೆ ಮೆತ್ತಿ ಬಟ್ಟೆಯಿಂದ ಪಟ್ಟಿ ಕಟ್ಟಿ ಆಗಾಗ ತಣ್ಣೀರು ಸುರಿಯುತ್ತಾರೆ. ಹೀಗೆ ನಿರಂತರವಾಗಿ ಎಂಟುದಿನ ಮಾಡಿದರೆ ಗಾಯ ವಾಸಿಯಾಗುತ್ತದೆ. ರಕ್ತ ಜಿನುಗುತ್ತಿರುವ ಗಾಯಕ್ಕೆ ಕೃಷ್ಣಕಾಂತಿ ಸೊಪ್ಪಿನ ರಸತೆಗೆದು ಇಲ್ಲವೆ ಸೊಪ್ಪನ್ನು ಅರೆದು ಹಚ್ಚಿದರೆ ರಕ್ತ ಹರಿಯುವುದು ತಕ್ಷಣ ನಿಲ್ಲುತ್ತದೆ.

➢ **ಹಳದಿ ಕಾಮಾಲೆ:** ಕಣ್ಣು ಹಳದಿಯಾಗಿರುವುದು, ಉಗುರು ಹಳದಿಯಾಗಿರುವುದು ಮತ್ತು ಹಳದಿ ಮೂತ್ರ ಹೋಗುವುದು – ಇವು ಕಾಮಾಲೆ ರೋಗಿಯ ಲಕ್ಷಣಗಳು, ಈ ರೋಗದ ಶಮನಕ್ಕೆ ಇಂಗ್ಲೀಕದ ಮರ(ಇಂಗೋರಾರ್ ಜಾಡ್)ದ ರಂಬೆಯನ್ನು ಮುಂಗೈ ಉದ್ದದ ಸಣ್ಣ ಸಣ್ಣ ತುಂಡುಗಳನ್ನಾಗಿ ಕಡಿದು ತಂದು ಅದರೊಳಗಿನ ಬಿಳಿಸೇಗು ತೆಗೆದು ಬೀಸಾಡಿ ಕೇವಲ ಅದರ ಚಕ್ಕೆ ತೆಗೆದು ನುಣ್ಣಗೆ ಜಜ್ಜಿ, ಹಸುವಿನ ಹಾಲಿನ ಮಜ್ಜಿಗೆಯೊಳಗೆ ನೆನೆಸುತ್ತಾರೆ. ಚೆನ್ನಾಗಿ ನೆನೆದ ಮೇಲೆ, ಮಜ್ಜಿಗೆಯನ್ನು ಸೋಸಿ ಒಂದು ಲೋಟಕ್ಕೆ ಬಗ್ಗಿಸಿ, ರೋಗಿಗೆ ಮೂರು ಬಾರಿ ನೀವಾಳಿಸಿ, ಮೂರು ಹನಿ ನೆಲಕ್ಕೆ ಸಿಂಪಡಿಸಿ ಕುಡಿಸುತ್ತಾರೆ. ಇದಕ್ಕೆ ಅವರು 'ಮಜ್ಜಿಗೆಯಲ್ಲಿ ಔಷಧಿ ಕೊಡುವುದು' ಎನ್ನುತ್ತಾರೆ. ಔಷಧಿ ತೆಗೆದುಕೊಳ್ಳುತ್ತಿರುವ ಅಷ್ಟೂ ದಿನಗಳು ಮಜ್ಜಿಗೆಯೊಂದಿಗೆ ಮುದ್ದೆ ತಿಂದು ಪಥ್ಯವಿರುತ್ತಾರೆ. ಬೇಕಿದ್ದರೆ ಮಜ್ಜಿಗೆಯೊಂದಿಗೆ ಸಣ್ಣ ಈರುಳ್ಳಿ ನಂಚಿಕೊಳ್ಳಬಹುದು. ಮೂರು ಅಥವಾ ಏಳು ದಿನದ ನಂತರ ಕೋಳಿ ಕುಯ್ದು ಹದವಾಗಿ ಉಪ್ಪು ಖಾರ ಹಾಕಿ ಸಾರು ಮಾಡಿ ಬಿಸಿ ಬಿಸಿ ರಾಗಿ ಮುದ್ದೆಯೊಂದಿಗೆ ಉಣಬಡಿಸಿ ಪಥ್ಯ ಕೀಳುತ್ತಾರೆ. ಹೀಗೆ ಮಾಡಿದ ಮೇಲೆ ರೋಗಿ ಮೊದಲಿನ ಸ್ಥಿತಿಗೆ ಮರಳುತ್ತಾನೆ.

**3. ಮಹಿಳೆಯರಿಗೆ ಚಿಕಿತ್ಸೆ**

➢ **ಬಾಣಂತಿ ಜ್ವರಕ್ಕೆ:** ಸಂಜೆಯ ಸಮಯದಲ್ಲಿ ನಿಂಬೆಹಣ್ಣಿನ ಹೋಳಿಗೆ ಜೀರಿಗೆ ಪುಡಿಹಾಕಿ, ಮರಾಳೆ ಹಾಲನ್ನು ನೇರವಾಗಿ ನಿಂಬೆಹೋಳಿನ ಮೇಲೆ ಹಾಕಿ, ಜೀರಿಗೆ ಪುಡಿ, ನಿಂಬೆರಸ, ಮರಾಳೆ ಹಾಲು ಇವು ಮೂರು ಮಿಶ್ರಣವಾಗುವಂತೆ ಒಂದು ಕಡ್ಡಿಯಿಂದ ಚುಚ್ಚಿ, ರಾತ್ರಿ ಮನೆಯ ಮೇಲಿಟ್ಟು ಬೆಳಿಗ್ಗೆ ಖಾಲಿಹೊಟ್ಟೆಯಲ್ಲಿ ತಿನ್ನುತ್ತಾರೆ. ಹೀಗೆ ಮೂರು ದಿನ ಮಾಡಿದರೆ ಬಾಣಂತಿಜ್ವರ ಕಡಿಮೆಯಾಗುತ್ತದೆ.

➢ **ಬಿಳಿಸೆರಗಿನ ಚಿಕಿತ್ಸೆ:** ಮಹಿಳೆಯರಿಗೆ ಬಿಳಿಸೆರಗಿನ ಕಾಯಿಲೆಯಿದ್ದರೆ ನೀರ್ ಮತ್ತಿಮರ (ಕವ್ವಾರ್ ಝೂಡ್)ದ ಕೆಂಪು ಚಿಗುರು ತಂದು, ನೀರು ಸೋಕಿಸದೆ ನುಣ್ಣಗೆ ಅರೆದು ಮೂರು ಮಾತ್ರೆ ಮಾಡಿ, ಬೇಗನೆ ಹಂಬಿನ ಎಲೆಯಲ್ಲಿ ಕಟ್ಟಿ ಒಂದು ಡಬ್ಬದೊಳಗೆ ಹಾಕಿಡುತ್ತಾರೆ. ಕೆಂಪುರಾಗಿ ತಂದು ಚೆನ್ನಾಗಿ ಕುಟ್ಟಿ ಕುಸುಮ ತೆಗೆದು ರಾಗಿಕಲ್ಲಿನಲ್ಲಿ ಬೀಸುತ್ತಾರೆ. ಔಷಧಿ ಕೊಡುವ ಹಿಂದಿನ ದಿನ ರಾತ್ರಿ ಸಣ್ಣ ಈರುಳ್ಳಿ ಕುಯ್ದು, ರಾಗಿ ಅಂಬ್ಲಿ ಮಾಡಿ ಮುಚ್ಚಿಡುತ್ತಾರೆ. ಮಾರನೆ ಬೆಳಿಗ್ಗೆ ರೋಗಿಯನ್ನು ಕೂರಿಸಿ ಒಂದು ತಟ್ಟೆಯಲ್ಲಿ ರಾಗಿ ಅಂಬ್ಲಿ ಬಡಿಸಿ, ಅದಕ್ಕೆ ಸ್ವಲ್ಪ ನೀರು, ಒಂದು ಗುಳಿಗೆ ಹಾಕಿ ಚೆನ್ನಾಗಿ ಕದಡಿ ಕುಡಿಸುತ್ತಾರೆ. ಇದೇ ರೀತಿ ಮೂರು ದಿನ ಮಾಡುತ್ತಾರೆ. ರೋಗಿಯು ಅಂಬ್ಲಿ ಕುಡಿಯುತ್ತಿದ್ದಂತೆ

ಮತ್ತುಬಂದಂತೆ ವರ್ತಿಸುತ್ತಾಳೆ. ಮೂರು ದಿನ ಪಥ್ಯವಿರಿಸಿ ಸಿಹಿ ಬೇಳೆಸಾರು, ರಾಗಿಮುದ್ದೆ, ಕುದಿಸಲಕ್ಕಿ ಅನ್ನ ಊಟ ಕೊಡುತ್ತಾರೆ. ಹದಿನೈದು ದಿನಗಳ ಕಾಲ ಯಾವುದೇ ಶೀತಪದಾರ್ಥ ವನ್ನು ಉಪಯೋಗಿಸುವುದಿಲ್ಲ. ಅನಂತರ ಎಲ್ಲವನ್ನೂ ತಿನ್ನುತ್ತಾರೆ. ಹೀಗೆ ಮಡಿದಾಗ ಈ ಕಾಯಿಲೆಯು ಗುಣವಾಗುತ್ತದೆ.

➢ **ಕೆಂಪು-ಬಿಳುಪು ಹೋಗುವುದು:** ಅತ್ತಿಮರ(ಗುಲ್ಲರೇರ್ ಝಾಡ್)ದ ನೀರು, ಅಥವಾ ನೀರ್ ಮತ್ತಿಮರವನ್ನು ಆಶ್ರಯಿಸಿ ಬೆಳೆದ ಹಳದಿ ಹಂಬಿನ ನೀರು ತರುತ್ತಾರೆ. ನೀರು ತರುವ ಮುನ್ನ ಹಂಬಿನ ಬುಡವನ್ನು ಪೂಜಿಸಿ, ಶಾಸ್ತ್ರೋಕ್ತವಾಗಿ ಕಡಿದು ಅದರ ನೀರನ್ನು ಒಂದು ಚೊಂಬಿನಲ್ಲಿ ತುಂಬಿ ತರುತ್ತಾರೆ. ಕರಿಜೀರಿಗೆ, ಕಲ್ನಾರು, ಕಲ್ಲುಸಕ್ಕರೆ – ಇವನ್ನು ಅರೆದು ಪುಡಿಮಾಡಿ ಒಂದು ಡಬ್ಬದಲ್ಲಿ ಹಾಕಿಡುತ್ತಾರೆ. ಒಂದು ಲೋಟ ಹಳದಿ ಹಂಬಿನ ನೀರಿಗೆ ಒಂದು ಚಮಚ ಪುಡಿಯನ್ನು ಸೇರಿಸಿ ಕದಡಿ ರೋಗಿಗೆ ಕುಡಿಸುತ್ತಾರೆ. ಇದೇ ರೀತಿ ಮೂರು ದಿನ ಮಾಡುತ್ತಾರೆ. ಮೂರು ದಿನವೂ ಪಥ್ಯವಿದ್ದು, ನಿಷ್ಠೆಯಿಂದ ಔಷಧಿ ತೆಗೆದುಕೊಳ್ಳುತ್ತಾರೆ. ಈ ಕಾಯಿಲೆ ಕ್ರಮೇಣ ಗುಣಹೊಂದುತ್ತದೆ.

**೪. ಪಶುಗಳಿಗೆ ಚಿಕಿತ್ಸೆ:** ಲಂಬಾಣಿಗಳು ಅಲೆಮಾರಿಗಳಾದರೂ ವ್ಯಾಪಾರ, ದೊಂಬರಾಟ, ಪಶುಪಾಲನೆ, ಕೃಷಿಯಂತಹ ಅನೇಕ ವೃತ್ತಿಗಳನ್ನು ಒಂದಾಗಿತ್ತು. ಲಂಬಾಣಿಗಳ ಪೂರ್ವಜರು ಒಬ್ಬೊಬ್ಬರೇ ಸಾವಿರಾರು ದನಕರುಗಳನ್ನು ಇಟ್ಟುಕೊಂಡಿದ್ದು ಇತಿಹಾಸದ ಪುಟಗಳಿಂದ ತಿಳಿಯುತ್ತದೆ. ಆದುದರಿಂದ ದನಗಾಹಿಗಳಾದ ಇವರು ಅವುಗಳ ಖಾಯಿಲೆಯ ಗುಣಲಕ್ಷಣ ಗಳನ್ನು ಅಮೂಲಾಗ್ರವಾಗಿ ಬಲ್ಲವರೇ ಆಗಿದ್ದು ಯಾವ್ಯಾವ ರೋಗ ಅಮರಿಕೊಂಡಾಗ ದನಕರು ಕುರಿಗಳು ಹೇಗೇಗೆ ವರ್ತಿಸುತ್ತವೆ, ಯಾವ ಸ್ಥಿತಿಯಲ್ಲಿರುತ್ತವೆ ಎಂಬುದನ್ನು ಗ್ರಹಿಸಿ ಅದಕ್ಕೆ ತಕ್ಕ ಔಷಧಿಯನ್ನು ಕೊಡುತ್ತಾರೆ. ಈ ಔಷಧಿಗಳು ಕೂಡ ಹೆಚ್ಚು ಬೆಳೆಯುಳ್ಳದ್ದೇನೂ ಆಗಿರದೆ ವನಸ್ಪತಿ ಮೂಲದ್ದೇ ಆಗಿರುತ್ತದೆ.

➢ **ಕಾಲುಬಾಯಿ ರೋಗಕ್ಕೆ:** ಈ ರೋಗ ತಗುಲಿದ ದನಗಳು ಹುಲ್ಲು ಮೇಯದೆ ಒಂದೆಡೆ ಸುಮ್ಮನೆ ನಿಂತುಕೊಂಡು, ಕೆಲವು ದಿನಗಳ ನಂತರ ಸಾವನ್ನಪ್ಪುತ್ತವೆ. ರೋಗದ ಲಕ್ಷಣಗಳು ತಿಳಿದು, ತಕ್ಷಣ ಈ ಜನರು ಕೆಸರಿರುವ ಕೆರೆಯ ಅಂಚಿನಲ್ಲಿ ರೋಗ ತಗುಲಿರುವ ದನವನ್ನು ಚೆನ್ನಾಗಿ ಓಡಾಡಿಸುತ್ತಾರೆ. ಹೀಗೆ ಮಾಡಿದರೆ ಕಾಲುಬಾಯಿ ರೋಗ ವಾಸಿಯಾಗು ತ್ತದೆಂದು ನಂಬುತ್ತಾರೆ.

➢ **ಸೆಲೆರೋಗಕ್ಕೆ:** ರೋಗವು ದನಗಳಿಗೆ ಕಾಲಕಾಲಕ್ಕೆ ಸರಿಯಾಗಿ ನೀರು ಕುಡಿಸದಿರುವುದರಿಂದ ಬರುತ್ತದೆ ಎಂಬುದಾಗಿ ಈ ಜನರು ತಿಳಿದಿದ್ದಾರೆ. ರೋಗ ತಗುಲಿದ ದನಗಳು ಮೇವು ತಿನ್ನದೆ ಜೊಲ್ಲು ಸುರಿಸುತ್ತಾ ಸುಮ್ಮನೆ ನಿಂತಿರುತ್ತವೆ. ಸರಿಯಾದ ಸಮಯಕ್ಕೆ ಸೂಕ್ತ ಚಿಕಿತ್ಸೆ ದೊರೆಯದಿದ್ದರೆ ಸದ್ದಿಲ್ಲದೆ ಸಾಯುತ್ತವೆ. ರೋಗ ತಗುಲಿದ ದನಗಳ ನಾಲಿಗೆಯನ್ನೆಳೆದು ನಾಲಿಗೆಯ ಅಡಿಯಲ್ಲಿರುವ ನರಗಳಿಗೆ ಸೂಜಿಯಿಂದ ಹತ್ತಾರು ಬಾರು ಚುಚ್ಚುತ್ತಾರೆ. ಸಾಕಷ್ಟು ರಕ್ತ ಸುರಿದ ನಂತರ ಉಪ್ಪು, ಮೆಣಸಿನ ಪುಡಿಯನ್ನು ನಾಲಿಗೆಗೆ ಉಜ್ಜುತ್ತಾರೆ. ಇದರೊಂದಿಗೆ ಕೋಳಿ ಗೆಣಸನ್ನು ಕಲ್ಲಿನ ಮೇಲೆ ತೇಯ್ದು ದನಗಳ ಬಾಯೊಳಗೆ ಹಾಕಿ ಚೆನ್ನಾಗಿ ಉಜ್ಜುತ್ತಾರೆ. ಇದರಿಂದ ರೋಗ ನಿವಾರಣೆಯಾಗುತ್ತದೆ.

➢ **ಹಾವು ಕಚ್ಚಿದ್ದಕ್ಕೆ:** ಕಾಡಿನಲ್ಲಿ ಸಿಗುವ ಒಂದು ಬೇರು(ಹೆಸರು ಹೇಳುವುದಿಲ್ಲ) ತಂದು ಅದನ್ನು ಒಣಗಿಸಿ ಮನೆಯಲ್ಲಿ ಇಟ್ಟುಕೊಂಡಿರುತ್ತಾರೆ. ಈ ದನಗಳಿಗೆ ಹಾವು ಕಚ್ಚಿರುವುದು ತಿಳಿದು ಬಂದರೆ ಬೇರನ್ನು ತೇಯ್ದು, ಅದನ್ನು ನೀರು ಅಥವಾ ಮಜ್ಜಿಗೆಯೊಂದಿಗೆ ಬೆರೆಸಿ ಕುಡಿಸುತ್ತಾರೆ. ಅಲ್ಲದೆ ಕಚ್ಚಿದ ಭಾಗಕ್ಕೆ ಸ್ವಲ್ಪ ಹಚ್ಚುತ್ತಾರೆ. ಇದರಿಂದ ಹಾವು ಕಚ್ಚಿದ ವಿಷವು ಇಳಿಯುತ್ತದೆ. ದನವು ಗುಣಹೊಂದುತ್ತದೆ.

ಲಂಬಾಣಿಗಳು ರೋಗ ನಿವಾರಣೆಗಾಗಿ ಬಳಸುವ ಗಿಡಮೂಲಿಕೆಗಳಲ್ಲಿ ಅನೇಕ ತಲೆಮಾರುಗಳ ಅನುಭವವಿದೆ.ಅವರು ಬಳಸುವ ಮೂಲಿಕೆಗಳು ಸುಲಭ ಲಭ್ಯವಿದ್ದು ಸೂಕ್ತ ಬಳಕೆಯಿಂದ ಖಾಯಿಲೆಗಳು ನಿವಾರಣೆಯಾಗುತ್ತವೆ. ಹಿಂದೆ ಲಂಬಾಣಿಗಳು ತಮ್ಮ ಯಾವುದೇ ಬಗೆಯ ರೋಗರುಜಿನ ಮೊದಲಾದವುಗಳಿಗೆ ತಾವೇ ನಾಟಿ ಔಷಧಿಗಳನ್ನು ಬಳಸುತ್ತಿದ್ದರು. ಆದರೆ ಈಗ ಇತರರಂತೆ ಅವುಗಳಿಗಾಗಿ ಆಸ್ಪತ್ರೆಗಳಿಗೆ ಹೋಗಿ ಚಿಕಿತ್ಸೆ ಪಡೆಯುತ್ತಿದ್ದಾರೆ. ಹೀಗೆ ಲಂಬಾಣಿಗಳು ಇಂದು ಸಾಮಾಜಿಕ ಪರಿವರ್ತನೆಯ ಪ್ರಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದರ ಹಿನ್ನಲೆಯಲ್ಲಿ ಇವರ ಜನಪದ ವೈದ್ಯ ಪದ್ಧತಿ ತನ್ನ ಮೌಲ್ಯವನ್ನು ಕಳೆದುಕೊಳ್ಳುತ್ತಿದೆ. ಹೆಚ್ಚಿನವರು ಕಾಡುಗಳ ನಡುವೆ ಅವರೊಂದಿಗಿದ್ದು, ಅವರ ಜನಪದ ವೈದ್ಯವನ್ನು ವಿಶೇಷವಾಗಿ ಅಧ್ಯಯನ ಮಾಡಿದರೆ ನಮ್ಮ ಜಾನಪದ ನಿಧಿಯೊಂದನ್ನು ಉಳಿಸಿ ಕೊಂಡಂತಾಗುವುದು. ಈ ತಲೆಮಾರಿಗೆ ಅಂತ್ಯಗೊಳ್ಳುವ ಈ ನಿಧಿಯನ್ನು ಹಲವು ರೀತಿಯಲ್ಲಿ ರಕ್ಷಣೆ ಮಾಡಬೇಕಾದುದು ಅಗತ್ಯ.



ಅಧ್ಯಾಯ ಮೂರು

# ಬಂಜಾರ ಸಮುದಾಯದಲ್ಲಿ ಬಂಧುತ್ವ

## ಅಧ್ಯಾಯ ಮೂರು

# ಬಂಜಾರ ಸಮುದಾಯದಲ್ಲಿ ಬಂಧುತ್ವ

ಬಂಜಾರ ಮೂಲದ ಬಗ್ಗೆ ವಿದ್ವಾಂಸರಲ್ಲಿ ಅನೇಕ ಭಿನ್ನಾಭಿಪ್ರಾಯಗಳಿವೆ. ಆದರೂ ಅವರ ಮೂಲವನ್ನು ಕಂಡುಹಿಡಿಯುವಲ್ಲಿ ಅವರ ವಂಶ, ಕುಲ, ಪರಂಪರೆಗಳನ್ನು ಗಮನಿಸುವುದು ಅಗತ್ಯವಾಗಿದೆ. ರಾಜಸ್ಥಾನದ ರಜಪೂತ, ಗುರ್ಜರ, ಮಾರವಾಡಿ ಉಪಜಾತಿಗಳಲ್ಲಿ ಕಾಣುವ ರೀತಿ–ನೀತಿ, ಪರಂಪರೆ, ಹಬ್ಬ–ಹರಿದಿನಗಳು, ಅವರ ಆಚಾರ–ವಿಚಾರ, ನಡೆ–ನುಡಿ, ಊಟೋಪಚಾರ ಹಾಗೂ ಇತ್ಯಾದಿಗಳನ್ನು ಸಾಧಾರಣವಾಗಿ ಬಂಜಾರರಲ್ಲೂ ಕಾಣಬಹುದು. ಬಂಧುತ್ವದ ದೃಷ್ಠಿಯಲ್ಲಿ ಈ ಮೂರು ಸಮಾಜಗಳಲ್ಲಿನ ವೈವಾಹಿಕ ಸಂಪ್ರದಾಯಗಳು ಹೆಚ್ಚು ಸಾಮ್ಯತೆಯನ್ನು ಹೊಂದಿವೆ. ಉಪಜಾತಿಗಳಲ್ಲಿಯೂ ಪರಸ್ಪರ ಹೋಲಿಕೆ ಇರುವುದರಿಂದ ರಜಪೂತ ಲಂಬಾಣಿಗರ ಜೊತೆ ಬಂಜಾರರ ಸಂಬಂಧವಿರುವುದು ಕಂಡುಬರುತ್ತದೆ.

ಪ್ರತಿಯೊಂದು ಸಮಾಜದಲ್ಲಿ ಲೈಂಗಿಕ ಸಂಬಂಧವನ್ನು ಮತ್ತು ಪ್ರಜೋತ್ಪತ್ತಿಯನ್ನು ಕ್ರಮಬದ್ಧಗೊಳಿಸುವ ನಿಯಮಗಳಿವೆ. ಆದರೆ ಈ ನಿಯಮಗಳು ಸಮಾಜದಿಂದ ಸಮಾಜಕ್ಕೆ ಭಿನ್ನವಾಗಿವೆ. ಉದಾಹರಣೆಗೆ ಬಹುತೇಕ ಆಫ್ರಿಕಾ ದೇಶದ ಸಮಾಜಗಳು ವಿವಾಹವಾಗುವುದಕ್ಕೆ ಮುಂಚೆ ನಡೆಯುವ ಲೈಂಗಿಕ ಸಂಬಂಧವನ್ನು ಕಾನೂನುಬದ್ಧ ಅಥವಾ ಸಮಾಜ ಒಪ್ಪಿತ

ಎಂದು ಪರಿಗಣಿಸಲಾಗಿದೆ. ಈ ಸಮಾಜದಲ್ಲಿ ಅವರು ನಿರೀಕ್ಷಿಸುವುದೇನೆಂದರೆ ಸಾಮಾಜಿಕವಾಗಿ ಅಧಿಕೃತ ಒಪ್ಪಿಗೆಯಿಲ್ಲದೆ ಮಕ್ಕಳ ಜನನಕ್ಕೆ ಅವಕಾವಿಲ್ಲವೆಂದೂ, ಆ ಅವಕಾಶವಿರುವುದು ವಿವಾಹದ ನಂತರವೇ ಎಂಬುದು ಸ್ಪಷ್ಟವಾಗಿರುತ್ತದೆ. ಒಂದು ವೇಳೆ ಇಂತಹ ನಿಯಮಗಳನ್ನು ದಿಕ್ಕರಿಸಿ ಲೈಂಗಿಕ ಸಂಪರ್ಕ ಏರ್ಪಡಿಸಿಕೊಂಡು ಶಿಶುಜನನಕ್ಕೆ ಕಾರಣಳಾದ ಯುವತಿಯನ್ನು ಸಮಾಜದಿಂದ ಬಹಿಷ್ಕರಿಸಲಾಗುತ್ತದೆ. ಲೈಂಗಿಕ ಸಂಬಂಧಕ್ಕೆ ಸಾಮಾಜಿಕ ಒಪ್ಪಿಗೆ ಅಗತ್ಯವನ್ನು ಈ ಬಹಿಷ್ಕಾರವು ತಿಳಿಸುತ್ತದೆ.[೧]

ವಿವಾಹಕ್ಕೆ ಸಂಬಂಧಿಸಿದ ಹಲವಾರು ನಿಯಮಗಳೂ ಕೂಡ ಸಾಕಷ್ಟು ವೈವಿಧ್ಯಮ ವಾದವುಗಳು ಪಂಗಡದೊಳಗೇ ವಿವಾಹವಾಗಬೇಕೆನ್ನುವ ಒಳಪಂಗಡ ವಿವಾಹ, ಪಂಗಡದ ಹೊರಗಡೆಯೇ ವಿವಾಹವಾಗಬೇಕೆನ್ನುವ ಹೊರಪಂಗಡ ವಿವಾಹ ಹಾಗೆಯೇ ಅತ್ಯಂತ ಸಮೀಪ ಬಂಧುಗಳೊಂದಿಗೆ ಲೈಂಗಿಕ ಹಾಗೂ ವಿವಾಹ ಸಂಬಂಧವನ್ನು ಹೊಂದಿರ ಬಾರದೆನ್ನುವ 'ಆಗಮ್ಯಗಮನ ನಿಷೇದ' ಇವು ಸಾರ್ವತ್ರಿಕವಾದ ಸ್ವರೂಪದವುಗಳೆನ್ನಬಹುದಾದ ನಿಯಮಗಳಿದ್ದರೂ, ಅವುಗಳ ಅರ್ಥ ವ್ಯಾಪ್ತಿ ಹಾಗೂ ಅನುಸರಣೀಯ ರೀತಿ ಸಮೂಹದಿಂದ ಸಮೂಹಕ್ಕೆ ಬೇರೆಯಾಗಿರುತ್ತವೆ. ವಿವಾಹವು ಸಾಮಾನ್ಯವಾಗಿ ಸಾರ್ವಜನಿಕವಾಗಿ ನೆರವೇರು ವಂತಹ ಒಂದು ವಿಧಿ, ಸಾಂಪ್ರದಾಯಿಕ ಸಮಾಜಗಳಲ್ಲಿ ಇದಕ್ಕೆ ಧರ್ಮದ ಸಮ್ಮತಿ ಮುದ್ರೆಯೊಂದಿಗೆ ಆಶೀರ್ವಾದವು ಲಭಿಸುವುದು. ಹಾಗೆಯೇ ವಿವಾಹವು ವ್ಯಕ್ತಿಗಳಿಗೆ ಅವರ ಕರ್ತವ್ಯ ಹಾಗು ಹೊಣೆಗಾರಿಕೆಗಳ ಬಗ್ಗೆ ಮನವರಿಕೆ ಮಾಡಿಕೊಡುವುದು.

ವಿದ್ವಾಂಸರಲ್ಲಿ ಏನೇ ಅಭಿಪ್ರಾಯಗಳಿದ್ದರೂ ಬಂಜಾರರ ಮೂಲಸ್ಥಾನವು ರಾಜಸ್ಥಾನ ಎಂಬುದರಲ್ಲಿ ಎರಡು ಮಾತಿಲ್ಲ. ಇದಕ್ಕೆ ಅನೇಕ ಆಧಾರಗಳು ಅವರ ಕುಲ-ಗೋತ್ರ, ಸಂಸ್ಕಾರ ಭಾಷೆ ಮತ್ತು ಸಾಹಿತ್ಯಗಳಲ್ಲಿ ಲಭ್ಯವಾಗುತ್ತವೆ. ಅಲ್ಲದೆ ರಾಜಸ್ಥಾನದ ರಜಪೂತ, ಮಾರವಾಡಿ ಗುರ್ಜರ ಮೊದಲಾದ ಜನರ ಸಂಸ್ಕೃತಿಗಳಲ್ಲಿ ಕಂಡುಬರುವ ಕುಲ-ಗೋತ್ರ, ಆಚಾರ-ವಿಚಾರ, ಹಬ್ಬ-ಹರಿದಿನ ಮುಂತಾದವುಗಳಲ್ಲಿ ಸಾಮ್ಯತೆಯು ಗೋಚರಿಸುತ್ತದೆ. ಹೀಗಾಗಿ ಈ ಸಮಾಜಗಳು ಒಂದೇ ಮೂಲದಿಂದ ಒಂದೇ ಗೋತ್ರದಿಂದ ಉಗಮವಾಗಿ ತದನಂತರದಲ್ಲಿ ಬೇರೆ ಬೇರೆಯಾಗಿರುವಂತೆ ತೋರುತ್ತದೆ.ರಜಪೂತರೊಂದಿಗೆ ಲಂಬಾಣಿಗರ ಸಂಬಂಧವಿದ್ದು ಅವರ ಮೂಲ ವಾಸಸ್ಥಾನ ರಾಜಸ್ಥಾನ ಇಲ್ಲವೆ ಮಾರವಾಡವೇ ಆಗಿದೆ ಎಂಬುದು ತರ್ಕರಹಿತ ಸಂಗತಿಯಾಗಿದೆ. ಇತಿಹಾಸಕಾರರಾದ **ಟಾಡ್** ಸಾಹೇಬರು

---

೧. ವೆಸ್ಟರ್ ಮಾರ್ಕ್, "ಹಿಸ್ಟರಿ ಆಫ್ ಹ್ಯೂಮನ್ ಮ್ಯಾರೇಜ್".

ರಾಜಸ್ಥಾನದ ವ್ಯಾಪಾರಿ ವರ್ಗದಲ್ಲಿ ಒಂಟೆಯ ಮೇಲೆ ಸಾಮಾನುಗಳನ್ನು ಹೇರಿಕೊಂಡು ವ್ಯಾಪಾರ ಮಾಡುವ ಭೂಮಿಯ ಹೆಸರಿಸಿ ಒಂದು ಜಾತಿ ಜನಾಂಗವಿತ್ತು. ಈ ಭೂಮಿಯ ಜಾತಿಯ ಜನರೇ ಮುಂದುವರೆದು ತಮ್ಮನ್ನು ಬಂಜಾರ ಎಂದು ಕರೆಯಿಸಿ ಕೊಂಡಿರಬೇಕೆಂಬ ಅಭಿಪ್ರಾಯ ನೀಡಿರುವುದುಂಟು. ಬಂಜಾರರ ಮೂಲವನ್ನು ದ್ರಾವಿಡರಲ್ಲಿ ಕಾಣಬಹುದಾಗಿದೆ. ದ್ರಾವಿಡರಾದ ಇವರು ತದನಂತರದಲ್ಲಿ ಆರ್ಯರಾಗಿ ರಾಜಸ್ಥಾನದಲ್ಲಿ ರಜಪೂತರಾದರೆಂದು ಅಭಿಪ್ರಾಯ ಹೊಂದಿದ್ದಾರೆ.[೨] ಇದೇ ಅಭಿಪ್ರಾಯ ಬರುವಂತೆ ಇತಿಹಾಸ ತಜ್ಞರಾದ **ವಾಟ್‌ಸನ್** ಅವರು ರಜಪೂತರು ಅನಾರ್ಯರಾಗಿದ್ದು, ಯುದ್ಧ ವೀರರಾಗಿದ್ದರು. ಅವರನ್ನು ಸೂರ್ಯ ಮತ್ತು ಚಂದ್ರ ವಂಶಜರೆಂದು ಗುರ್ತಿಸಲಾಗುತ್ತಿತ್ತು ಎಂದಿದ್ದಾರೆ.

ಬಂಜಾರರ ಜನಸಂಖ್ಯೆಯನ್ನು ನಿರ್ಧಿಷ್ಟವಾಗಿ ದಾಖಲಿಸುವುದು ಒಂದು ದೊಡ್ಡ ಸಮಸ್ಯೆಯೇ ಆಗಿದೆ. ಉತ್ತರ ಮತ್ತು ಮಧ್ಯ ಭಾರತದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬರುತ್ತಾರೆ. ದಕ್ಷಿಣ ಭಾರತದಲ್ಲಿ ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ಕರ್ನಾಟಕದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸವಾಗಿದ್ದಾರೆ. ಕರ್ನಾಟಕದಲ್ಲಿ ಇವರು ಸಾಮಾನ್ಯವಾಗಿ ಎಲ್ಲಾ ಜಿಲ್ಲೆಗಳಲ್ಲಿಯೂ ವಾಸವಾಗಿದ್ದಾರೆ.[೩]

## ೩.೧ ಬಂಧುತ್ವ ಪರಿಕಲ್ಪನೆ

ಬಂಧುತ್ವ ವ್ಯವಸ್ಥೆಯು ಸಾಮಾಜಿಕ ಸಂರಚನೆಯ ಒಂದು ಭಾಗವಾಗಿದೆ. ಮಾನವಶಾಸ್ತ್ರಜ್ಞ ಡಬ್ಲ್ಯೂ.ಹೆಚ್. ರಿವರ್ಸ್ ಹೇಳುವಂತೆ ಸಾಮಾಜಿಕವಾಗಿ ಅಂಗೀಕೃತವಾದ ಶಾರೀರಿಕ ಸಂಬಂಧ ಗಳೇ ಬಂಧುತ್ವ ಎನ್ನಲಾಗಿದೆ. ಸಂತಾನೋತ್ಪತ್ತಿಯ ಆಧಾರದ ಮೇಲೆ ರಚಿತವಾದ ಬಂಧ–ಬಾಂಧವ್ಯವೇ ಬಂಧುತ್ವ.ಮಾನವರನ್ನು ಸಮೂಹ ಜೀವನಕ್ಕಾಗಿ ಒಂದುಗೂಡಿಸಿರುವ ಬಂಧಗಳಲ್ಲಿ ಅತಿಮುಖ್ಯವಾದ ಸಾರ್ವತ್ರಿಕವೂ, ಮೂಲಭೂತ ಸ್ವರೂಪದ್ದೂ ಮತ್ತು ಸಂತಾನೋತ್ಪತ್ತಿಯ ಆಧಾರದ ಮೇಲೆ ರಚಿತವಾದ ಬಂಧವನ್ನು ಬಂಧುತ್ವ ಎನ್ನಬಹುದು. ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಲ್ಲಿ 'ಬಂಧುತ್ವ'ವೆಂಬ ಪರಿಕಲ್ಪನೆಯನ್ನು ರಕ್ತಸಂಬಂಧಗಳ ಅಥವಾ ವಿವಾಹದ ಮೂಲಕ ಉತ್ಪನ್ನವಾಗುವ ಸಾಮಾಜಿಕ ಸಂಬಂಧಗಳ ಸಮಷ್ಠಿಯನ್ನು ಸೂಚಿಸಲು ಬಳಸಲಾಗುತ್ತಿದೆ. ಹಾಗೆಯೇ 'ಅಂಗೀಕೃತವಾದ ಶಾರೀರಿಕ ಸಂಬಂಧಗಳನ್ನು ಬಂಧುತ್ವ' ಎಂದು ಕರೆದಿದ್ದಾರೆ. ಸರಳ ಸಮಾಜಗಳಲ್ಲಿ ಬಂಧುತ್ವ ಸಂಬಂಧಗಳು

---

೨. ಡಾ. ಗ್ರಿಯರ್‌ಸನ್, "ರಜಪುತಾನ", ೧೯೦೭, ಪು. ೨೦೫.

೩. ಡಾ. ಡಿ.ಬಿ. ನಾಯಕ, "ಲಂಬಾಣಿ ಜಾನಪದ ಸಾಹಿತ್ಯ", ೨೦೦೦, ಪು. ೫–೧೦.

ಎಷ್ಟೊಂದು ವಿಸ್ತೃತವಾಗಿ ಹಾಗೂ ಪ್ರಮುಖವಾಗಿರುತ್ತವೆ ಎಂದರೆ ಅವು ಈ ಸಮಾಜಗಳ ಸಮಸ್ತ ಸಾಮಾಜಿಕ ವ್ಯವಸ್ಥೆಯನ್ನು ಪ್ರತಿನಿಧಿಸುತ್ತವೆ. ಈ ಕಾರಣದಿಂದಾಗಿಯೇ ಬಂಧುತ್ವದ ಪರಿಕಲ್ಪನೆಯು, ಮಾನವಶಾಸ್ತ್ರಜ್ಞರಿಗೆ ಬಹಳ ಪ್ರಮುಖವಾದುದಾಗಿದೆ.[೪]

ವಿವಾಹ ಸಂಬಂಧದ ಮೂಲಕ ಅಥವಾ ಸಾಮಾನ್ಯ ಪೂರ್ವಜನೊಬ್ಬನ ವಂಶಕ್ಕೆ ಸೇರಿರುವ ಹಿನ್ನಲೆಯಲ್ಲಿ ಪರಸ್ಪರ ಸಂಬಂಧಿತರಾದ ಜನರ ವರ್ತನೆಗೆ ಒಂದು ಮಾದರಿಯಾಗಿ ಮತ್ತು ಅಪವರ್ತನೆಯ ನಿಯಂತ್ರಕ ಶಕ್ತಿಯಾಗಿ ಕಾರ್ಯವೆಸಗುವಂತಹ ಅಂತಸ್ತುಗಳು ಮತ್ತು ಪಾತ್ರಗಳ ಪರಂಪರಾಗತ ವ್ಯವಸ್ಥೆಯನ್ನು ಬಂಧುತ್ವ ವ್ಯವಸ್ಥೆ ಎನ್ನಬಹುದಾಗಿದೆ.

ಬಂಧುತ್ವ ಎಂಬುದು ಒಂದು ಸಾರ್ವತ್ರಿಕ ವ್ಯವಸ್ಥೆಯಾಗಿರಲು ಉನ್ನತ ಸಸ್ತನಿಗಳಾದ ಪ್ರಾಮುಖಿಗಳಲ್ಲಿ ಕಂಡುಬರುವ ಕೆಲವಷ್ಟು ಅಂಶಗಳು ಉದಾಹರಣೆಗೆ ಗಂಡಿನ ಪ್ರಾಧಾನ್ಯತೆ, ಶ್ರೇಣಿ ವ್ಯವಸ್ಥೆ, ಪ್ರಾದೇಶಿಕತೆ, ಸಮೂಹ, ಸಹಕಾರ, ಲೈಂಗಿಕ ವರ್ತನೆ, ಕೆಲವು ನಿಯಮ ಗಳಿಗೆ ಬದ್ಧವಾಗಿರುವಿಕೆ ಹಾಗೂ ಎಳೆಯರಿಗೆ ಸಂಸ್ಕಾರ ನೀಡುವಿಕೆ ಇತ್ಯಾದಿಗಳು. ಮಾನವ ಮಟ್ಟದಲ್ಲಿ ಇನ್ನಷ್ಟು ಬಲವಾಗಿ ಮುಂದುವರೆದಿರುವುದೇ ಕಾರಣವೆಂದು ರಾಬಿನ್ ಪಾರ್ಕ್ಸ್ ಅಭಿಪ್ರಾಯ ಪಡುತ್ತಾರೆ.

ಜಾತಿ ಸಂರಚನೆಯನ್ನು ಅರ್ಥಮಾಡಿಕೊಳ್ಳುವುದರ ಮೂಲಕ ಸಾಮಾಜಿಕ ಸಂರಚನೆಗಳು ಮತ್ತು ಪ್ರಕ್ರಿಯೆಗಳ ಹಿನ್ನಲೆಯಲ್ಲಿನ ಬಂಧುತ್ವ ವ್ಯವಸ್ಥೆಯನ್ನು ತಿಳಿಸುವುದೇ ಆಗಿದೆ. ಮುಂದುವರೆಯುತ್ತಾ, ಭಾರತದ ವಿವಿಧ ವಲಯಗಳಲ್ಲಿ ಕಂಡುಬರುವ ಬಂಧುತ್ವ ವ್ಯವಸ್ಥೆ ಅತ್ಯಂತ ಕ್ಲಿಷ್ಟಕರ ಮತ್ತು ಸಮರ್ಪಕವಾಗಿದ್ದು ಮಾನವಶಾಸ್ತ್ರೀಯ ಸಂಶೋಧನಾ ವಿಶ್ಲೇಷಣೆಗೆ ಪೂರಕವಾಗಿದೆ.[೫]

ಬಂಧುತ್ವ ಎಂದರೆ ಒಬ್ಬ ವ್ಯಕ್ತಿಯ ಅಥವಾ ಒಂದು ಸಮಾಜದ ನಕಟ ಹಾಗೂ ದೂರದ ಬಂಧು ಬಳಗವನ್ನು ತಾತ್ತ್ವಿಕವಾಗಿ ಸೂತ್ರಿಕರಿಸುವ ಮತ್ತು ಅಂತಹ ಬಾಂಧವ್ಯವನ್ನು ರೂಪಿಸಿಕೊಳ್ಳುವ ವಿಧಾನ. ಬಂಧುತ್ವವು ಪ್ರತಿಯೊಂದು ಮಾನವ ಸಮಾಜದ ಸಾಮಾಜಿಕ ವ್ಯವಸ್ಥೆಯ ಅಡಿಪಾಯವಾಗಿದ್ದು ಸಾಮಾಜಿಕ ವ್ಯವಸ್ಥೆಯ ಹಿನ್ನೆಲೆಯು ಬಂಧುತ್ವವನ್ನು ಆಧರಿಸಿರುತ್ತದೆ. ಪ್ರತಿಯೊಂದು ಸಮುದಾಯದಲ್ಲಿಯೂ ಅಥವಾ ಸಮಾಜದಲ್ಲಿಯೂ

---

೪. ಡಬ್ಲ್ಯೂ.ಜೆ.ಆರ್.ರಿವರ್ಸ್, "ದಿ ತೋಡಾ", ೧೯೦೬.

೫. ಐರಾವತಿಕರ್ವೆ, "ಕಿನ್‌ಶಿಪ್ ಆರ್ಗನೈಷೇಶನ್ ಇನ್ ಇಂಡಿಯಾ", ೧೯೫೩-೯೮,

ಪ್ರತಿಯೊಬ್ಬ ವ್ಯಕ್ತಿಯ ಪ್ರತಿಷ್ಠೆ ಹಾಗೂ ಸ್ಥಾನಮಾನಗಳೆಲ್ಲವು ಆತನ ಹುಟ್ಟಿನಿಂದಲೇ ಬಂದಂತಹವಾಗಿರುತ್ತದೆ. ಹೀಗೆ ಆ ವ್ಯಕ್ತಿಯ ಹುಟ್ಟಿನ ಹಿನ್ನೆಲೆಯ ಆಧಾರದಿಂದ ಆತನನ್ನು ಗುರುತಿಸುವಲ್ಲಿ ಮೂಲಾಧಾರವಾದ ವ್ಯವಸ್ಥೆಯೇ ಬಂಧುತ್ವ

ಬಂಧುತ್ವವು ಕೂಡ ಕುಟುಂಬದ ಹಾಗೆಯೇ ಸಾಮಾಜಿಕ ರಚನೆಯ ಮೂಲಭೂತ ಮತ್ತು ಪ್ರಾಚೀನ ತಳಹದಿಗಳಲ್ಲಿ ಇದು ಒಂದು ಸಾಮಾಜಿಕ ಘಟಕವಾಗಿದೆ. ಇದು ವ್ಯಕ್ತಿಗಳನ್ನು ಒಗ್ಗೂಡಿಸುವ ಪ್ರಾಥಮಿಕ ಬಂಧನವು ಕೂಡ ಆಗಿದೆ. ಬಂಧುತ್ವವು ವಿವಿಧ ವ್ಯಕ್ತಿಗಳ ನಡುವಿನ ಸಂಬಂಧಗಳನ್ನು ಮಾತ್ರವಲ್ಲದೆ; ಬೇರೆ ಬೇರೆ ಕುಟುಂಬಗಳ ಅಥವಾ ಕೌಟುಂಬಿಕ ಘಟಕಗಳ ನಡುವಿನ ಸಂಬಂಧವನ್ನು ಸಹ ಖಚಿತಪಡಿಸುತ್ತವೆ. ಒಟ್ಟಾಗಿ ಬದುಕಲು ಅಥವಾ ಜೀವನ ನಡೆಸಲು ವ್ಯಕ್ತಿ ಮತ್ತು ಕುಟುಂಬಗಳಿಗೆ ಅನುಕೂಲ ಮಾಡಿಕೊಡುವಂತಹ ಒಂದು ವ್ಯವಸ್ಥೆಯನ್ನು ಬಂಧುತ್ವ ಕಲ್ಪಿಸಿಕೊಡುತ್ತದೆ. ತಲೆಮಾರುಗಳ ಅಂತರ ಮತ್ತು ಭೌಗೋಳಿಕ ಅಂತರಗಳು ಬಂಧುತ್ವದ ಮೇಲೆ ನಿರ್ಣಾಯಕ ಪರಿಣಾಮವನ್ನು ಬೀರುತ್ತವೆ. ಬಂಧುತ್ವದ ಅಧ್ಯಯನದ ಸಂದರ್ಭದಲ್ಲಿ ಬೆಡಗುಗಳು/ಕುಲಗಳು/ಬಳ್ಳಿಗಳು ಇತ್ಯಾದಿಗಳ ಬಗ್ಗೆಯು ಪರಿಶೀಲಿಸುವುದು ಮುಖ್ಯವಾಗಿರುತ್ತದೆ. ಒಂದು ಕುಟುಂಬದಲ್ಲಿ ಅಥವಾ ಸಮಾಜದಲ್ಲಿ ಬೆಡಗುಗಳು ಕೂಡ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಕುಟುಂಬಗಳು ಅಥವಾ ಸಮುದಾಯಗಳು ಪ್ರದೇಶದಿಂದ ಪ್ರದೇಶಕ್ಕೆ ಬದಲಾವಣೆಯನ್ನು ಹೊಂದುತ್ತಿದ್ದಾರೆ. ಬೆಡಗು ಅಥವಾ ಕುಲಗಳು ಮಾತ್ರ ಬದಲಾವಣೆಯಾಗುವುದಿಲ್ಲ. ಅವುಗಳು ಎಲ್ಲೇ ಹೋದರೂ ಇವುಗಳು ಒಂದೇ ಇರುತ್ತದೆ. ವೈವಾಹಿಕ ಸಂಬಂಧಗಳು ನಡೆಯುವ ಸಂದರ್ಭದಲ್ಲಿ ಬೆಡಗುಗಳು/ಕುಲಗಳು/ಬಳ್ಳಿಗಳ ತಿಳುವಳಿಕೆಯು ಕೂಡ ಪ್ರಮುಖವಾದುದ್ದು. ವೈವಾಹಿಕ ಸಂಬಂಧಗಳು ಬಂಧುತ್ವದ ಅಧಾರದ ಮೇಲೆಯೇ ನಿರ್ಧಾರವಾಗುತ್ತಿತ್ತು.

ದಕ್ಷಿಣ ಭಾರತದ ವಲಯವು ಕರ್ನಾಟಕ, ಆಂದ್ರಪ್ರದೇಶ, ತಮಿಳುನಾಡು ಮತ್ತು ಕೇರಳ ರಾಜ್ಯಗಳನ್ನು ಹೊಂದಿದೆ. ಇಲ್ಲಿನ ಬಹುತೇಕ ಕುಟುಂಬಗಳು ಪಿತೃಪ್ರಧಾನ ಕುಟುಂಬಗಳಾಗಿವೆ. ಕುಟುಂಬದ ಅಧಿಕಾರವೆಲ್ಲವೂ ತಂದೆಯಲ್ಲಿಯೇ ಕೇಂದ್ರೀಕೃತವಾಗಿದೆ. ವಂಶಾವಳಿ ಪಿತ್ರಾರ್ಜಿತ ಆಸ್ತಿಯ ಉತ್ತರಾಧಿಕಾರ, ವಾರಸುದಾರಿಕೆ, ಇವೆಲ್ಲವೂ ತಂದೆಯಿಂದ ಗಂಡು ಮಕ್ಕಳಿಗೆ ಕೊಡಲಾಗುವುದು. ಇಲ್ಲಿ ಪಿತೃ ಗೃಹ ನಿವಾಸ ವ್ಯವಸ್ಥೆ ಇರುತ್ತದೆ. ವಿವಾಹದ ನಂತರ ಪತ್ನಿಯಾದವಳು ಗಂಡನ ಮನೆಗೆ ಬಂದು ವಾಸಿಸುತ್ತಾಳೆ. ದಕ್ಷಿಣ ವಲಯದ ಕೆಲವು ಪ್ರಮುಖ ಜಾತಿಗಳಲ್ಲಿ ಪಿತೃಪ್ರಧಾನ ಮತ್ತು ಪಿತೃವಾಸಸ್ಥಾನೀಯ ಅಣು ಕುಟುಂಬಗಳು ಅಥವಾ ಅವಿಭಕ್ತ ಕುಟುಂಬಗಳು ಪ್ರಧಾನವಾಗಿ ಕಂಡುಬರುತ್ತವೆ.

## ೩.೨ ಕುಲಸಂಬಂಧ ಸೂಚಿಗಳು

ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳಲ್ಲಿ ಕೆಲವೊಮ್ಮೆ ರಕ್ತಬಾಂಧವ್ಯ ಕುಲಸಂಬಂಧ ಪರಿಕಲ್ಪನೆಯಲ್ಲಿ ಬಳಕೆಯಾಗಿದೆ. ಯೂರೋಪಿಯನ್ನರು, ಅಮೇರಿಕನ್ನರು, ಕುಲವನ್ನು ವಿಶಿಷ್ಟ ಅರ್ಥದಲ್ಲಿ ಬಳಸುತ್ತಾರೆ. ರಕ್ತಬಾಂಧವ್ಯ ಸಮೂಹವು ಸಾಮಾನ್ಯ ಪೂರ್ವಿಕರ ಹಿನ್ನಲೆಯಲ್ಲಿ ಹೊಂದಿರುವ ಎರಡು ಅಥವಾ ಮೂರು ಸಂತತಿ ಸಮೂಹಗಳನ್ನು ಒಳಗೊಂಡಿದೆ.

ರಕ್ತಸಂಬಂಧಿಗಳನ್ನೊಳಗೊಂಡ ಏಕಪಕ್ಷೀಯವಾದ ಬಂಧುತ್ವ ಸಮೂಹವಾಗಿದ್ದು, ಇದರ ಸದಸ್ಯರ ವಂಶಿಕ ಹಿನ್ನಲೆಯು ಬಹಳ ಪುರಾತನವಾಗಿದ್ದು ಅದರ ಸದಸ್ಯರು ತಮ್ಮೆಲ್ಲಾ ಬಂಧುತ್ವದ ಕೊಂಡಿಗಳನ್ನು ಕಂಡುಕೊಳ್ಳದವರಾಗಿರುತ್ತಾರೆ.[೬]

ಸಮಸ್ತ ಭಾರತದಲ್ಲಿ ನೆಲೆಯಾಗಿರುವ ಬಂಜಾರ ಜನಾಂಗದಲ್ಲಿ ಒಟ್ಟು ೧೬ ಉಪಜಾತಿಗಳು ಹಾಗೂ ೨೭ ಪರ್ಯಾಯ ನಾಮಗಳಿರುತ್ತವೆ. ಅವುಗಳೆಂದರೆ, ನೇರ ಬಂಜಾರಾ ಧಾಡಿ ಬಂಜಾರ, ಸನಾರ ಬಂಜಾರ ನಾವಿ ಬಂಜಾರಾ, ಢಾಲಿಯಾ ಬಂಜಾರಾ, ಸಿಂಗಾಡಿಯಾ ಬಂಜಾರಾ, ಬಾಗೋರಾ ಬಂಜಾರಾ, ಡಿಗೋರಾ ಬಂಜಾರಾ, ಭಾಮಣಿಯಾ ಬಂಜಾರಾ, ಮಾರು ಬಂಜಾರ, ಜೋಗಿ ಬಂಜಾರ, ಭಾಟ ಬಂಜಾರಾ, ಮಥುರಾ ಬಂಜಾರಾ, ಚಾರಣ ಬಂಜಾರ, ರೋಹಿದಾಸ ಬಂಜಾರಾ, ಧನಕುಟಿ ಬಂಜಾರಾ. ಸಾಮಾನ್ಯವಾಗಿ ಲಂಬಾಣಿಗರನ್ನು ಹೆಚ್ಚಾಗಿ ಬಂಜಾರಾ ಎಂಬ ಹೆಸರಿನಿಂದ ಕರೆಯುವುದು ಕಂಡುಬರುತ್ತದೆ. ಬಂಜಾರ ಅಥವಾ ಬಣಜಾರ್ ಎಂಬುದು ಇವರು ಮೂಲತಃ ವರ್ತಕರಾಗಿದ್ದರೆಂಬುದನ್ನು ಸೂಚಿಸುತ್ತದೆ.[೭]

### ಕುಲಗೋತ್ರಗಳು

ಬಂಜಾರರ ಉಪಜಾತಿಗಳು ಸಾಮಾಜಿಕ ಸಂರಚನೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇವುಗಳೆಲ್ಲವು ನಾಲ್ಕು ರೀತಿಯ ಗೋತ್ರಗಳಲ್ಲಿ ಸೇರ್ಪಡೆಯಾಗಿರುತ್ತೇವೆ. ಅವುಗಳೆಂದರೆ ೧) ಪಾಂಚಚೂಲ ೨) ಪಚೀಸ ನಾತಾ ೩) ಛಾಯಿಸ್‌ಮನ್ ೪) ಸೆತ್ತಾಯಿಸ ಸುಬೇದಾರ ಐದು ತಲೆಗಳಿಂದ ೨೫ ಪಂಗಡಗಳು, ೨೬ ಜನ ವ್ಯಕ್ತಿಗಳು ಹಾಗೂ ೨೭ ಜನ ಸುಬೇದಾರರು ಎಂಬ ಅರ್ಥವುಳ್ಳ ಪ್ರಕಾರಗಳಾಗಿವೆ. ಲಂಬಾಣಿ ಗೋತ್ರಗಳು ತಮ್ಮ

---

೬. ಜೆ.ಪಿ.ಮರ್ಡಕ್, "ದಿ ಸೋಸಿಯಲ್ ಸ್ಟ್ರಕ್ಚರ್",

೭. ಪಿ.ಕೆ.ಖಂಡೋಬಾ, "ಕರ್ನಾಟಕ ಲಂಬಾಣಿಗಳು – ಒಂದು ಸಾಂಸ್ಕೃತಿಕ ಅಧ್ಯಯನ", ೧೯೮೮.

ಜನಾಂಗದ ಆಚಾರ-ವಿಚಾರ, ರೂಢಿ-ಸಂಪ್ರದಾಯಗಳ ಆಚರಣೆಯಲ್ಲೂ ಪ್ರಮುಖ ಪಾತ್ರವಹಿಸುತ್ತವೆ. ಅಂದರೆ ವಿವಾಹ ಬಂಧನದ ಪ್ರಯುಕ್ತ ಒಂದು ಮನೆಗೆ ಮಧುಮಗಳಾಗಿ ತಮ್ಮ ಮಗಳನ್ನು ಕೊಡುವ ಅಥವಾ ಆ ಮನೆಯಿಂದ ತಮ್ಮ ಮನೆಗೆ ಸೊಸೆಯಾಗಿ ತಂದು ಕೊಡುವ ವಿಷಯದಲ್ಲಿ ಗೋತ್ರಗಳು ಪ್ರಮುಖ ನಿರ್ಣಯಕ ಪಾತ್ರವಹಿಸುತ್ತವೆ.

**"ವಡತಿಯಾ ಪಂಗಡದ ಉದ್ಭವ":**

ಲಂಬಾಣಿಗಳಲ್ಲಿ 'ವಡತಿಯಾ"(ಜಾಧವ), ಎಂದು ಕರೆಯಿಸಿಕೊಳ್ಳುವ ಈ ಪಂಗಡವು 'ಮೋಲಾ'ನ ವಂಶದಿಂದ ಬಂದಿರದೆ, ನಂತರದಲ್ಲಿ ಉದ್ಭವಿಸಿರುವಂತೆ ಕಾಣಿಸುತ್ತದೆ. ಈ ಪಂಗಡದ ಉದ್ಭವ ಕುರಿತು ಲಂಬಾಣಿಗಳಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ: ಹಿಂದೆ ವ್ಯಾಪಾರಿಗಳಾದ ಲಂಬಾಣಿಗಳು ಕಾಲಾಂತರದಲ್ಲಿ ರೈಲು ಮತ್ತಿತರ ವಾಹನ ಸೌಕರ್ಯ ಬಳಕೆಯಲ್ಲಿ ಇವರ ರಫ್ತು ಕಾರ್ಯ ಹಾಗೂ ವ್ಯಾಪಾರ ಸಂಪೂರ್ಣವಾಗಿ ನಿಂತು ಹೋಗಿ ತುಂಬಾ ಹಾನಿಯನ್ನು ಅನುಭವಿಸಬೇಕಾಗಿತ್ತು. ಇದರಿಂದ ಮುಂದೆ ಲಂಬಾಣಿಗರು ಜೀವನೋಪಾಯಕ್ಕಾಗಿ ಅತೀವ ಕಷ್ಟವನ್ನೆದುರಿಸಬೇಕಾಯಿತು. ಬಡತನವನ್ನು ಎದುರಿಸಲಾರದೆ 'ಬಾಲಾಜಿ' ಎನ್ನುವ 'ಗುರು'ವಿನಲ್ಲಿಗೆ ಹೋಗಿ ಸಾಲಕ್ಕಾಗಿ ಅಂಗಲಾಚಿದರು. ಈ ಸಮಯದಲ್ಲಿ ಬಾಲಾಜಿ ಗುರು ಲಂಬಾಣಿಗರಿಗೆ ೧೪ ಕಚ್ಚರ್(ವರಹ) ರೂಪಾಯಿ ಸಾಲವಾಗಿ ನೀಡಿದನು. ಕಾಲಾಂತರದಲ್ಲಿ ಗುರು, ಸಾಲ ವಸೂಲಿಗಾಗಿ 'ಕೋಡಪಲ್ಲಿ ಪರಶುರಾಮ್ ಎನ್ನುವ ಒಬ್ಬ ಬ್ರಾಹ್ಮಣ ಗುಮಾಸ್ತನನ್ನು ಲಂಬಾಣಿಗರ ತಾಂಡಕ್ಕೆ ಕಳಿಸಿ ಕೊಟ್ಟನು. ೧೪ ಕಚ್ಚರ್ ರೂಪಾಯಿ ಹಿಂದಿರುಗಿಸುವವರೆಗೂ ನಾನು ತಿರುಗಿ ಹೋಗುವುದಿಲ್ಲ ವೆಂದು ಆ ಬ್ರಾಹ್ಮಣ ಹಟ ಹಿಡಿದು ಕುಳಿತನು. ತುಂಬಾ ದೀನ ಸ್ಥಿತಿಯಲ್ಲಿದ ಲಂಬಾಣಿ ಗರು ೧೪ ಕಚ್ಚರ್ ರೂಪಾಯಿಯನ್ನು ಹಿಂದಿರುಗಿಸುವುದಾದರೂ ಹೇಗೆ: ಗತಿಕಾಣದೆ ಎಲ್ಲರೂ ಸೇರಿ ಒಂದು ಉಪಾಯವನ್ನು ಕಂಡು ಹಿಡಿದರು. ಅದೇನೆಂದರೆ- ಬಾರಗೋತ ಪವಾರರ ಪೈಕಿ ಒಬ್ಬನಾದ 'ಗೋರ್ರಾಮ' ಪವಾರನು ಹಣ ಸಂಪಾದನೆಗಾಗಿ ದೇಶಪರ್ಯಟನ ವನ್ನು ಕೈಕೊಂಡು ತನ್ನ ಮಗಳು 'ಕಸ್ತೂರಿ'ಯನ್ನು 'ಝುರಪಲಾ ಪವಾರ'ನ ಹತ್ತಿರ ಬಿಟ್ಟು ಹೋಗಿದ್ದನು.ಕಸ್ತೂರಿಬಾಯಿ ತುಂಬಾ ಚೆಲುವೆಯಾಗಿದ್ದಳು. ನೋಡುವವರನ್ನು ಆಕರ್ಷಿಸು ವಂತಿದ್ದಳು. ಸಾಲವಸೂಲಿಗಾಗಿ ಬಂದ ಬ್ರಾಹ್ಮಣ ಹಾಗೆಯೇ ಹೋಗಲಾರನೆಂದೂ ಹೇಗಾದರೂ ಮಾಡಿ ಹಾಲು ಕೊಡುವ ನೆಪ ಮಡಿ 'ಕಸ್ತೂರಿ'ಯನ್ನು ಪರಶುರಾಮ ಬ್ರಾಹ್ಮಣನ ಕಡೆಗೆ ಕಳಿಸಿಕೊಡಬೇಕೆಂದು, ಇದರಿಂದ ಬ್ರಾಹ್ಮಣನು ಅವಳ ಸೌಂದರ್ಯಕ್ಕೆ ಮಾರುಹೋಗಿ ಅವಳನ್ನು ಹಿಡಿದುಕೊಳ್ಳುವನೆಂದೂ, ಆಗ ಎಲ್ಲರೂ ಸೇರಿ ಬ್ರಾಹ್ಮಣನು

ಯುವತಿಯ ಮೇಲೆ ಅತ್ಯಾಚಾರ ವೆಸಗಿದ್ದಾನೆಂದೂ, ಅವನನ್ನು ಹೊಡೆದೋಡಿಸಬೇಕೆಂದು ಯೋಚಿಸಿದರು. ಕಸ್ತೂರಿಬಾಯಿಯನ್ನು ಬ್ರಾಹ್ಮಣನಲ್ಲಿಗೆ ಕಳಿಸಿಕೊಟ್ಟಾಗ ಯೋಚಿಸಿದಂತೆಯೇ ನಡೆದು ಹೋಗುತ್ತದೆ. ಕಸ್ತೂರಿಬಾಯಿಯೊಂದಿಗೆ ಆ ಬ್ರಾಹ್ಮಣನು ಅಕ್ರಮ ಸಂಬಂಧವನ್ನು ಬೆಳೆಯಿಸಿದ ಕಾರಣ ಅವನನ್ನು ಬಂಧಿಸಲಾಯಿತು. ಆಗ ಲಂಬಾಣಿಗರ ೧೮ ಪಂಗಡಗಳ ೨ ನಾಯಕರು ಆಲದ ಮರದ ಕೆಳಗೆ(ವಡೇರ ಝಾಡ್) ಸಂಘಟಿತರಾಗಿ ಅವನನ್ನು ವಿಚಾರಣೆಗೊಳಪಡಿಸಿ ೧೭ರೂ. ದಂಡ ವಿಧಿಸಿ ಅವನನ್ನು ಅಲ್ಲಿಂದ ಹೊಡೆದೋಡಿಸಿದರು. ಬ್ರಾಹ್ಮಣ ನಡೆದು ಹೋದ ಘಟನೆಯನ್ನು ಗುರುವಿನಲ್ಲಿಗೆ ಬಂದು ಹೇಳಲಾಗಿ ತನ್ನ ಸಾಲವನ್ನು ಹಿಂದಿರುಗಿಸಲಾರದ ಲಂಬಾಣಿಗರಿಗೆ ಏಳು ತಲೆಮಾರುಗಳವರೆಗೂ ಅವರಿಗೆ ಬಂದಿರುವ ಬಡತನ ತಪ್ಪಬಾರದೆಂದು ಶಾಪವಿಧಿಸಿದನು. ಶಾಪಗ್ರಸ್ತ ಲಂಬಾಣಿಗರು ಗುರುವಿನಲ್ಲಿಗೆ ಬಂದು ಕ್ಷಮೆಕೋರಿ ತಾವು ಪಡೆದಿರುವ ಸಾಲವನ್ನು ಈ ಕೂಡಲೇ ಹಿಂದಿರುಗಿಸುವ ಪರಿಸ್ಥಿತಿಯಲ್ಲಿಲ್ಲವೆಂದೂ, ಕಾಲಕ್ರಮೇಣ ಲಂಬಾಣಿಗರು ಎಲ್ಲಿದ್ದರೂ ಗುರುವಿನ ಹೆಸರಿನಲ್ಲಿ ಮದುವೆ–ಮುಂಜಿ ಕಾರ್ಯಗಳಲ್ಲಿ ಒಂದೊಂದು ರೂಪಾಯಿ ಮುಡುಪುಕಟ್ಟಿ ಮುಟ್ಟಿಸುವುದಾಗಿಯೂ ಗುರುವಿನೆದುರಿನಲ್ಲಿ ಪ್ರಮಾಣ ಮಾಡಿದರು. ಅದಕ್ಕಾಗಿಯೇ ಇಂದಿನವರೆಗೂ ಲಂಬಾಣಿಗರು ತಮ್ಮ ಮದುವೆ–ಮುಂಜಿ ಕಾರ್ಯಗಳಲ್ಲಿ ಗುರುಕಾಣಿಕೆ ಯೆಂದು ಒಂದು ರೂಪಾಯಿ ನಾಣ್ಯ ಕಟ್ಟುತ್ತಾರೆ. ಅದು ಗುರುವಿಗೆ ಮುಟ್ಟತ್ತದೆಂದು ಭಾವಿಸುತ್ತಾರೆ. ಅಕ್ರಮ ಸಂಬಂಧದಿಂದ ಕಸ್ತೂರಿಬಾಯಿಯು ಗರ್ಭಿಣಿಯಾಗಿ, ಮಗುವಿನ ಜನನವಾಗುತ್ತದೆ. ೧೮ ಜನ ನಾಯಕರು ಸೇರಿ, ಹುಟ್ಟಿದ ಕೂಸಿಗೆ ಹೆಸರೇನು ಇಡಬೇಕೆಂದು ಯೋಚಿಸುತ್ತಾರೆ. ಆಲದಮರದ ಕೆಳಗೆ (ವಡೇರ ಝಾಡ) ಕುಳಿತು ನ್ಯಾಯ ನಿರ್ಣಯಿಸಿದ್ದ ರಿಂದ ಆ ಮಗುವಿಗೆ 'ವಡತಿಯಾ' ಎಂದು ನಾಮಕರಣ ಮಾಡ ಬೇಕೆಂದು ನಿರ್ಧರಿಸುತ್ತಾರೆ. ಮುಂದೆ ಈ 'ವಡತಿಯಾ'ನಿಂದ ವಂಶ ಬೆಳೆದು ೧೨ ಜನರು ಹುಟ್ಟಿದರು. ಈ ೧೨ ಜನರ ಸಂತತಿಯನ್ನು 'ಬಾರಪಾಡಾ ವಡತಿಯಾ' ಎಂದು ಕರೆಯುತ್ತಾರೆ. ಅವರ ಹೆಸರು ಗಳು ಇಂತಿವೆ. ೧) ಬಾದಾವತ ೨) ಲಾಖಾವತ ೩) ಲೋಣಾವತ ೪) ತೇಜಾವತ, ೫) ಧಾರಾವತ ೬) ಘುಗಲೋತ ೭) ಹಾಲಾವತ ೮) ಕುಣಸಾದ ೯) ಮಾಳೋತ ೧೦) ಅಜಮೇರಾ ೧೧) ಜೇಟೋದ ೧೨) ಬೋಡ. ವಿಚಿತ್ರವೆಂದರೆ ಈ ಮೇಲ್ಕಾಣಿಸಿದ ಬಾರಪಾಡಾ ವಡತಿಯಾ ಪಂಗಡಗಳವರು 'ಮೋಲಾ ವಂಶಾವಳಿಯ ರಾಠೋಡ, ಚವ್ಹಾಣ ಹಾಗೂ ಪವಾರರ ಪಂಗಡಗಳೆಲ್ಲರಲ್ಲಿಯೂ ಯಾವ ಅಡೆತಡೆಯಿಲ್ಲದೆ ಕೊಡುಕೊಳ್ಳುವಿಕೆಯನ್ನು ಮಾಡಬಹುದಾಗಿದೆ. ಅದಕ್ಕಾಗಿಯೇ ಇವರಿಗೆ 'ಬಾವನವಾಡಾ ವಡತ್ಯಾ' ಎಂಬ ನಾಮಾಕಿಂತವೂ ಇದೆ. ಅಂದರೆ ಲಂಬಾಣಿಗರ ೫೨ ಕುಲಗೋತ್ರಗಳಲ್ಲಿಯೂ ಇವರು

ವಿವಾಹ ಸಂಬಂಧವನ್ನು ಬೆಳೆಯಿಸಬಹುದಾಗಿದೆ. ಆದರೆ ಚವ್ಹಾಣ ಹಾಗೂ ಪವಾರರ ಪಂಗಡಗಳಲ್ಲಿ ಇಂತಹ ಸಂಬಂಧಗಳಿಗೆ ಆಸ್ಪದವಿಲ್ಲ. ಇವೆರಡೂ ಸಗೋತ್ರಗಳಾಗಿವೆ. ಅಲ್ಲದೆ ಇವೆರಡೂ ಪಂಗಡಗಳವರು 'ವಡತಿಯಾ'ನಿಗೆ ಹೆಣ್ಣು ಕೊಡಬಹುದೇ ಹೊರತು ತೆಗೆದುಕೊಳ್ಳಲು ಬರುವುದಿಲ್ಲ. ಒಂದು ರೀತಿಯಿಂದ ಇವರಿಗೆ ವಡತಿಯಾ ಪಂಗಡದವರೂ ಸಗೋತ್ರದವರೇ ಆಗುತ್ತಾರೆ. ಹೀಗಾಗಿ ಲಂಬಾಣಿಗರಲ್ಲಿ ಈ ಮೂರು ಪಂಗಡಗಳು 'ಜಾತ್' ಎಂಬ ಬೆಡಗಿಗೆ ಸೇರಿದರೆ 'ರಾಠೋಡ' ಪಂಗಡವು 'ಭುಕಿಯಾ' ಎನ್ನುವ ಬೆಡಗಿಗೆ ಸೇರುತ್ತದೆ. 'ಜಾತ್' ಹಾಗೂ 'ಭುಕಿಯಾ' ಬೆಡಗುಗಳಲ್ಲಿ ನಿರಾತಂಕವಾಗಿ ಕೊಡುಕೊಳ್ಳುವಿಕೆ ನಡೆಯುತ್ತದೆ.

ಅಧ್ಯಯನದ ಮಾಹಿತಿದಾರರನ್ನು ಬಂಜಾರ ಗೋತ್ರದ ಬಗ್ಗೆ ಪ್ರಶ್ನೆ ಕೇಳಲಾಗಿ ಅವರಿಂದ ಬಂದ ಮಾಹಿತಿ ಏನೆಂದರೆ, ಚೌವ್ಹಾಣ್ ಮತ್ತು ಪವಾರ್ ಎಂಬ ಎರಡು ಗೋತ್ರದ ಲಂಬಾಣಿಗಳು ತಮ್ಮನ್ನು ಜಾತ್‌ಗೋತ್ರದವರೆಂದು ಮರುನಾಮಕರಣ ಮೂಲಕ ಗುರ್ತಿಸಿ ಕೊಂಡಿರುತ್ತಾರೆ ಎಂಬುದು ನಮಗೆ ಗೋಚರವಾಗುತ್ತದೆ.

**೩.೩. ಬಂಜಾರರಲ್ಲಿ ವಿವಾಹ ಪದ್ಧತಿ**

ಬಂಜಾರರಲ್ಲಿ ಜರುಗುವ ವಿವಾಹ, ಆಚರಣೆಗಳು, ಸಂಪ್ರದಾಯ, ವಿಧಿ ವಿಧಾನ, ಸಂಗಾತಿ ಆಯ್ಕೆ ಮತ್ತಿತರ ಅಂಶಗಳಲ್ಲಿ ಹಿಂದೂಗಳಿಗಿಂತ ಭಿನ್ನವಾಗಿರುತ್ತಾರೆ. ಸಮಸ್ತ ಭಾರತದಲ್ಲಿ ವಾಸಿಸುವ ಬಂಜಾರರ ವಿವಾಹಪದ್ಧತಿ, ವಿಧಿವಿಧಾನಗಳು ಸಂಸ್ಕೃತಿ, ಬಹುತೇಕ ವಾಗಿ ಒಂದೇ ರೀತಿಯಾಗಿರುತ್ತವೆ. ಕಾಲಾಂತರಗಳಲ್ಲಿ ನಾಗರಿಕತೆ ಮತ್ತು ಪರಿವರ್ತಿತ ಸಂಸ್ಕೃತಿಗಳ ಪ್ರಭಾವಗಳಿಂದಾಗಿ ವಿದ್ಯಾವಂತ ಯುವಕರು ವಿವಾಹ ಆಚರಣೆಗಳಲ್ಲಿ ಗಮನಾರ್ಹವಾದ ಬದಲಾವಣೆ ಮಾಡಿಕೊಂಡಿರುವುದು ಕಂಡುಬರುತ್ತದೆ. ಅಂದರೆ ಕಟ್ಟಾಭಿಮಾನಿಗಳಾದ ಬಂಜಾರರು ತಮ್ಮ ಸಮಾಜ ಸಂಪ್ರದಾಯಕ್ಕೆ ದ್ರೋಹ ಬಗೆಯದೆ ಮೂಲ ಆಚರಣೆಗಳನ್ನು ತಪ್ಪದೇ ಅನುಸರಿಸುತ್ತಿರುವುದನ್ನು ಗಮನಿಸಬಹುದಾಗಿದೆ.[೮]

ಲಂಬಾಣಿಗರಲ್ಲಿ ಅನೇಕ ಒಳಪಂಗಡಗಳಿವೆ. ತಾತ್ವಿಕವಾಗಿ ಎಲ್ಲಾ ಪಂಗಡಗಳು ಒಂದೇ ಆಗಿದ್ದರೂ ಇವು ಸಾಮಾಜಿಕವಾಗಿ ಬೆಳೆದಿರುತ್ತವೆ. ರಜಪೂತರಲ್ಲಿ ಕಂಡುಬರುವ ರಾಠೋಡ, ಚವ್ಹಾಣ, ಪಮ್ಮಾರ, ಯಾದವ(ಜಾಧವ) ಮುಂತಾದ ಉಪಜಾತಿಗಳು ಮಾರವಾಡಿ,

---

೮. ಪಿ.ಕೆ.ಖಂಡೋಬಾ, "ಕರ್ನಾಟಕ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ", ಪು.೩೯-೪೧.

ಗುರ್ಜರ ಹಾಗೂ ಲಂಬಾಣಿ ಸಮಾಜಗಳಲ್ಲಿ ಸ್ಪಷ್ಟವಾಗಿ ಏಕರೂಪದಿಂದ ಕಂಡುಬರುತ್ತವೆ. ಅಲ್ಲದೆ ಇವರಲ್ಲಿ ಪ್ರಚಲಿತವಿರುವ ಪ್ರತಿಯೊಂದು ವಿಧಿ-ವಿಧಾನ, ಧಾರ್ಮಿಕ ಸಂಸ್ಕಾರ, ಮದುವೆ-ಮುಂಜಿಗಳು ಹೆಚ್ಚು ಕಡಿಮೆ ಒಂದೇ ಬಗೆಯಾಗಿರುವುದನ್ನು ಕಾಣಬಹುದಾಗಿದೆ. ಪೂರ್ವದಲ್ಲಿ ಈ ಮೂರು ಸಮಾಜಗಳು ಒಂದೇ ಮೂಲದಿಂದ ಬಂದವುಗಳಾಗಿವೆ ಎಂಬುದನ್ನು ಈ ಅಂಶಗಳು ಇನ್ನಷ್ಟು ಬಲಪಡಿಸುತ್ತವೆ.

ಸಂಚಾರಿಗಳಾದ ಲಂಬಾಣಿಗರು ವ್ಯಾಪಾರಕ್ಕಾಗಿ ದೂರದ ಪ್ರದೇಶಗಳಿಗೆ ಒಂದೊಂದು ಗುಂಪುಗಳನ್ನಾಗಿ ಮಾಡಿಕೊಂಡು ಅಲೆಯಬೇಕಾಗುತ್ತಿತ್ತು. ಈ ಗುಂಪುಗಳಲ್ಲಿ ಸಾಮಾನ್ಯವಾಗಿ ೨೫ ರಿಂದ ೧೦೦ ಕುಟುಂಬಗಳು ಒಟ್ಟಿಗೆ ಸೇರಿಕೊಂಡು ಹೋಗುತ್ತಿದ್ದವು. ಈ ಬಗೆಯ ಗುಂಪುಗಳು ಒಂದೊಂದು ಬಗೆಯ ಕಸಬುಗಳನ್ನು ಹೊಂದಿದ್ದವು. ಕೆಲವರು ವ್ಯಾಪಾರವನ್ನು ಹಾಗೂ ಸಾಮಾನುಗಳ ಸಾಗಾಣಿಕೆಯನ್ನು ಕೈಕೊಂಡಿದ್ದರೆ ಇನ್ನೂ ಕೆಲವರು ದೂತಕಾರ್ಯ ಹಾಗೂ ಸೇನೆಗಳಿಗೆ ಆಹಾರ ಧಾನ್ಯವನ್ನು ಸರಬರಾಜು ಮಾಡುವ ಕೆಲಸಗಳನ್ನು ನಿರ್ವಹಿಸಿಕೊಂಡಿರುವುದು ಗೊತ್ತಾಗುತ್ತದೆ. ಗುಂಪುಗಳಲ್ಲಿ ಹರಿದುಹೋಗಿರುವ ಈ ಜನಾಂಗ ಪುನಃ ಪರಸ್ಪರ ಸಂಧಿಸುವುದು ಕಷ್ಟದ ಕೆಲಸವಾಗಿತ್ತು. ಇವರು ತಮ್ಮ ಮಕ್ಕಳ ಮದುವೆಯ ವಯಸ್ಸು ಸಮೀಪಿಸುತ್ತಲೇ ಬಹಳಷ್ಟು ಚಿಂತಾಮಗ್ನರಾಗುತ್ತಿದ್ದರು. ಕಾರಣ ಅವರವರ ಗುಂಪು ಗಳಲ್ಲಿ ಯೋಗ್ಯವಾದ ವಧು-ವರರು ಸಿಗದೇ ಹೋದಲ್ಲಿ ಬೇರೆ ಗುಂಪುಗಳೊಂದಿಗೆ ಕಷ್ಟಪಟ್ಟು ಸಂಪರ್ಕ ಬೆಳೆಸಬೇಕಾಗುತ್ತಿತ್ತು. ಸಾಮಾನ್ಯವಾಗಿ ಆ ಗುಂಪುಗಳು ವರ್ಷಕ್ಕೊಮ್ಮೆ 'ಹೋಳಿ' ಇಲ್ಲವೆ 'ದೀಪಾವಳಿ' ಆಚರಣೆಯ ಕಾಲಕ್ಕೆ ಒಂದೇ ಕಡೆಗೆ ಸೇರುವ ವಾಡಿಕೆ ಯಾಗಿತ್ತು. ಇಂಥ ಸಂದರ್ಭದಲ್ಲಿಯೇ ಹೆಚ್ಚಾಗಿ ವಧು-ವರರನ್ನು ಆಯ್ಕೆ ಮಾಡಿ ನಿಶ್ಚಯ ಕಾರ್ಯವನ್ನು ಕೈಕೊಳ್ಳುತ್ತಿದ್ದರಲ್ಲದೆ, ಮದುವೆ ಮುಂತಾದ ಸಂಸ್ಕಾರ ಕಾರ್ಯಗಳನ್ನು ಮಾಡುತ್ತಿದ್ದರು. ಈ ಗುಂಪುಗಳು ಮದುವೆ ನಂತರ ಪುನಃ ಒಬ್ಬರನ್ನೊಬ್ಬರು ಸಂಪರ್ಕಿ ಸುವರೋ ಇಲ್ಲವೋ ಎನ್ನುವ ಭಾವನೆಯಿಂದ ಅವರು ಬಹಳ ಚಿಂತಿತರಾಗುತ್ತಿದ್ದರು. ಹೀಗಾಗಿ ಮದುವೆ ಸಮಾರಂಭಗಳಲ್ಲಿ ಸ್ತ್ರೀಯರು ಒಬ್ಬರನ್ನೊಬ್ಬರು ಅಪ್ಪಿಕೊಂಡು ಗದ್ಗದಿತ ಕಂಠದಿಂದ ಹಾಡುತ್ತಾ ತಮ್ಮ ದುಃಖವನ್ನು ವ್ಯಕ್ತಪಡಿಸುತ್ತಾರೆ.

ಇಂದು ಲಂಬಾಣಿಗರ ಸ್ಥಿತಿ-ಗತಿಗಳು ಸಾಕಷ್ಟು ಬದಲಾವಣೆಯಾಗಿವೆ. ಮೊದಲಿನಂತೆ ಈ ಜನ ಸಂಚಾರಿಗಳಾಗಿರದೆ ಭಾರತದಾದ್ಯಂತ ಅಲ್ಲಲ್ಲಿ ಸ್ಥಿರವಾಗಿ ತಾಂಡಾಗಳ ರೂಪದಲ್ಲಿ ವಾಸಿಸುತ್ತಿದ್ದಾರೆ. ವ್ಯಾಪಾರವಂತೂ ಸಂಪೂರ್ಣ ಕೈಬಿಟ್ಟು ಹೋಗಿದೆ. ಸಂಪತ್ತನ್ನು ಕಳೆದು

ಕೊಂಡು ಬಡತನದಲ್ಲಿ ಬೇಯುತ್ತಿದ್ದಾರೆ. ಸಾಕಷ್ಟು ಪರಿಶ್ರಮಿಗಳಾಗಿದ್ದರೂ ಅಜ್ಞಾನದ ಅಂಧಕಾರದಲ್ಲಿ ಮುಳುಗಿದ್ದಾರೆ. ಮದುವೆಗೆ ಸಂಬಂಧಿಸಿದ ವಿಧಿ-ವಿಧಾನಗಳು ಮೊದಲಿನಂತೆ ಉಳಿಯದಿದ್ದರೂ, ತಮ್ಮ ಪೂರ್ವಜರ ನಿಯಮಾವಳಿಗಳಲ್ಲಿ ಅಲ್ಪಸ್ವಲ್ಪ ಬದಲಾವಣೆ ಮಾಡಿಕೊಂಡು ಮೂಲವನ್ನು ಉಳಿಸಿಕೊಂಡು ಬಂದಿರುವುದು ಗಮನಾರ್ಹ ಅಂಶವಾಗಿದೆ.

**ವೈವಾಹಿಕ ಸ್ವರೂಪ:** ವಿವಿಧ ಸಮಾಜಗಳಲ್ಲಿ ವಿವಾಹ ಪದ್ಧತಿ ಒಂದೇ ತೆರನಾಗಿಲ್ಲ. ದೇಶ, ಕಾಲ, ಪರಿಸ್ಥಿತಿಗೆ ತಕ್ಕಂತೆ ವಿವಾಹಗಳು ಬೇರೆ ಬೇರೆ ರೂಪುಗಳನ್ನು ಧರಿಸಿವೆ. ಇತರ ಎಲ್ಲ ಜನಾಂಗಗಳಂತೆ ಲಂಬಾಣಿಗರಲ್ಲಿಯೂ ಅನೇಕ ಬಗೆಯ ವಿವಾಹಗಳು ರೂಢಿಯಲ್ಲಿವೆ. ಅವುಗಳನ್ನು ಇಲ್ಲಿ ಪರಿಶಿಲಿಸಬಹುದು. ಒಬ್ಬನು ಒಬ್ಬಳಿಗಿಂತ ಹೆಚ್ಚು ಜನ ಸ್ತ್ರೀಯರನ್ನು ಮದುವೆಯಾಗುವ ಸಂಪ್ರದಾಯ ಲಂಬಾಣಿಗರಲ್ಲಿ ಬಳಕೆಯಲ್ಲಿದೆ. ಇತ್ತೀಚಿನ ಕೆಲವು ದಶಕಗಳನ್ನು ಬಿಟ್ಟರೆ, ಪ್ರಾಚೀನ ಹಾಗೂ ಅತಿ ಪ್ರಾಚೀನ ಬುಡಕಟ್ಟಿನ ಜನಾಂಗಗಳಲ್ಲಿಯೂ ಈ ಪದ್ಧತಿಯನ್ನು ಕಾಣುತ್ತೇವೆ. ಪತ್ನಿಯು ಬಂಜೆ ಎಂದು ಕಂಡುಬಂದಲ್ಲಿ ಮಕ್ಕಳನ್ನು ಪಡೆಯುವ ಉದ್ದೇಶದಿಂದ ಪುನಃ ಇನ್ನೊಂದು ಮದುವೆಯಾಗುವ ಪದ್ಧತಿ ಲಂಬಾಣಿಗರಲ್ಲಿ ಕಾಣಬಹುದು. ಬಹುಶಃ ಸಮಾಜದಲ್ಲಿ ಆರ್ಥಿಕ ಸ್ಥಿತಿ, ಸಾಮಾಜಿಕ ಪದ್ಧತಿಗಳು ಮತ್ತು ಆಯಾ ಕಾಲದಲ್ಲಿಯ ಮೌಲ್ಯಗಳು ಈ ಪದ್ಧತಿ ಬೆಳೆದು ಬರಲು ಕಾರಣವಾಗಿರಬೇಕು. ಹೆನ್ರಿಮಾರ್ಗನ್ ಈ ರೀತಿಯ ವಿವಾಹ ಅತ್ಯುನ್ನತ ಸ್ಥಾನ ಹೊಂದಿದ್ದು, ಪ್ರಗತಿಪರ ಸಮಾಜದ ಕುರುಹಾಗಿ ಮಾರ್ಪಟ್ಟಿದೆ ಎಂದಿದ್ದಾರೆ.

ಹಿಂದೂ ಸಾಂಪ್ರದಾಯಿಕ ಜೀವನ ವ್ಯವಸ್ಥೆಯಲ್ಲಿ ಕಂಡು ಬರುತ್ತಿದ್ದಂತಹ ವೈವಾಹಿಕ ಪ್ರಕ್ರಿಯೆಗಳು ಬಂಜಾರರ ಸಮುದಾಯ ಜೀವನದ ಮೇಲೆ ಹೆಚ್ಚು ಪ್ರಭಾವ ಬೀರಿದವು. ಬಂಜಾರರು ವಲಸಿಗರಾದರೂ ಕಾಲಾಂತರಗಳಲ್ಲಿ ಸ್ಥಳೀಯ ಜನರಲ್ಲಿ ತಮ್ಮನ್ನು ತಾವು ಪ್ರತ್ಯೇಕವೂ, ವಿಶಿಷ್ಟವೂ ಆಗಿರುವಂತಹ ಸಮೂಹಗಳಾಗಿ ಗುರುತಿಸಿಕೊಂಡಿರುತ್ತಾರೆ. ಈ ಹಿನ್ನಲೆಯಲ್ಲಿ ವೈವಾಹಿಕ ವ್ಯವಸ್ಥೆಯು ಬಹು ವಿವಾಹವನ್ನು ಆಧರಿಸಿತ್ತು. ಕೆಲವು ಪುರಾಣ ಇತಿಹಾಸಗಳ ಉಲ್ಲೇಖಗಳು ಹೆಚ್ಚು ಪುಷ್ಠಿಯನ್ನು ನೀಡುತ್ತವೆ. ಸಮಾಜದಲ್ಲಿ ಮಾನ್ಯತೆ ಹೊಂದಿಲ್ಲದಿದ್ದರೂ ಬಹುಪತಿತ್ವ ಮತ್ತು ಬಹುಪತ್ನಿತ್ವ ರೂಢಿಯಲ್ಲಿತ್ತು. ಒಂದೊಮ್ಮೆ ತನ್ನ ಮೊದಲ ಪತಿ ಸಾಂಸಾರಿಕ ಜೀವನದ ಪ್ರಾರಂಭದಲ್ಲಿ ಇಲ್ಲವೆ ಮಧ್ಯವಯಸ್ಸಿನಲ್ಲಿ ಅಕಾಲ ಮರಣಕ್ಕೆ ಒಳಗಾಗಿದ್ದರೆ ಆಕೆಯು ಮತ್ತೊಬ್ಬನ ಜೊತೆ ವಿವಾಹವಾಗಬಹುದಾಗಿತ್ತು. ಹಾಗೆಯೇ ಪುರುಷ ಸಹ ಬಹುಪತ್ನಿತ್ವ ಈ ಕಾರಣಕ್ಕೆ ಸ್ವೀಕರಿಸಬಹುದಾಗಿತ್ತು. ಇದಕ್ಕೆ ಪೂರಕವಾಗಿ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಒಟ್ಟು ಮಾಹಿತಿದಾರರಲ್ಲಿ ಶೇ. ೯ರಷ್ಟು ಬಹುಪತ್ನಿ, ಬಹುಪತಿತ್ವ ರೂಢಿಯಲ್ಲಿದೆ. ಬದಲಾಗಿ ಬಹುಪಾಲು ತಾಂಡಗಳಲ್ಲಿ ಈ ವ್ಯವಸ್ಥೆ ಒಲವು ತೋರಿಸುವವರಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಂಡಗಳ ಶೇ. ೨೪ ಮತ್ತು ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ತಾಂಡಗಳ ಶೇ. ೧೮ ಜನರು ಬಹುವಿವಾಹವನ್ನು ಸಮ್ಮತಿಸಿರುತ್ತಾರೆ.

**ವಿಧವಾ ವಿವಾಹ:** ಲಂಬಾಣಿಗರು ಇದಕ್ಕೆ 'ಧಾಸಣಿ ಘಾಲೇರೊ' ಎನ್ನುತ್ತಾರೆ. ಗಂಡ ಸತ್ತು ಹೋಗಿದ್ದರೆ, ಇಲ್ಲವೆ ಬೇರೆ ಇನ್ನಾವುದೇ ಕಾರಣದಿಂದ ವಿವಾಹ ವಿಚ್ಛೇದನವಾಗಿದ್ದರೆ ಆ ಮಹಿಳೆಗೆ ಇಚ್ಛೆಯಾದಲ್ಲಿ ಸತ್ತ ಗಂಡನ ಸಹೋದರ ಇಲ್ಲವೆ ಹೊರಗಿನ ಯಾವುದೇ ಪುರುಷನ ಜೊತೆಗೆ ಕೂಡಾವಳಿ ವಿವಾಹವಾಗಬಹುದು. ವಿಧವಾ ವಿವಾಹಕ್ಕೆ ಇವರಲ್ಲಿ ಯಾವುದೇ ನಿರ್ಬಂಧವಿಲ್ಲ. ಅವಿವಾಹಿತನಾದವನು ವಿಧವಾ ವಿವಾಹ ಮಾಡಿಕೊಳ್ಳುವುದು ಅಸಂಭವ. ಸಾಮಾನ್ಯವಾಗಿ ವಿಧವಾ ವಿವಾಹ ವಿಧವೆ ಹಾಗೂ ವಿಧುರರಾಗಿದ್ದರೆ ಮಾತ್ರ ನಡೆಯುತ್ತದೆ. ಆದರೆ ಒಂದು ವಿಚಿತ್ರವೆಂದರೆ ವಿಧುರನು ಅವಿವಾಹಿತ ಸ್ತ್ರೀಯರನ್ನು ಶಾಸ್ತ್ರೋಕ್ತವಾಗಿ ಮರುಮದುವೆಯನ್ನು ಮಾಡಿಕೊಳ್ಳಬಹುದು. ಆದರೆ ಈ ಸ್ವಾತಂತ್ರ್ಯ ವಿಧವೆಗಿಲ್ಲ.

ಈ ಮದುವೆಯು ಬಹಳ ಸರಳ ರೀತಿಯಲ್ಲಿ ನಡೆಯುತ್ತದೆ. ತಾಂಡಾದ ನಾಯಕನ ಹಾಗೂ ಹಿರಿಯರ ಸಮ್ಮುಖದಲ್ಲಿ, ಮದುವೆಯಾಗ ಬಯಸುವವನು ವಿಧವೆಗೆ ಮಾಂಗಲ್ಯ ಸೂಚಕವಾದ ಚೂಡಿ, ಘುಗರಿಯನ್ನು ಹಾಗೂ ಕಾಂಚಳಿ, ಛಾಂಟಿಯಾ ಮೊದಲಾದ ಬಟ್ಟೆಗಳನ್ನು ಹಾಗೂ ಇನ್ನಿತರ ಕೆಲವು ಆಭರಣಗಳನ್ನು ಹಾಕಬೇಕು. ವಿವಾಹ ವಿಚ್ಛೇದನವಾದ ಸ್ತ್ರೀಯಾಗಿದ್ದರೆ ಇವುಗಳನ್ನು ಹಾಕಬೇಕಾಗಿಲ್ಲ. ವಿಧುರನು ವಿಧವೆಯನ್ನಾಗಲಿ ಇಲ್ಲವೆ ವಿವಾಹ ವಿಚ್ಛೇದನವಾದ ಸ್ತ್ರೀಯನ್ನಾಗಲಿ ವಿವಾಹವಾಗುವುದಾದರೆ 'ತೆರ'(ಶುಲ್ಕ) ಕೊಡಬೇಕಾಗುತ್ತದೆ. ವಿವಾಹ ವಿಚ್ಛೇದನ ಸ್ತ್ರೀಯ 'ತೆರ' ೧೨೫ ರೂ.(ವಾಯಾವಾಳೀರ ಸವ್ವಾಸೊ). ವಿಧವಾ ಸ್ತ್ರೀಯ 'ತೆರ' ೧೫೦ ರೂ.(ರಾಂಡ ಬೀರೇರ ಡೊಡಸೊ) ಹಾಗೂ ಪಂಚಾಯತಿ ಖರ್ಚು ಸಹಿತವಾಗಿ ಕೊಡಬೇಕಾಗುತ್ತದೆ. ಈ ತೆರ ಹಣವನ್ನು ಮೊದಲಿನ ಗಂಡನಿಗೆ ಇಲ್ಲವೆ ಅವನ ವಾರಸುದಾರರಿಗೆ ಹಿಂದಿರುಗಿಸುತ್ತಾರೆ. ಆಮೇಲೆ ಕುಲದ ನಾಯಕನು ಅವರಿಬ್ಬರೂ ಗಂಡ ಹೆಂಡಿರಾದರೆಂದು ಘೋಷಿಸುತ್ತಾನೆ. ಇದಾದ ಬಳಿಕ ಮಾಂಸದೂಟ, ಮಧ್ಯಪಾನ ನಡೆಯುತ್ತದೆ. ವ್ಯಭಿಚಾರದ ಆಪಾದನೆಯ ಮೇರೆಗೆ ಗಂಡಸು ಹೆಂಡತಿಯನ್ನು ವಿಚ್ಛೇದನ ಮಾಡಬಹುದು. ಆಗ ಅವಳ ಪ್ರಿಯಕರನು ಆಕೆಯ ಗಂಡನಿಗೆ ತೆರುವಿನ ಹಣದ ಜೊತೆಗೆ ಮದುವೆಗಾದ ವೆಚ್ಚವನ್ನು ಭರಿಸಬೇಕಾಗುತ್ತದೆ. ಅಲ್ಲದೆ ಪಂಚಾಯತಿ ಖರ್ಚನ್ನು ಕೊಡ

ಬೇಕಾಗುತ್ತದೆ. ವಿವಾಹ ಪೂರ್ವದಲ್ಲಿ ಸ್ತ್ರೀ ಇಲ್ಲವೆ ಪುರುಷ ಅನೈತಿಕ ಸಂಬಂಧ ಹೊಂದಿದ್ದು ಕಂಡುಬಂದಲ್ಲಿ ಪಂಚಾಯತಿ ಖರ್ಚಿನ ಸಮೇತ ಎಪ್ಪತ್ತೈದು ರೂಪಾಯಿಗಳ ದಂಡವನ್ನು ವಸೂಲು ಮಾಡಿ ಇಬ್ಬರ ಮದುವೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಎಕ್ಕೆ ಗಿಡ ತಂದು ಅದಕ್ಕೆ ಇಬ್ಬರನ್ನೂ ಏಳು ಸುತ್ತು ಹಾಕಿಸಿ ಮದುವೆಶಾಸ್ತ್ರ ಮುಗಿಸುತ್ತಾರೆ.

**ಅತ್ತಿಗೆ–ಮೈದುನರ ವಿವಾಹ:** ಲಂಬಾಣಿಗರಲ್ಲಿ ಅಣ್ಣ ಸತ್ತಾಗ, ತಮ್ಮ, ಅಣ್ಣನ ಹೆಂಡತಿಯನ್ನು ವಿವಾಹವಾಗಬಹುದು. ಆದರೆ ತಮ್ಮ ಸತ್ತಾಗ ಅಣ್ಣ, ತಮ್ಮನ ಹೆಂಡತಿಯನ್ನು ವಿವಾಹವಾಗಲು ಬರುವುದಿಲ್ಲ. ಅಣ್ಣ ಸತ್ತು ಹೋದಮೇಲೆ ಅತ್ತಿಗೆ ಅನ್ಯಪುರುಷರ ಜೊತೆಗೆ ಅನೈತಿಕ ಸಂಬಂಧವನ್ನು ಹೊಂದಬಾರದೆಂದೂ, ವಿಧವೆಯಾಗಿ ಸಾಯುವವರೆಗೆ ಕೊರಗಬಾರದೆಂದೂ ಹಾಗೂ ಮನೆತನದ ಗೌರವವನ್ನು ಕಾಯ್ದುಕೊಳ್ಳುವುದಕ್ಕಾಗಿಯೂ ತಮ್ಮನು ಅಣ್ಣನ ಹೆಂಡತಿ ವಿಧವೆಯನ್ನು ಮದುವೆಯಾಗುವ ಪದ್ಧತಿ ಲಂಬಾಣಿಗರಲ್ಲಿ ಇಂದಿಗೂ ಬಳಕೆಯಲ್ಲಿದೆ. ಈ ಅತ್ತಿಗೆ–ಮೈದುನರ ವಿವಾಹವು ಒಂದು ಐತಿಹ್ಯದ ಪ್ರಕಾರ ತಮ್ಮ ಪೂರ್ವಜನೆಂದು ಹೇಳಿಕೊಳ್ಳುವ ಸುಗ್ರೀವ, ರಾಮನಿಂದ ವಾಲಿಯ ವಧೆಯ ನಂತರ ತಾರಾಳನ್ನು ಮದುವೆ ಮಾಡಿಕೊಂಡಂದಿನಿಂದ ತಮ್ಮಲ್ಲಿ ಬಳಕೆಯಲ್ಲಿ ಬಂದಿತೆಂದೂ, ಇದರಿಂದಾಗಿ ತಾವು ತಮ್ಮ ಪೂರ್ವಜರ ಪದ್ಧತಿಯನ್ನು ಉಳಿಸಿಕೊಂಡು, ಬೆಳೆಯಿಸಿಕೊಂಡು ಬಂದಿರುವುದಾಗಿಯೂ ಲಂಬಾಣಿಗರು ಹೇಳಿಕೊಳ್ಳುತ್ತಾರೆ. ಈ ವಿವಾಹವು ಅತ್ತಿಗೆ–ಮೈದುನರ ಪರಸ್ಪರ ಒಪ್ಪಿಗೆ ಇದ್ದರೆ ಮಾತ್ರ ನಡೆಯುತ್ತದೆ. ಅತ್ತಿಗೆ–ಮೈದುನರನ್ನು ಒಂದುಗೂಡಿಸುವುದಷ್ಟೆ ಇಲ್ಲಿಯ ವಿಶೇಷತೆ. ಉಳಿದ ಯಾವುದೇ ಶಾಸ್ತ್ರಗಳು ಇಲ್ಲಿಲ್ಲ. ಅಣ್ಣನ ಜವಾಬ್ದಾರಿಯನ್ನು ಹೊತ್ತು ತಮ್ಮನು ಸಂಸಾರವನ್ನು ನಡೆಯಿಸಿಕೊಂಡು ಹೋಗಬೇಕಷ್ಟೆ ಒಂದು ವೇಳೆ ತಮ್ಮನಿಗೆ ಮೊದಲೇ ಮದುವೆಯಾಗಿದ್ದರೆ ವಿಧವೆಯು ಬೇರೆ ಪುರುಷನನ್ನು ಮದುವೆ ಮಾಡಿಕೊಳ್ಳಬಹುದು. ಆದರೆ ಮಕ್ಕಳಾಗಿದ್ದರೆ ಮೈದುನನಿಗೆ ಒಪ್ಪಿಸಿ ಹೋಗಬೇಕಾಗುತ್ತದೆ. ಕೆಲವು ವಿಧವೆಯರು ಮರುಮದುವೆಗೆ ಒಪ್ಪದೆ ಮಕ್ಕಳ ಜೊತೆಗೆ ಇದ್ದು ಜೀವನವನ್ನು ನಡೆಯಿಸುತ್ತಾರೆ.

ಲಂಬಾಣಿಗರಲ್ಲಿ ಪ್ರಮುಖವಾಗಿ 'ಜಾತ್' ಹಾಗೂ 'ಭುಕ್ಯಾ' ಎಂಬ ಎರಡು ಗೋತ್ರಗಳು ಇವೆ. ಸಗೋತ್ರ ವಿವಾಹ ನಿಷಿದ್ಧವಾಗಿದೆ. ಸಾಮಾನ್ಯವಾಗಿ ಲಂಬಾಣಿಗರು ಕನ್ಯೆಯನ್ನು ನೋಡಲು ಹೆಣ್ಣಿನವರ ಮನೆಗೆ ಹೋಗುತ್ತಾರೆ. ಈ ಸಮಾಜದಲ್ಲಿ ಪೂರ್ವದಿಂದಲೂ ಹೆಣ್ಣಿನ ತಂದೆ–ತಾಯಿಗಳಿಗೆ 'ತೆರ' ಅಥವಾ 'ಕನ್ಯಾಶುಲ್ಕ' ಕೊಟ್ಟು ವಿವಾಹವಾಗುವ ವಾಡಿಕೆ ಇದೆ. ಇದು ಈಗಲೂ ಉಳಿದುಕೊಂಡು ಬಂದಿದೆ. ಇದಕ್ಕೆ ಅವರು 'ಕರಾರ್' ಎನ್ನುವರು. ಇದನ್ನು ಪಶುವಿನ ರೂಪದಿಂದ ಹಾಗೂ ಹಣದ ರೂಪದಿಂದಲೂ ಕೊಡುವ

ವಾಡಿಕೆಯಿದೆ. ಗೋವುಗಳನ್ನು ಕೊಟ್ಟರೆ 'ರಾಂಸಡೀ ಕರಾರ್' ಎಂದೂ ಹಣವನ್ನು ಕೊಟ್ಟರೆ 'ವಾಂಸಳೀ ಕರಾರ್' ಎಂದೂ ಕರೆಯುತ್ತಾರೆ. ಲಂಬಾಣಿಗರು ಈ 'ತೆರ' ಕೊಡದೆ ಮದುವೆಯಾಗುವುದಿಲ್ಲ. ಎಂತಹ ಕಠಿಣ ಪರಿಸ್ಥಿತಿಯಲ್ಲಿಯೂ ಮೊದಲು 'ಕರಾರ್' ಮುಟ್ಟಿಸಿದ ಮೇಲೆಯೇ ಮುಂದಿನ ಕಾರ್ಯಕ್ಕೆ ತೊಡಗುತ್ತಾರೆ. ಕಾರಣ 'ತೆರ' ಕೊಡದೆ ಮದುವೆ ಮಾಡಿಕೊಂಡರೆ ಸಮಾಜದಲ್ಲಿ ಒಂದು ಬಗೆಯ ಅವಮಾನಕ್ಕೆ ಗುರಿಯಾಗಬೇಕಾಗುತ್ತದೆ. ಅಲ್ಲದೆ ಮುಂದೆ ಸಂಸಾರದಲ್ಲಿ ಯಾವುದಾದರೂ ಕಾರಣದಿಂದ ವೈಷಮ್ಯ ಉಂಟಾಗಿ ಹೆಣ್ಣು ತವರು ಮನೆ ಸೇರಿದರೆ ಗಂಡನಿಗೆ ಅವಳ ಮೇಲೆ ಯಾವ ಅಧಿಕಾರವೂ ಉಳಿಯದು. ಇದರಿಂದ ಇವರಲ್ಲಿ ಇಂದಿಗೂ 'ಕರಾರ್' ಕೊಡುವ ಪದ್ಧತಿ ಬಳಕೆಯಲ್ಲಿದೆ. ವರದಕ್ಷಿಣೆಯ ಪಿಡುಗು ಇವರಲ್ಲಿ ಮೊದಮೊದಲು ಇದ್ದಂತಿಲ್ಲ. ಕಾಲಮಾನ ಪರಿಸ್ಥಿತಿ, ಪರಿಸರ ಪ್ರಭಾವ ಹಾಗೂ ವಿದ್ಯಾವಂತರ ಹೆಚ್ಚಳದಿಂದಾಗಿ ಕ್ರಮೇಣ ಇವರಲ್ಲಿಯೂ ವರದಕ್ಷಿಣೆಯ ಹಾವಳಿ ಸಾಕಷ್ಟು ಪ್ರಮಾಣದಲ್ಲಿ ಕಂಡುಬರುತ್ತದೆ.

**ಜೀವನ ಸಂಗಾತಿಗಳ ಆಯ್ಕೆ:** ಕುಟುಂಬದಲ್ಲಿಯ ಗಂಡು ಹಾಗೂ ಹೆಣ್ಣಿಗೆ ಸರಿಯಾದ ಬಾಳ ಸಂಗಾತಿಗಳನ್ನು ಆಯ್ಕೆ ಮಡುವುದು ಹಿರಿಯರ ಆದ್ಯ ಕರ್ತವ್ಯವಾಗಿದೆ. ಪ್ರತಿಯೊಂದು ಸಮಾಜದಲ್ಲಿಯೂ ವರ ಅಥವಾ ಕನ್ಯಾನ್ವೇಷಣೆಯಲ್ಲಿ ಕೆಲವೊಂದು ನಿಯಮಗಳನ್ನು ಅನುಸರಿಸುತ್ತಾರೆ. ಲಂಬಾಣಿಗರು ಸಾಮಾನ್ಯವಾಗಿ ಕನ್ಯಾನ್ವೇಷಣೆಗಾಗಿ ಹೆಣ್ಣಿನವರ ಮನೆಗೆ ಹೋಗುತ್ತಾರೆ. ಕನ್ಯೆಯು ನಾಲ್ಕು ಜನ ಹಿರಿಯರ ಮನಸ್ಸಿಗೆ ಬಂದರೆ ವಿವಾಹ ನಿಶ್ಚಿತಾರ್ಥ ಕಾರ್ಯವಾದಂತೆಯೇ. ವಧು–ವರರ ಯಾವ ಒಪ್ಪಿಗೆಯನ್ನೂ ಕೇಳುವುದಿಲ್ಲ. ಗುರು–ಹಿರಿಯರ ಈ ಒಪ್ಪಿಗೆಯ ಕಾರ್ಯಕ್ಕೆ ಅವರು 'ಕಾನಸಾಮಳಿ'(ಕಿವಿಮಾತು) ಎಂದು ಕರೆಯುತ್ತಾರೆ. ಇದೇ ಅವರ ವಿವಾಹದ ಮೊದಲ ಹೆಜ್ಜೆಯಾಗಿದೆ. ಕನ್ಯಾನ್ವೇಷಣೆಯ ಈ ಸಮಯದಲ್ಲಿ ವರನ ಕಡೆಯವರು ವಧುವಿನ ತಾಂಡಾದ ನಾಯಕನಿಗೆ 'ಕನ್ಯಾ ನಿರ್ಧಾರಿತ ಶುಲ್ಕ'ವನ್ನು ಕೊಡಬೇಕು. ಇದಕ್ಕೆ 'ಸಾಕ್' ಎಂದು ಹೆಸರು. ಈ ಶುಲ್ಕವನ್ನು ಕೊಡದೇ ಹೋದಲ್ಲಿ ಆ ಕನ್ಯಾ ನಿರ್ಧಾರ ಸುಳ್ಳಾಗುವ ಸಂಭವ ಹೆಚ್ಚು. ಈ 'ಸಾಕ್' ಒಂದೆರಡು ರೂಪಾಯಿ ಮಾತ್ರ ಇರುತ್ತದೆ. ಕನ್ಯೆಯು ಸಾಮಾನ್ಯವಾಗಿ ರೂಪವತಿಯೂ, ಸದ್ಗುಣಿಯೂ ಹಾಗೂ ವರನಿಗಿಂತ ಒಂದೆರಡು ವರ್ಷ ಚಿಕ್ಕವಳೂ ಆಗಿರಬೇಕು. ಲಂಬಾಣಿಗರಲ್ಲಿ ಹೆಣ್ಣು ಮೈನೆರೆತ ಒಂದೆರಡು ವರ್ಷದೊಳಗಾಗಿ ಮದುವೆ ಮಾಡಿ ಕೊಡುತ್ತರೆ. ಆದರೂ ಸಾಮಾನ್ಯವಾಗಿ ಲಂಬಾಣಿಗರು ಹೆಣ್ಣಿಗೆ ಕನಿಷ್ಠ ೧೪ ರಿಂದ ೧೫ ವರ್ಷ, ಗಂಡಿಗೆ ೧೬ ರಿಂದ ೧೮ ವರ್ಷದ ಪ್ರಾಪ್ತ ವಯಸ್ಕರಿಗೆ ಮದುವೆ ಮಾಡುತ್ತಾರೆ. ಬಾಲವಿವಾಹ ಪದ್ಧತಿಯನ್ನೂ ಇವರಲ್ಲಿ ಕಾಣಬಹುದು.

**ನಿಶ್ಚಯ ಕಾರ್ಯ:** ನಿಶ್ಚಿತಾರ್ಥಕ್ಕಾಗಿ ಈ ಮೊದಲೇ ನಿರ್ಧರಿಸಿದ ಹೆಣ್ಣಿನವರ ಮನೆಗೆ ವರನ ತಾಯಿ–ತಂದೆಗಳು ಹಾಗೂ ನಾಲ್ಕಾರು ಜನ ಹಿರಿಯರು ಹೋಗುತ್ತಾರೆ. ಈ ಕಾರ್ಯಕ್ಕೆ ಅವರು 'ಸಗಾಯಿ'(ನಿಶ್ಚಿತಾರ್ಥ) ಎಂದು ಕರೆಯುತ್ತಾರೆ. ತಾಂಡಾದ ನಾಯಕ ಹಾಗೂ ಹಿರಿಯರು ಸೇರಿ ಗಂಡಿನವರ ಜೊತೆಗೆ ನಿಶ್ಚಯವನ್ನು ಖಚಿತಪಡಿಸಿಕೊಳ್ಳುತ್ತಾರೆ.

**ಸಕ್ರೀ ಕಾರ್ಯ:** ಮಾತುಕತೆ ನಿರ್ಧಾರವಾದ ಮೇಲೆ ಕುಲಸ್ಥರ ಕಾಣಿಕೆ ಹದಿನಾರು ರೂಪಾಯಿ ಹಾಗೂ ಗುರುಕಾಣಿಕೆ ಒಂದೂಕಾಲು ರೂಪಾಯಿಯನ್ನು ವರನ ಕಡೆಯವರು ಕನ್ಯಾ ಪಿತೃಗಳಿಗೆ ಸಲ್ಲಿಸುತ್ತಾರೆ. ಇದಾದ ಬಳಿಕ 'ಸಗಾಯಿ'ಯು ಮತ್ತೊಂದು ಹಣಕ್ಕೆ ಮುಟ್ಟುತ್ತದೆ. ಇದೇ ಸಕ್ರೀ ಕಾರ್ಯ. ಇದಕ್ಕೆ 'ಗೋಳಖಾಯೇರೊ' ಎನ್ನುತ್ತಾರೆ. ಸಾಮಾನ್ಯವಾಗಿ ಇಲ್ಲಿಂದಲೇ ಕನ್ಯೆಯು ಓಡಣಿಯಿಂದ ತನ್ನ ಮುಖ ಮುಚ್ಚಿಕೊಳ್ಳಲು ಪ್ರಾರಂಭಿಸುತ್ತಾಳೆ. ಬಹುಶಃ ವರನು ತನ್ನ ಮುಖವನ್ನು ನೋಡಬಾರದೆಂಬ ಭಾವನೆ ಇಲ್ಲಿ ಅಡಕವಾಗಿರುತ್ತದೆ.

**ಮದುವೆ ಸಮಾರಂಭ:** ಲಂಬಾಣಿಗರಲ್ಲಿ ಮದುವೆ ಒಂದು ಪವಿತ್ರ ಕಾರ್ಯ. ಎರಡು ಹೃದಯಗಳನ್ನು ಬೆಸೆಯುವ ಪವಿತ್ರ ಸಂಬಂಧ ಇದಾಗಿದೆ. "ಮದುವೆ ಮನುಷ್ಯ ಜೀವನದ ಘಟ್ಟ, ಪ್ರಕೃತಿಯ ಶಕ್ತಿಗೆ ಸಂಸ್ಕೃತಿಯ ದೀಕ್ಷೆ ಕೊಡುವ ಸಂದರ್ಭ ಇದು. ಗಂಡು, ಹೆಣ್ಣು ಪ್ರೌಢಾವಸ್ಥೆಗೆ ಬಂದಾಗ, ಸಮಾಜ ಬಾಂಧವರೆಲ್ಲರ ಒಪ್ಪಿಗೆ ಪಡೆದು ಅವರನ್ನು ಗೃಹಸ್ಥಾಶ್ರಮ ಜೀವನಕ್ಕೆ ಕೊಂಡೊಯ್ಯುವ ಸೋಪಾನ. ಮದುವೆ ಪ್ರತಿಯೊಂದು ಜನಾಂಗದ ಸ್ವೀಕೃತ ಮೌಲ್ಯಗಳನ್ನು ಪ್ರತಿಬಿಂಬಿಸುತ್ತದೆ" ಎನ್ನುತ್ತಾರೆ.

ಲಂಬಾಣಿಗರ ಮದುವೆ, ಹಿಂದೂಗಳಂತೆ ಒಂದೆರಡೂ ದಿನಗಳಲ್ಲಿ ಮುಗಿದು ಹೋಗುವ ಸಮಾರಂಭವಲ್ಲ; ಕನಿಷ್ಠ ಪಕ್ಷ ೭–೮ ದಿನಗಳಾದರೂ ಬೇಕಾಗುತ್ತದೆ. 'ಮದುವೆ' ಎಂದಾಕ್ಷಣ ಈ ಜನರಿಗೆ ಎಲ್ಲಿಲ್ಲದ ಸಂಭ್ರಮ, ಮೋಜು. ಸಾಮಾನ್ಯವಾಗಿ ಇವರ ಮದುವೆ ಸಮಾರಂಭಗಳು ಮಳೆಗಾಲದಲ್ಲಿ ನಡೆಯದೆ ಹೆಚ್ಚಾಗಿ ಬೆಳದಿಂಗಳ ರಾತ್ರಿಯಲ್ಲಿಯೇ ನಡೆಯುತ್ತವೆ. ಕಾರಣ ಹಗಲಿನಲ್ಲಿ ತಾಂಡಾದ ಜನರೆಲ್ಲ ಹೊಟ್ಟೆ ಪಾಡಿಗಾಗಿ ದುಡಿಯಲು ಹೋಗುವುದರಿಂದ, ಹೆಚ್ಚಾಗಿ ರಾತ್ರಿ ಸಮಯದಲ್ಲಿ ಎಲ್ಲರೂ ಮನೆಯಲ್ಲಿ ಇರುವುದರಿಂದ ಮದುವೆಯ ಬಹುಪಾಲು ಕಾರ್ಯಗಳು ಬೆಳದಿಂಗಳ ರಾತ್ರಿಯಲ್ಲಿಯೇ ಕೈಕೊಳ್ಳುವರೆಂದು ತಿಳಿಯುತ್ತದೆ. "ಮೊಘಲರು ಇವರ ಶತ್ರುಗಳಾಗಿದ್ದರಿಂದ ಅವರ ಸೈನಿಕರು ಹಗಲಿನಲ್ಲಿ ಕನ್ಯಾಪಹರಣ ಮಾಡುತ್ತಿದ್ದರು. ಆದಕಾರಣ ಬಂಜಾರರು ಸುರಕ್ಷತೆಗಾಗಿ ಮದುವೆ ಕಾರ್ಯಗಳನ್ನು ರಾತ್ರಿ ಸಮಯದಲ್ಲಿ ಮಾಡುವುದು ಯೋಗ್ಯವೆಂದು ಭಾವಿಸಿದ್ದರು"[೯] ಎನ್ನುತ್ತಾರೆ.

---

೯. ಶ್ರೀಮತಿ. ಪುಸ್ಪಲತಾ ರಾಂಪುರೆ, ಬಂಜಾರ ಲೋಕ, ಗೀತೋಂಕಾ ಸಮೂಹ, ೧೯೭೫.

ಲಂಬಾಣಿಗರ ಮದುವೆ ಸಮಾರಂಭ ಸಾಮಾನ್ಯವಾಗಿ ವರನ ಮನೆಯಿಂದಲೇ ಪ್ರಾರಂಭವಾದರೂ ಬಹುಪಾಲು ಕಾರ್ಯಗಳೆಲ್ಲ ಹೆಣ್ಣಿನವರ ಮನೆಯಲ್ಲಿಯೇ ನಡೆಯುತ್ತವೆ. ಪ್ರಾರಂಭದಿಂದ ಕೊನೆಯವರೆಗೂ ವ್ಯಂಗ್ಯ ಹಾಗೂ ಶೃಂಗಾರ ಗೀತೆಗಳ ಸುರಿಮಳೆ ಇಲ್ಲಿ ಕಾಣುತ್ತೇವೆ. ಇವರ ಮದುವೆಗಳಲ್ಲಿ ವಿಶೇಷ ಪ್ರಕಾರದ ವಾದ್ಯಗಳಿಲ್ಲ; ಮಂಗಳಕರವಾದ ಹಾಡು, ನೃತ್ಯಗಳೇ ಈ ಕೆಲಸವನ್ನು ಪೂರೈಸುತ್ತವೆ.

**ಸಾಡಿತಾಣೇರೊ:** ಒಂದು ಶುಭ ಮುಹೂರ್ತ ನೋಡಿ ಮನೆಯ ಎದುರಿನಲ್ಲಿ ಒಂದು ವಿಶೇಷವಾದ ಮಂಟಪ ಹಾಕುತ್ತಾರೆ. ಇದಕ್ಕೆ ಅವರು 'ಸಾಡಿ ತಾಣೇರೊ' ಅಥವಾ 'ಮಂಡೇವಡೊ ಉಬೋಕರೇರೊ' ಎಂದು ಹೇಳುತ್ತಾರೆ. ಸಾಮಾನ್ಯವಾಗಿ ಇಲ್ಲಿಂದಲೇ ಮದುವೆ ಕಾರ್ಯ ಪ್ರಾರಂಭಗೊಳ್ಳುತ್ತದೆ. ಮದುಮಗನು ತಾಂಡಾದಲ್ಲಿಯ ಪ್ರತಿಯೊಂದು ಮನೆಗಳಿಗೆ ಹೋಗಿ ಹಿರಿಯರಿಗೆ ನಮಸ್ಕರಿಸಿ ಆಮಂತ್ರಣ ಕೊಟ್ಟು ಬರುತ್ತಾನೆ. ಆಮಂತ್ರಿತರಿಗೆ ಕುಡಿಯಲು ಸರಾಯಿ ಕೊಡುತ್ತಾರೆ. ಮಂಟಪದ ಮಧ್ಯದಲ್ಲಿ ನೆಲ ಸಾರಿಸಿ, ರಂಗೋಲಿ ಹಾಕಿ, ಜೋಡಿ ಕಳಸವನ್ನು ಹೂಡುತ್ತಾರೆ. ಈ ಕಾರ್ಯಕ್ಕೆ ದೂರದ ಸಂಬಂಧಿಗಳೂ ಬಂದು ಪಾಲ್ಗೊಳ್ಳುತ್ತಾರೆ. ರಾತ್ರಿಯೆಲ್ಲ ಕುಡಿದು ಕುಣಿದು ತಣಿಯುತ್ತಾರೆ.

**ಮುಂಜಿವೆ (ವದಾಯಿ):** ಸಾಮಾನ್ಯವಾಗಿ ಅಂದು ರಾತ್ರಿ ಮನೆಯಲ್ಲಿ 'ವದಾಯಿ' ಎನ್ನುವ ಒಂದು ಮುಂಜಿವೆ ಕಾರ್ಯವಿರುತ್ತದೆ. ಇದು ಲಗ್ನಪೂರ್ವದಲ್ಲಿ ಗಂಡಿಗೆ ಕೊಡುವ ಧರ್ಮದೀಕ್ಷೆ ಹಾಗೂ ಗುರು, ದೇವತೆಗಳ ಪೂಜಾಕಾರ್ಯವಾಗಿದೆ. ಗುರು ಗೋಸಾಯಿ ಬಾಬಾರ ಸ್ಮೃತಿಗಾಗಿ ಲಗ್ನಪೂರ್ವದಲ್ಲಿ ಗಂಡಿಗೆ ಬಲಭುಜಕ್ಕೆ ಹಾಕುವ ಧಾರ್ಮಿಕ ಮುದ್ರೆಗೆ 'ವದಾಯಿರದಾಗ' ಎಂದು ಕರೆಯುತ್ತಾರೆ. ಈ ಸಂದರ್ಭದಲ್ಲಿ ಮುತ್ತೈದೆಯರು ಹಾಡುವ ಧಾರ್ಮಿಕ ಹಾಡುಗಳಿಗೆ 'ವದಾವೊ' ಎಂದು ಹೆಸರು.ಈ ಹಾಡು ಆಶೀರ್ವಚನ ಹಾಗೂ ದೇವತಾಸ್ಮರಣೆಯಿಂದ ಕೂಡಿರುತ್ತದೆ. ಬರೆ ಹಾಕುವ ಈ ಸಂದರ್ಭದಲ್ಲಿ ಗಂಡಸರು ಗಾಯತ್ರಿ ಸಮಾನವಾದ ಮಂತ್ರವನ್ನು ಉಚ್ಚರಿಸುತ್ತಾರೆ. ಒಂದು ಐತಿಹ್ಯದ ಪ್ರಕಾರ ಇವರ ಪೂರ್ವಜರು ಮೂರು ಜನ ಬ್ರಾಹ್ಮಣ ಕನ್ಯೆಯರನ್ನು ಲಗ್ನವಾಗುವ ಪೂರ್ವದಲ್ಲಿ ಗುರು ಗೋಸಾಯಿಬಾಬಾ ಆಜ್ಞಾಪಿಸಿರುವ ಮಂತ್ರೋಚ್ಚಾರಣೆಯನ್ನೇ ಇಂದು ಬಂಜಾರರು ವಿವಾಹಪೂರ್ವದಲ್ಲಿ ವದಾಯಿ ಸಂದರ್ಭದಲ್ಲಿ ಹೇಳುವ ಪರಿಪಾಠವಿದೆ.

'ವದಾಯಿ' ಸಂಸ್ಕಾರಕ್ಕಾಗಿ ಮನೆಯಲ್ಲಿ ಒಂದೆಡೆಗೆ ನೆಲಸಾರಿಸಿ, ರಂಗೋಲಿ ಹಾಕಿ ಅದರ ಎರಡೂ ಬದಿಗೆ ಏಳೇಳರಂತೆ ಮಾದ್ಲಿಯ ಕೋಳಿಗಳನ್ನು(ಸಾತಖಂಡ) ಇಡುತ್ತಾರೆ.

ನಡುವೆ ತುಂಬಿದ ಕಳಸವನ್ನಿಟ್ಟು, ದೀಪಹಚ್ಚಿ ಪಕ್ಕದಲ್ಲಿ ವರನನ್ನು ಹಾಗೂ ವರನ ತಮ್ಮನನ್ನು ಕೂರಿಸುತ್ತಾರೆ. ತಾಂಡಾದ ನಾಯಕನು ಒಂದು ಗೇಣು ಉದ್ದದ ಬೆಂಡಿಗೆ ಸಾಧಾರಣವಾದ ಸೂಜಿಯನ್ನು ಸಿಲುಕಿಸಿ, ಅದನ್ನು ದೀಪಕ್ಕೆ ಹಿಡಿದು ಚನ್ನಾಗಿ ಕಾಯಿಸಿ ಇಬ್ಬರಿಗೂ ಬಲ ಭುಜಗಳ ಮೇಲೆ ಬರೆ ಹಾಕುತ್ತಾನೆ. ಈ ರೀತಿ ಬರೆ ಹಾಕುವುದರಿಂದ ಅವರಿಬ್ಬರೂ ವಿವಾಹ ಯೋಗ್ಯರಾದರೆಂಬುದು ಸಾಮಾನ್ಯ ಗ್ರಹಿಕೆ. ಎಲ್ಲಿಯವರೆಗೆ ಈ 'ವದಾಯಿ' ಸಂಸ್ಕಾರ ವಾಗುವುದಿಲ್ಲವೋ ಅಲ್ಲಿಯವರೆಗೆ ಅವರನ್ನು ವಿವಾಹಕ್ಕೆ ಅಯೋಗ್ಯರೆಂದು ಪರಿಗಣಿಸುತ್ತಾರೆ.

**ಮದುಲಿಂಗನನ್ನು ಹೊರ ತೆಗೆಯುವುದು:** ಮದುಲಿಂಗನನ್ನು ಸ್ನಾನ ಮಾಡಿಸಿ, ವಿಶೇಷ ಪ್ರಕಾರದ ಹೊಸ ಹೊಸ ಉಡುಗೆ-ತೊಡುಗೆಗಳನ್ನು ಹಾಕಿ ವೀರಯೋಧನಂತೆ ಅಲಂಕರಿಸುತ್ತಾರೆ. ಮೈಗೆ ಕೆಂಪು ಬಟ್ಟೆಯ ಪೈಜಾವು, ಅಂಗಿ, ತಲೆಗೆ 'ಮೊಳಿಯಾ'(ರುಮಾಲಿನ ಆಕಾರದ್ದು) ಸುತ್ತುತ್ತಾರೆ. ತಲೆಯ ಮೇಲೆ ಕೆಂಪು ಶಾಲನ್ನು ಹೊದಿಸುತ್ತಾರೆ. ಸೊಂಟಕ್ಕೆ 'ಫೇಂಟಾ'(Belt) ಕಟ್ಟುತ್ತಾರೆ. ಅಲ್ಲದೆ ಎಲ್ಲ ಬೆರಳಿಗೆ ಬೆಳ್ಳಿ ಇಲ್ಲವೆ ತಾಮ್ರದ ಉಂಗುರ, ಕಿವಿಗೆ ಓಲೆ, ಮುಂಗೈಗೆ ಬೆಳ್ಳಿ ಕಡಗಗಳನ್ನು ಹಾಕುತ್ತಾರೆ. ಬಗಲಿಗೆ ಎಲಿ, ಅಡಿಕೆ ಮುಂತಾದ ಸಾಮಗ್ರಿಗಳನ್ನು ಇಡುವ ಚೀಲವನ್ನು(ಝೋಲಣಾ) ಹಾಕುತ್ತಾರೆ. ಕಾಲಲ್ಲಿ 'ಖಾಚಡಾ'(ಮುಸ್ಲೀಮರು ಮುದುವೆಯಲ್ಲಿ ಉಪಯೋಗಿಸುವ ಮೇಲ್ಮುಖವಾಗಿರುವ ಚೂಪಾದ ಬೂಟುಗಳು) ಧರಿಸುತ್ತಾರೆ ನಡಕ್ಕೆ ಡಬ್ಬುಣವನ್ನು ಸಿಲುಕಿಸುತ್ತಾರೆ. ಹಾಗೆಯೇ ಬೆಳ್ಳಿ ಉಡುದಾರವನ್ನು (ಕಣದೋರೊ) ಹಾಗೂ 'ಝುಂಡಿ' ಕಟ್ಟುತ್ತಾರೆ.

ಹೀಗೆ ಅಲಂಕೃತನಾದ ಮದುಲಿಂಗನನ್ನು ಕುಲವೇವತಾ ಪೂಜೆ ಮಾಡಿಸಿ ಮಂಟಪಕ್ಕೆ ಕರೆ ತರುತ್ತಾರೆ. ಹೆಣ್ಣಿನ ಹೊರಡುವುದಕ್ಕಿಂತ ಮುಂಚಿತವಾಗಿ ಇವನಿಂದ ಕಳಸ ಪೂಜೆ ಮಾಡಿಸುತ್ತಾರೆ. ಸೇರಿದ ಹಿರಿ-ಕಿರಿಯರಿಗೆಲ್ಲ 'ಕಿಚಡಿ'ಯೊಂದಿಗೆ ಬೆಲ್ಲದ ಪಾನಕವನ್ನು ಕೊಡುತ್ತಾರೆ. ಮದುವಣಿಗನು ಗುರು-ಹಿರಿಯರ ಅನುಮತಿಯ ಮೇರೆಗೆ ತಾಂಡಾದ ನಾಯಕನಿಗೆ ಪಾನಕ ಹಾಗೂ ಕಿಚಡಿ ಕೊಟ್ಟು ನಮಸ್ಕರಿಸುತ್ತಾನೆ.

**ವರನಿಗೆ ಬೀಳ್ಕೊಡುಗೆ:** ಒಮ್ಮೆ ಮನೆಯಿಂದ ಹೊರತೆಗೆದ ಮದುವಣಿಗನಿಗೆ, ವಿವಾಹ ಮುಗಿದು ವಧುವನ್ನು ಮನೆ ತುಂಬಿಸಿಕೊಳ್ಳುವವರೆಗೂ ಆತನಿಗೆ ಮನೆಯಲ್ಲಿ ಪ್ರವೇಶವಿಲ್ಲ. ಹೆಣ್ಣಿನ ಮನೆಗೆ ಬೀಳ್ಕೊಡುವ ಪೂರ್ವದಲ್ಲಿ ತಾಂಡಾದ ಜನರು ತಮ್ಮ ತಮ್ಮ ಯೋಗ್ಯತಾನುಸಾರವಾಗಿ ವರನಿಗೆ ಕಾಣಿಕೆ ಸಲ್ಲಿಸುತ್ತಾರೆ. ಸಾಯಂಕಾಲ ಮದುವಣಿಗನನ್ನು 'ಲೇರಿಯಾ' (ಸಂಗಡಿಗ)ನ ಜೊತೆಗೆ ಹೆಣ್ಣಿನ ಮನೆಗೆ ಬೀಳ್ಕೊಡುತ್ತಾರೆ. ಹೀಗೆ ಬೀಳ್ಕೊಡುವಾಗ ಹಿರಿಯರು, ಇವರಿಬ್ಬರಿಗೂ ಹಲವಾರು ಉಪದೇಶಪರವಾದ ಮಾತುಗಳನ್ನು ಹೇಳುತ್ತಾರೆ. 'ಲೇರಿಯಾ'

ಅಥವಾ 'ಲಾರಿಯಾ' ಎನ್ನುವ ಈ ವ್ಯಕ್ತಿ ಒಬ್ಬ ವಿದೂಷಕನ ಸಮಾನವಾಗಿದ್ದಾನೆ. ಈತನು ಬಹಳ ಚಾಣಾಕ್ಷನೂ, ಹರಿತವಾದ ನಾಲಗೆವುಳ್ಳವನೂ, ಅನುಭವಿಯೂ ಹಾಗೂ ಮುತ್ಸದ್ಧಿಯೂ ಆಗಿರಬೇಕು. ಏಕೆಂದರೆ ಮದುವೆ ಮುಗಿಯುವವರೆಗೂ ವರನ ಜೊತೆಗೆ ಪ್ರತಿಯೊಂದು ಕಾರ್ಯ-ಕಲಾಪಗಳಲ್ಲಿ ಈತನು ಸಹಾಯಕನಾಗಿ ಕೆಲಸ ನಿರ್ವಹಿಸ ಬೇಕಾಗುತ್ತದೆ. ಅಲ್ಲದೆ ಹೆಣ್ಣಿನವರು ಕೇಳಿದ ಪ್ರಶ್ನೆಗಳಿಗೆ ನಿರರ್ಗಳವಾಗಿ ಉತ್ತರ ಕೊಡಲು ಸಮರ್ಥನಿರಬೇಕಾಗುತ್ತದೆ. ಒಟ್ಟಿನಲ್ಲಿ ಲೇರಿಯಾನ ಮೇಲೆ ಗುರುತರವಾದ ಜವಾಬ್ದಾರಿ ಇರುತ್ತದೆ.

ಹೆಣ್ಣಿನ ಮನೆಗೆ ಮದುವೆಗೆಂದು ಬೀಳ್ಕೊಡುವ ಈ ಸಂದರ್ಭದಲ್ಲಿ ಲಂಬಾಣಿ ಮಹಿಳೆಯರು ಮದುಮಗನ ವೀರತನ ಹಾಗೂ ಆತನ ನಯವಂತಿಕೆಯನ್ನು ಕುರಿತು ಇಂಪಾಗಿ ಹಾಡುತ್ತಾರೆ. ಮದುವೆ ಎಂಬುದು ಇವರಿಗೆ ಯುದ್ಧವಿದ್ದ ಹಾಗೆ. ಅದಕ್ಕಾಗಿಯೋ ಏನೊ, ಕೈಯಲ್ಲಿ ಕಠಾರಿ ಹಿಡಿದು ಮಹಾಶೂರನಂತೆ ರಣರಂಗಕ್ಕೆ ಹೋಗುವ ತೆರದಿಂದ ಹೋಗುತ್ತಾನೆ. ಮದುವೆ ಸಂದರ್ಭದಲ್ಲಿ ಯಾವ ಆಪತ್ತು ಬಂದರೂ ಅದನ್ನು ಎದುರಿಸಿ, ಹೆಣ್ಣಿನ ಜೊತೆಗೆ ಬರುವಂತೆ ಉಪದೇಶಿಸುತ್ತಾರೆ.

**ತಿಲಕ ಕಾರ್ಯ**

ಮಾರನೆ ದಿವಸ ನಡೆಯುವ 'ತಿಲಕ ಕಾರ್ಯ'ಕ್ಕೆ ಲಂಬಾಣಿಗಳು 'ಟೀಕೊ ಲಗಾಡೇರೊ' ಎನ್ನುತ್ತಾರೆ. ಹೆಣ್ಣಿನ ಸಹೋದರ ತನ್ನ ಸಹೋದರಿಯ ಹಣೆಗೆ ಅರಿಷಿಣ ತಿಲಕ ಹಚ್ಚುವುದರಿಂದ ಅವಳು ಬೇರೊಬ್ಬರ ವಶವಾದಳೆಂದು ಗ್ರಹಿಕೆ. ಕಂಚಿನ ತಟ್ಟೆಯಲ್ಲಿ ಅರಿಷಿಣ, ಅಕ್ಕಿ ಹಾಗೂ ಹೊಸ ಬಟ್ಟೆಯನ್ನು ಇಟ್ಟುಕೊಂಡು ಎಲ್ಲರಿಗೂ ಮುಟ್ಟಿಸಿ ಸಹೋದರ ವಧುವಿಗೆ ತಿಲಕ ಹಚ್ಚಲು ಸಮೀಪಿಸಿದಾಗ, ಅವಳು ದುಃಖಭರಿತಳಾಗಿ ಒಂದೇ ಸವನೆ ಬಿಕ್ಕಿ ಬಿಕ್ಕಿ ಅಳಲು ತೊಡಗುತ್ತಾಳೆ.

ಈ ರೀತಿಯಾಗಿ ವಧುವು ದುಃಖತಪ್ತಳಾಗಿ ತನ್ನ ಸಂಕಟವನ್ನು 'ಢಾವಲೊ' ಮುಖಾಂತರ ವಾಗಿ ನಿವೇದಿಸುತ್ತಾಳೆ. ಇಲ್ಲಿ ಕರುಣರಸವು ಮಡುವುಗಟ್ಟಿ ನಿಂತಿದೆ. ದುಃಖಪೂರಿತವಾದ ಆಕೆಯ ಈ ನಡಿಗಳನ್ನು ಕೇಳಿ ಯಾರಿಗೆ ತಾನೆ ದುಃಖಬರಲಾರದು? ಎಲ್ಲರ ಕಣ್ಣಲ್ಲೂ ಗಂಗೆ ಹರಿಯುವುದು ಸಹಜವಲ್ಲವೆ? ಕೊನೆಗೆ ಅವಳನ್ನು ಸಂತೈಸುವರು. ನಂತರದಲ್ಲಿ ಬಂದ ಜನಕ್ಕೆಲ್ಲ 'ಕಿಚಡಿ' ಹಾಗೂ 'ಘೋಟಾ' ಹಾಕುವರು. ಇದಕ್ಕೆ 'ಪತಾರಿ ಫೇರೇರೂ' ಎನ್ನುತ್ತಾರೆ.ಮದುವಣಿಗನು ಮೊದಲು ಲೋಟಾ(ಚರಿಗೆ) ತುಂಬಿ 'ಘೋಟಾ'ವನ್ನು ದೇವತೆ

ಗಳಿಗೆ ಸಲ್ಲಿಸಿ ಕಳಸವನ್ನು ಪೂಜಿಸುವನು. ಅನಂತರದಲ್ಲಿ ನಾಯಕ, ಡಾವಸಾಣ ಹಾಗೂ ಇತರರಿಗೆ ಘೋಟಾ ಒಂದು ದೊಡ್ಡ ಕಂಚಿನ ಗಂಗಾಳದಲ್ಲಿ ಅವನಿಗೂ 'ಕಿಚಡಿ' 'ಘೋಟಾ' ವನ್ನು ಹಾಕುತ್ತಾರೆ.

**ಮಾಂಗಲ್ಯ ಧಾರಣ:** ವಧುವಿಗೆ ನಡೆಯುವ ಒಂದು ಪವಿತ್ರ ಸಂಸ್ಕಾರವೇ ಮಾಂಗಲ್ಯ ಧಾರಣ. ಮಾರನೆಯ ದಿನ ಸಾಯಂಕಾಲ ತನ್ನ ತವರಿನ ಮೊದಲಿನ ಬಟ್ಟೆಗಳನ್ನು ತೆಗೆದು ಗಂಡನ ಕಡೆಯವರ ಬಟ್ಟೆ, ಚೂಡೋ ಹಾಗೂ ಘುಗತಿ ಮುಂತಾದ ಮಾಂಗಲ್ಯ ಸೂಚಕವಾದ ಪೋಷಾಕುಗಳನ್ನು ಧರಿಸುತ್ತಾಳೆ. ಚೂಡೋ ಹಾಗೂ ಘುಗರಿಗಳೇ ಇವರ ನಿಜವಾದ ಮಂಗಲ ಸೂತ್ರಗಳಾಗಿವೆ. ಮುತ್ತೈದೆಯರು ಮಂಗಲಕರವಾದ ಹಾಡುಗಳೊಡನೆ ಈ ಕಾರ್ಯವನ್ನು ಮಾಡುತ್ತಾರೆ. ಗಂಡಿನ ಕೈಯಿಂದಲೇ ಹೆಣ್ಣಿನ ತೋಳುಗಳಿಗೆ ದಂತದ ಬಳೆಗಳನ್ನು(ಚೂಡೋ) ಇಡಿಸುತ್ತಾರೆ. ಈ ಸಂದರ್ಭದಲ್ಲಿ ವೃದ್ಧ ಸ್ತ್ರೀಯರು ವಧುವಿಗೆ (ನವಲೇರಿ) ಸ್ವತಂತ್ರವಾಗಿ ಆಳುವ ಹಾಡುಗಳನ್ನು 'ಢಾವಲೊ' ಕಲಿಸುತ್ತಾರೆ.

**ಗೋಟ್ ಸಂಪ್ರದಾಯ:** 'ಗೋಟ್' ಎನ್ನುವ ಈ ಶಾಸ್ತ್ರ, ಲಂಬಾಣಿಗರು ತಮ್ಮ ಪೂರ್ವಜನರಿಗೆ ಶಾಂತಿ ಮಾಡುವುದಾಗಿದೆ. ಇದೊಂದೇ ಇವರ ಮದುವೆಯ ಊಟ. ಅಂದು ಹೋತಮರಿ ಬಲಿಕೊಟ್ಟು ಅಡಿಗೆ ಮಾಡಿ ಪೂರ್ವಜರಿಗೆ ಶಾಂತಿ ಮಾಡಿದ ಮೇಲೆ ತಾಂಡಾದ ಬಂಧು-ಬಳಗವನ್ನು ಕರೆದು ಸರಾಯಿಕೊಟ್ಟು ಊಟ ಮಾಡಿಸುತ್ತಾರೆ. ಈ ಗೋಟ್ ಸಂಪ್ರದಾಯವನ್ನು ಕುರಿತಂತೆ ಅವರಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಹೀಗಿದೆ: ಪೂರ್ವದಲ್ಲಿ ಅಲೆಮಾರಿಗಳಾದ ಲಂಬಾಣಿಗರು ಯಾವುದೋ ಸ್ಥಳದಲ್ಲಿ ಇದ್ದಕ್ಕಿದ್ದಂತೆ ಮದುವೆ ಏರ್ಪಡಿಸಿ ಎಲ್ಲ ವಿಧಿ-ವಿಧಾನಗಳನ್ನು ಕಟ್ಟುನಿಟ್ಟಾಗಿ ಮಾಡಿ ಮುಗಿಸಿದ ಮೇಲೆ ಇನ್ನೇನು ದಿಬ್ಬಣ ಹೊರಡಬೇಕೆನ್ನುವಷ್ಟರಲ್ಲಿ ಮೂತ್ರ ವಿಸರ್ಜನೆಗೆಂದು ಹೋದ ಮದುವಣಿಗನು ಮೂರ್ಛೆ ಹೋದನು. ದಿಗ್ಭ್ರಮೆಗೊಂಡು ಬಲ್ಲವರನ್ನು ವಿಚಾರಿಸಲಾಗಿ, ಸ್ಥಳದೋಷ(ಜಮೀರ ಝುಬಾಟೊ)ವೆಂದು ತಿಳಿಯಿತು. ಈ ದೋಷ ನಿವಾರಣೆಗಾಗಿ ಮಣ್ಣಿನ ಎರಡು ಚಿಪ್ಪೆ, ಸೂಜಿ, ಉಪ್ಪು, ಪಂಚ ಪದಾರ್ಥಗಳಿಂದ ಕೂಡಿದ ಹಸಿಬಿಸಿ ಪದಾರ್ಥ, ಎಕ್ಕೆ ಎಲೆ ಇವೆಲ್ಲವುಗಳನ್ನೂ ಸೇರಿಸಿ ಮೂರ್ಛೆ ಹೋದ ಮದುವಣಿಗನಿಗೆ ನೀವಾಳಿಸಿ ಮೂರು ದಾರಿಗಳು ಸೇರಿರುವಲ್ಲಿಗೆ ಇಟ್ಟುಬಂದರು. ಇದಕ್ಕೆ ಅವರು 'ಅವಡ-ಚವಡ' ಎನ್ನುತ್ತಾರೆ. ಸಾಲದ್ದಕ್ಕೆ ಸ್ಥಳದೋಷ ನಿವಾರಣೆಗಾಗಿ ಮರಿಬಲಿಯನ್ನು ಕೊಟ್ಟು ಭೂಮಿಗೆ ರಕ್ತತರ್ಪಣ ಮಾಡಿದರು. ಇದಕ್ಕೆ 'ಜಮೀರ ಗೋಟ್' ಎಂದು ಹೆಸರು. ಹೀಗೆ

ಮಾಡುವುದರಿಂದ ಭೂಮಿಯು ಶಾಂತವಾದಳೆಂದೂ, ದೋಷ ನಿವಾರಣೆಯಾಯಿತೆಂದೂ ಭಾವಿಸುವರು. ಮುಂದೆ ಮದುವೆ ದಿಬ್ಬಣವು ಗಂಡಿನ ತಂಡವನ್ನು ನಿರಾರಂಕವಾಗಿ ಸೇರಿತು. ಲಂಬಾಣಿಗರ ಈ 'ಗೋಟ್'ಶಾಸ್ತ್ರ ಅಂದಿನಿಂದ ಇಂದಿನವರೆಗೂ ಬೆಳೆದು ಬಂದಿದ್ದರೂ ಇಂದು ಅದು ಬೇರೆ ಸ್ವರೂಪವನ್ನು ತಾಳಿದೆ. ಇವರ ಮದುವೆಯು ಪೂರ್ವಜರಿಗೆ ಶಾಂತಿಮಾಡುವ ರೂಪದಲ್ಲಿ 'ಗೋಟ್' ಶಾಸ್ತ್ರದೊಂದಿಗೆ ಕೊನೆಗೊಳ್ಳುತ್ತದೆ.

**ವಧು-ವರರನ್ನು ಬೀಳ್ಕೊಡುವ ಸಮಾರಂಭ:** ಕೊನೆಯದಾಗಿ, ವಧು-ವರರನ್ನು ಬೀಳ್ಕೊಡುವ ಸಮಾರಂಭಕ್ಕೆ ಅವರು 'ವಳಾಯೇರೊ' ಎನ್ನುತ್ತಾರೆ. ಈ ಸಂದರ್ಭದಲ್ಲಿ ವಧುವನ್ನು ಮನೆಯಿಂದ ಹೊರ ತೆಗೆಯುವುದೆಂದರೆ ತಾಯ್ತಂದೆಗಳಿಗೆ, ಆಪ್ತೇಷ್ಟರಿಗೆ ಹಾಗೂ ಅಣ್ಣ-ತಮ್ಮಂದಿರಿಗೆ ಸಾಕುಸಾಕಾಗಿ ಹೋಗುತ್ತದೆ. ಇದು ಅತ್ಯಂತ ದುಃಖದ ಸನ್ನಿವೇಶವಾಗಿದೆ.

**ಹವೇಲಿ:** ಬೀಳ್ಕೊಡುವ ಸಮಯದಲ್ಲಿ ವಧು(ನವಲೇರಿ)ವು ತನ್ನ ಮನೆಗೆ, ಬಂಧುಬಳಗಕ್ಕೆ ಹಾಗೂ ತಾಂಡಾದ ಜನಗಳನ್ನು ಉದ್ದೇಶಿಸಿ ಶುಭಕೋರುವುದು ಅಥವಾ ಪ್ರಾರ್ಥಿಸಿಕೊಳ್ಳುವುದೇ 'ಹವೇಲಿ' ಆಗಿದೆ. ಈ ಹವೇಲಿ ಲಂಬಾಣಿಗಳ ಮದುವೆಯಲ್ಲಿ ಒಂದು ಮಹತ್ವಪೂರ್ಣವಾದ ಸನ್ನಿವೇಶವಾಗಿದೆ. ಯಾವುದೇ ಸ್ತ್ರೀಯರು ತನ್ನ ಜೀವನದಲ್ಲಿ ಕೇವಲ ಒಂದೇ ಸಲ ಈ 'ಹವೇಲಿ'ಯನ್ನು ಮಾಡುತ್ತಾಳೆ. ಆದ್ದರಿಂದ ಇದನ್ನು ಪ್ರತಿಯೊಬ್ಬರೂ ಬಹಳ ಮಹತ್ವಪೂರ್ಣ ಹಾಗೂ ಪವಿತ್ರವಾದುದೆಂದು ಭಾವಿಸುತ್ತಾರೆ. ಒಟ್ಟಿನಲ್ಲಿ ಇದೊಂದು ಮಾರ್ಮಿಕ ಪ್ರಸಂಗ ವಾಗಿದೆ. ವಧುವು ತನಗೆ ಕಾಣಿಕೆಯಾಗಿ ತವರಿನವರು ಕೊಟ್ಟಿರುವ ಆಕಳು ಇಲ್ಲವೆ ಎತ್ತಿನ ಕೊರಳನ್ನು ಕಟ್ಟಿಕೊಂಡು ದುಃಖಿಸುತ್ತಾಳೆ. ಆಮೇಲೆ ಆಕಳನ್ನು ಮನೆಯ ಬಾಗಿಲ ಬಳಿಯಲ್ಲಿ ನಿಲ್ಲಿಸಿ ಅದರ ಮೇಲೆ ವಧುವನ್ನು ನಿಲ್ಲಿಸುತ್ತಾರೆ. ವಧುವು ಮನೆಯ ಕಡೆಗೆ ಮುಖಮಾಡಿ ತನ್ನ ಎರಡೂ ಕೈಗಳನ್ನು ಮೇಲೆತ್ತಿ ಪರಿಪರಿಯಿಂದ 'ಹವೇಲಿ' ಮಾಡುತ್ತಾಳೆ.

**ಮನೆ ತುಂಬಿಸುವುದು:** ಇದಕ್ಕೆ ಅವರು 'ತಾಂಗಡಿ ಘರೇಮ ಲೇರೊ' ಎನ್ನುತ್ತಾರೆ. ಹೆಣ್ಣು-ಗಂಡು ಬಲಗಾಲಿಟ್ಟು ಮನೆ ಪ್ರವೇಶಿಸುತ್ತಾರೆ. ಮನೆಯಲ್ಲಿ ಕಂಬಳಿ ಹಾಸಿ ಅದರ ಮೇಲೆ ಹೆಣ್ಣು-ಗಂಡು ಇಬ್ಬರನ್ನೂ ಕೂರಿಸಿ ತುಪ್ಪದ ಬಿಂದಿಗೆಯಲ್ಲಿ ಇಬ್ಬರ ಕೈಯನ್ನು ಏಳೇಳು ಸಲ ಹಾಕಿಸುತ್ತಾರೆ. ಆಮೇಲೆ ಇಬ್ಬರ ಉಡಿಯಲ್ಲಿ ಚಿಕ್ಕಮಕ್ಕಳನ್ನು ಏಳೇಳು ಸಲ ಎತ್ತಿ ಹಾಕಿ ತೆಗೆಯುತ್ತಾರೆ. ಕಾರಣ ಹೆಣ್ಣಿನ ಗೃಹಪ್ರವೇಶದಿಂದಾಗಿ ಇನ್ನು ಮುಂದೆ ಆ ಮನೆಯಲ್ಲಿ ಯಾವುದಕ್ಕೂ ಕೊರತೆಯಾಗದಂತೆ ಸಿರಿ-ಸಂಪತ್ತು ಹೆಚ್ಚಾಗಲಿ ಎಂದೂ,

ನವದಂಪತಿಗಳು ಪುನಃ ಒಂದು ವರ್ಷದೊಳಗಾಗಿ ಅಂಥ ಗಂಡುಮಗುವನ್ನು ಹೆತ್ತು ಕೊಡಲೆಂಬ ಆಶಯವಾಗಿದೆ. ಇಲ್ಲಿಗೆ ಅಂದಿನ ಕಾರ್ಯ ಕೊನೆಗೊಳ್ಳುತ್ತದೆ.

ಮಾರನೆಯ ದಿನ ಗಂಡು ಬೆಳಗಿನ ಜಾವದಲ್ಲಿ ಕಾಡಿಗೆ ಹೋಗಿ ಒಂದು ಬಗೆಯ ಹಲ್ಲುಜ್ಜುವ ಕಟ್ಟಿಗೆ ಕಡಿದುಕೊಂಡು ಬಂದು ಅದನ್ನು ಒಂದೊಂದು ಅಂಗುಲದಷ್ಟು ಕಡಿದು ಹೆಣ್ಣಿನ ಕೈಗೆ ಕೊಡುತ್ತಾನೆ. ಹೆಣ್ಣು ಅದನ್ನು ತೆಗೆದುಕೊಂಡು ಅವರ ಬಂಧು ಬಳಗದವರ ಮನೆಗೆ ಹೋಗಿ ತುಂಬಿದ ತಂಬಿಗೆಯಲ್ಲಿ ಆ ಕಟ್ಟಿಗೆಯ 'ದಾಂತಳ್' ಇಟ್ಟು ಪ್ರತಿಯೊಬ್ಬರಿಗೂ ಕೊಟ್ಟು ನಮಸ್ಕರಿಸುತ್ತಾಳೆ. 'ದಾಂತಳ್' ಎನ್ನುವ ಈ ಕಟ್ಟಿಗೆ ಹಲ್ಲುಜ್ಜುವ ಸಾಧನವಾಗಿದೆ. ಹೆಣ್ಣು ಅಂದು ಮನೆಮಂದಿ ಹಾಗೂ ಬಳಗದ ಸ್ತ್ರೀ–ಪುರುಷರನ್ನು ಕರೆದುಕೊಂಡು ಬಂದು ಮೈ ಉಜ್ಜಿ ಸ್ನಾನಮಾಡಿಸಿ ನಮಸ್ಕರಿಸಿ ಕಳಿಸಬೇಕು. ಸಾಯಂಕಾಲ ಹೆಣ್ಣಿನ ತವರಿನವರು ಕೊಟ್ಟಿರುವ ಸಾಮಾನುಗಳ ಪೆಟ್ಟಿಗೆ(ತಾಂಗಡಿ)ಯನ್ನು ಪ್ರದರ್ಶನಕ್ಕೆಂದು ತೆಗೆದಿಡುತ್ತಾರೆ. ತಾಂಡಾದ ನಾಯಕನು, ಡಾವಸಾಣಿ, ಕಾರಭಾರಿ ಹಾಗೂ ಇನ್ನಿತರ ವೃದ್ಧ ಮಹಿಳೆಯರು ಸೇರಿ 'ತಾಂಗಡಿ' ಪರೀಕ್ಷಿಸುತ್ತಾರೆ. ಆ ಸಾಮಾನುಗಳಿಂದಲೇ ಹೆಣ್ಣಿನ ತವರು ಮನೆಯ ಅಂತಸ್ತಿಕೆಯನ್ನು ಅಳೆಯುತ್ತಾರೆ. 'ತಾಂಗಡಿ'ಯಲ್ಲಿ ಸಾಮಾನ್ಯವಾಗಿ ಹೆಣ್ಣಿನ ಎಲ್ಲ ನಮೂನೆಯ ಬೆಲೆಬಾಳುವ ಪೋಷಾಕುಗಳು, ಗಂಡಿನ ತಾಯಿಗೆಂದು ಕೊಟ್ಟಿರುವ ಒಂದು ಜೊತೆ ಬಟ್ಟೆಗಳು, ಬಳಗದವರಿಗೆಂದು ಕೊಟ್ಟಿರುವ ನಾಲ್ಕಾರು ಕಾಂಚಳಿ(ಕುಪ್ಪಸ)ಗಳು ಹಾಗೂ ನವದಂಪತಿಗಳಿಗೆ ಅಡಿಗೆ ಮಾಡುವ ಸಾಮಾಗ್ರಿಗಳನ್ನು ಹಾಕಿರುತ್ತಾರೆ. ಇವುಗಳೇ ಅವರ ವೈಶಿಷ್ಟ್ಯಪೂರ್ಣವಾದ ಕೊಡುಗೆಗಳು ತಾಂಗಡಿ ಪೆಟ್ಟಿಗೆಯಲ್ಲಿ ಒಂದು ಗಿಟಕೆ ಕೊಬ್ಬರಿ ಹಾಗೂ ಬೆಲ್ಲವನ್ನು ಕೊಟ್ಟಿರುತ್ತಾರೆ. ಹೆಣ್ಣು ತನ್ನ ಅತ್ತೆಗಾಗಿ ತಂದಿರುವ ಪೋಷಾಕುಗಳನ್ನು ಸ್ಥಳದಲ್ಲಿಯೇ ಅವಳಿಗೆ ತೊಡಿಸಿ ಅನಂತರ ಎಲ್ಲರಿಗೂ ನಮಸ್ಕರಿಸುತ್ತಾಳೆ. ಒಟ್ಟಿನಲ್ಲಿ ಲಂಬಾಣಿಗರ ಮದುವೆ ಪದ್ಧತಿಯು ನಾಗರಿಕರ ದೃಷ್ಟಿಯಲ್ಲಿ ಸ್ವಲ್ಪ ವಿಚಿತ್ರವೆನಿಸಿದರೂ ಈ ಸಮುದಾಯಕ್ಕೆ ತಮ್ಮದೇ ಆದ ವಿಶಿಷ್ಟ ಸಂಸ್ಕಾರಗಳಿದ್ದು, ಅವುಗಳು ಇನ್ನುಳಿದ ಬುಡಕಟ್ಟಿನ ಕುಲ–ಗುಂಪುಗಳಿಗಿಂತ ಭಿನ್ನತೆಯನ್ನು ಸೂಚಿಸುತ್ತವೆ. ಇವರ ಪ್ರತಿಯೊಂದು ವಿಧಿ–ವಿಧಾನಗಳು, ರೂಢಿ–ಸಂಪ್ರದಾಯಗಳು, ಆಚಾರ–ವಿಚಾರಗಳು ಸಮೃದ್ಧವೂ ಸಂಪದ್ಭರಿತವೂ ಆಗಿದ್ದು ಅಧ್ಯಯನ ಯೋಗ್ಯವಾಗಿದೆ.

ಅಧ್ಯಯನದ ಒಟ್ಟು ೨೦೦ ಬಂಜಾರ ಮಾಹಿತಿದಾರರಲ್ಲಿ ವಿವಾಹ ಎಂಬುದು ಕೇವಲ ಹೆಣ್ಣು–ಗಂಡು ನಡುವಿನ ಲೈಂಗಿಕ ಸಂತೃಪ್ತಿ ಮತ್ತು ಸಂತೋನೋತ್ಪತ್ತಿಗಾಗಿಯೇ ಎಂದು

ಭಾವಿಸಿದವರು ಶೇ. ೨೬ರಷ್ಟು ಜನರು ಈ ಭಾವನೆ ಹೊಂದಿದವರಲ್ಲಿ ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಳ್ಳಿಯ ಬಂಜಾರರು ಮೊದಲಿಗರಾದರೆ ಶೇ. ೨೧ರಷ್ಟು ಮಾಹಿತಿದಾರರು ಚಿಕ್ಕಮಗಳೂರು ಜಿಲ್ಲೆ ಕಡೂರಿನ ತಾಂಡದವರು ಎರಡನೆಯವರಾಗಿ, ಶೇ. ೧೮ರಷ್ಟು ಮಾಹಿತಿದಾರರು ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ತಾಂಡಾದವರು ಕೊನೆಯವ ರಾಗಿರುತ್ತಾರೆ. ವಿವಾಹವು ಒಂದು ಧಾರ್ಮಿಕ ವಿಧಿ ಇದು ಅನಿವಾರ್ಯ ಮತ್ತು ಅವಶ್ಯಕ ಎಂದು ನಂಬಿಕೆಯಿರಿಸಿ ಆಚರಿಸುವವರಲ್ಲಿ ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಅಧಿಕ ಶೇಕಡ ೨೫ ಮಾಹಿತಿದಾರರು ಕಂಡುಬಂದರೆ ಕ್ರಮೇಣವಾಗಿ (ಶೇ. ೦೬ ಮತ್ತು ಶೇ. ೦೯ರಷ್ಟು ಮಾಹಿತಿದಾರರು) ಚಿಕ್ಕಮಗಳೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಯ ತಾಂಡದವರಾಗಿರುತ್ತಾರೆ. ವಿವಾಹವು ಒಂದು ಹೆಣ್ಣಿನ ರಕ್ಷಣೆ ಅಥವಾ ಬಾಳಿಗೆ ಆಶ್ರಯ ಎಂಬ ನಂಬಿಕೆಯನ್ನು ಹೊಂದಿದವರಲ್ಲಿ ಚಿಕ್ಕಬಳ್ಳಾಪುರ ಬಾಗೇಪಲ್ಲಿ ತಾಲ್ಲೂಕಿನ ತಾಂಡಾದ ಶೇ.೨೮ ಜನರು ಮೊದಲಿಗರಾದರೆ ಇದೇ ಅಭಿಪ್ರಾಯ ಕಡಿಮೆ ಪ್ರಮಾಣದಲ್ಲಿ ನಂಬಿಕೆ ಹೊಂದಿದವರು ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ತಾಂಡದವರು ಶೇ. ೧೬ರಷ್ಟು ಹೊಂದಿದ್ದರೆ, ಸಮಾಜದ ಒಪ್ಪಿಗೆ ಮೇರೆಗೆ ಹೆಣ್ಣು-ಗಂಡು ಒಂದು ಕಡೆ ವಾಸಿಸಲು/ಜೀವಿಸಲು ಅವಕಾಶ ನೀಡುವುದೇ ವಿವಾಹ ಎಂದು ನಂಬಿದವರಲ್ಲಿ ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ ತಾಂಡದ ಶೇ. ೩೨ ಜನರು ಕಂಡುಬರುತ್ತಾರೆ. ಇದೇ ಅಭಿಪ್ರಾಯ ಹೊಂದಿದ ಜನರು ಶೇ. ೧೬ ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿ ನಲ್ಲಿ ವಿಸ್ತಾರಗೊಂಡಿದೆ. ಶೇ. ೧೪ರಷ್ಟು ಜನರು ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಲ್ಲೂಕಿ ನಲ್ಲಿ ಕಂಡುಬರುತ್ತಾರೆ.

**ಸಂಗಾತಿಗಳ ಆಯ್ಕೆ:** ಸಂಗಾತಿಗಳ ಆಯ್ಕೆಯಲ್ಲಿ ತಂದೆ ತಾಯಿಯರ ಆಯ್ಕೆಯೇ ಅಂತಿಮವೆಂದು ಬಂಜಾರರು ನಂಬಿರುತ್ತಾರೆ. ಆಯ್ಕೆಯ ಪ್ರಶ್ನೆಯನ್ನು ವಧುವರರಿಗೆ ಕೇಳುತ್ತಿರಲಿಲ್ಲ. ತಂದೆ ತಾಯಿಯವರ ತೀರ್ಮಾನಗಳೇ ಮದುವೆಯ ನಿಶ್ಚಯವಾಗುತ್ತಿತ್ತು. ಕಾಲಾಂತರಗಳಲ್ಲಿ ಶಿಕ್ಷಣ, ಉದ್ಯೋಗ, ವಲಸೆ ಹಾಗೂ ಪ್ರಾಪಂಚಿಕ ಜ್ಞಾನ ವಿಸ್ತರಣೆ ಗೊಂಡಿರುವ ಹಿನ್ನಲೆಯಲ್ಲಿ ಇಂದು ವಿವಾಹದ ಆಯ್ಕೆಯು ಸಂಪೂರ್ಣವಾಗಿ ತಮ್ಮ ಮಕ್ಕಳನ್ನು ಆಧರಿಸಿರುತ್ತದೆ. ಇವರ ತೀರ್ಮಾನವೇ ಅಂತಿಮ, ಕುಟುಂಬದ ವಿದ್ಯಾರ್ಹತೆ, ಹಿನ್ನಲೆ, ಆಧುನೀಕರಣ, ನವೀನ ಜೀವನ ಶೈಲಿ, ಉದ್ಯೋಗಗಳು ಮುಖ್ಯ ನಿರ್ಧಾರಕ ಅಂಶಗಳಾಗಿರುತ್ತವೆ.

ಅಧ್ಯಯನದ ಒಟ್ಟು ೨೦೦ ಜನ ಮಾಹಿತಿದಾರರಲ್ಲಿ ಶೇ. ೫೫ರಷ್ಟು ಜನರು ವಿವಾಹದ ಸಂಗಾತಿ ಆಯ್ಕೆಯನ್ನು ತಮ್ಮ ಮಕ್ಕಳಿಗೆ ಬಿಡಲಾಗಿರುತ್ತದೆ ಅಥವಾ ಮಕ್ಕಳೇ ತಮ್ಮ ತೀರ್ಮಾನವನ್ನು ತಿಳಿಸುತ್ತಾರೆ ಎಂದು ತಿಳಿದು ಬರುತ್ತದೆ. ಏಕೆಂದರೆ ಹಿಂದಿನಿಂದಲೂ ಬಂದಿರುವ ಸಂಪ್ರದಾಯಗಳಿಂದ ಬೇಸತ್ತು, ಹೊಸ ಸಂಪ್ರದಾಯ ಮತ್ತು ಸಂಬಂಧಗಳಿಗೆ ಹೆಚ್ಚು ಒಲುವು ತೋರಿಸುತ್ತಿದ್ದಾರೆ. ಅದರಲ್ಲೂ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ತಾಂಡದಲ್ಲಿ ಹೆಚ್ಚು ಸಾಮಾಜಿಕ-ಸಾಂಸ್ಕೃತಿಕ ಪರಿವರ್ತನೆಗಳಾಗುತ್ತಿರುವುದು ಹಾಗೂ ಶಿಕ್ಷಣ, ಉದ್ಯೋಗ ಮತ್ತು ಆರ್ಥಿಕ ಸ್ವಾವಲಂಬನೆಗಳು ಇದಕ್ಕೆ ಪೂರಕವಾಗು ತ್ತಿರುವುದರಿಂದ ಬಹುತೇಕ ತಂದೆ-ತಾಯಿಯಂದಿರು ತಮ್ಮ ಮಕ್ಕಳ ವಿವಾಹದ ಆಯ್ಕೆಯನ್ನು ಅವರಿಗೇ ವಹಿಸುತ್ತಿರುವುದು ಒಂದು ಉತ್ತಮ ಹಾಗೂ ಆರೋಗ್ಯಕರ ಬೆಳವಣಿಗೆಯೇ ಸರಿ. ಉಳಿದಂತೆ ಶೇಕಡ ೪೫ರಷ್ಟು ಜನರು ವಧು-ವರರ ಆಯ್ಕೆಯಲ್ಲಿ ತಂದೆ ತಾಯಿ ಯವರ ತೀರ್ಮಾನವೇ ಅಂತಿಮ. ತಾವು ಹಾಕಿದ ಗೆರೆಯನ್ನು ತಮ್ಮ ಮಕ್ಕಳು ದಾಟುವಂತಿಲ್ಲ ಎಂದು ನಂಬಿರುವುದನ್ನು ಈ ಅಧ್ಯಯನವು ಸ್ಪಷ್ಟಪಡಿಸುತ್ತದೆ.

ಬಹುತೇಕ ಎಲ್ಲಾ ತಾಲ್ಲೂಕಿನ ಜನರು ತಮ್ಮ ಮಕ್ಕಳ ಭವಿಷ್ಯವನ್ನು ತಾವೇ ನಿರ್ಧರಿಸು ವುದಿಲ್ಲ ಎನ್ನುವುದು ಒಂದು ಕಡೆಯಾದರೆ ತಮ್ಮ ಮಕ್ಕಳ ವಧು-ವರರ ಆಯ್ಕೆಯು ಸಾಂಪ್ರದಾಯಿಕವಾಗಿ ತಮ್ಮಿಂದಲೇ ಜರುಗಬೇಕು ಎಂಬ ನೀತಿ ಪಾಲಿಸುವುದು ಮತ್ತೊಂದು ಅಂಶವಾಗಿದೆ. ಅದು ಏನೇ ಇದ್ದರೂ ಸಂಪ್ರದಾಯ ಪ್ರಿಯರಾದ ಲಂಬಾಣಿಗಳು ಸಾಮಾಜಿಕವಾಗಿ ಪರಿವರ್ತನೆಯ ಹಾದಿ ಹಿಡಿದಿರುವುದು ಹೆಮ್ಮೆಯ ಸಂಗತಿ ಎಂದರೆ ಅತಿಶಯೋಕ್ತಿಯಲ್ಲ.

**ಬಂಜಾರರ ವಿವಾಹ ಪದ್ಧತಿಯಲ್ಲಿ ಪರಿವರ್ತನೆ**

ಆಧುನಿಕ ಸಂಸ್ಕೃತಿ ಮತ್ತು ನಾಗರೀಕತೆಗಳು ಮುಂದುವರೆದಂತೆ, ಶಿಕ್ಷಣ, ಉದ್ಯೋಗ ಮತ್ತು ಸ್ವಾವಲಂಬನಾ ಜೀವನ ವಿಕಾಸಗೊಳ್ಳುತ್ತಾ, ಜನರಲ್ಲಿ ಒಂದು ಕ್ರಿಯಾತ್ಮಕ ಚಟುವಟಿಕೆಗಳು ಆರಂಭವಾದವು ಇದರಿಂದಾಗಿ ಸಮುದಾಯ ಜೀವನವು ಹೆಚ್ಚು ಪ್ರಗತಿಯತ್ತಾ ಮುಂದುವರಿಯುತ್ತಿದೆ. ಈ ಹಿನ್ನಲೆಯಲ್ಲಿ ಬಂಜಾರರ ಸಮಾಜಗಳಲ್ಲಿ ಇದರ ಪ್ರಭಾವ ಕಂಡುಬರುತ್ತಿದೆ. ತನ್ನ ಸುತ್ತಮುತ್ತಲಿನ ಪರಿಸರ, ಜನಸಂಪರ್ಕ, ನಗರೀಕರಣ, ಪಾಶ್ಚಾತೀಕರಣ ಹಾಗೂ ಆಧುನೀಕರಣ ಪ್ರಭಾವಗಳಿಂದಾಗಿ ಬಂಜಾರರ ಜೀವನಶೈಲಿ, ಕೌಟುಂಬಿಕ ವ್ಯವಸ್ಥೆ, ಮತ್ತಿತರ ಸಾಮಾಜಿಕ ಚಟುವಟಿಕೆಯ ವಿವಿಧ ಅಂಶಗಳು ಪರಿವರ್ತನೆಯತ್ತಾ ಮುನ್ನುಗ್ಗತ್ತಿವೆ. ಈ ಪರಿವರ್ತನೆಯು ಬಂಜಾರರ ಸಾಂಪ್ರದಾಯಿಕ ಬದುಕಿನ ದಿಕ್ಕನ್ನು ಬದಲಾಯಿಸಿದೆ.

ಉದಾಹರಣೆ ಈ ಸಮುದಾಯಗಳ ಪಾರಂಪರಿಕ ವಿವಾಹ ಪದ್ಧತಿ ಆಚರಣೆಯಲ್ಲಿ ವಧುವಿಗೆ ದಕ್ಷಿಣೆ ನೀಡುವುದನ್ನು(ತೆರ ಅಥವಾ ಕರಾರು ಹಣ) ನಿರ್ಧರಿಸಿಕೊಂಡು ನಂತರ ವಿವಾಹ ಏರ್ಪಾಟಾಗುತ್ತಿತ್ತು. ವಧುವಿನ ಕಡೆಯಿಂದ ಯಾವುದೇ ಬಗೆಯ ಚರ ವಸ್ತುಗಳನ್ನು ತೆರ, ವಂತಿಕೆ ಅಥವಾ ಕರಾರು ರೂಪದಲ್ಲಿ ಪಡೆಯುತ್ತಿರಲಿಲ್ಲ. ಬದಲಾಗಿ ವಧುವಿಗೆ ತಾವೇ ಬೇಕಾದ ವಸ್ತ್ರಾಭರಣ ಮತ್ತಿತರ ವಸ್ತುಗಳನ್ನು ಶಾಸ್ತ್ರೋಕ್ತವಾಗಿ ನೀಡುವುದರ ಮೂಲಕ ವಿವಾಹ ಕಾರ್ಯ ನೇರವೇರಿಸಲಾಗುತ್ತಿತ್ತು. ಕಾಲಾಂತರಗಳಲ್ಲಿ ಈ ಆಚರಣೆ ಬದಲಾವಣೆಗೆ ಒಳಪಟ್ಟಿದೆ.

ಇಂದು ವಧುವಿಗೆ ನೀಡುವ ಉಡುಗೊರೆ ಬದಲಾಗಿ ವರನಿಗೆ ವಿವಿಧ ಪ್ರಕ್ರಿಯೆಗಳ ಪ್ರಭಾವದಿಂದ ವರದಕ್ಷಿಣೆ ಪಡೆದು ಮದುವೆಯಾಗುವ ಮಟ್ಟಕ್ಕೆ ಬಂದಿದ್ದಾರೆ. ವರದಕ್ಷಿಣೆಯ ಪ್ರಮಾಣ ಅವರ ಜೀವನಶೈಲಿ, ಆರ್ಥಿಕಮಟ್ಟ, ವಿದ್ಯಾರ್ಹತೆ ಮತ್ತು ಉದ್ಯೋಗ ಪ್ರಮುಖ ನಿರ್ಧಾರಕಾಂಶಗಳಾಗಿವೆ. ಇದರಿಂದಾಗಿ ಪಾರಂಪರಿಕ ವೈವಾಹಿಕ ಪದ್ಧತಿ, ಸಂಪೂರ್ಣ ಅವನತಿಯ ಹಾದಿ ಹಿಡಿದಿದೆ ಎನ್ನಬಹುದು.

**ಬಂಜಾರರಲ್ಲಿ ವಿವಾಹ ವಿಚ್ಛೇದನ**

ವಿವಾಹವು ಪತಿ ಪತ್ನಿಯರ ಶಾಶ್ವತ ಸಂಯೋಗ ಮತ್ತು ಜೀವಿತಾವಧಿಯಲ್ಲಿ ಒಂದೊಮ್ಮೆ ಮಾತ್ರ ಜರುಗುವ ಪ್ರಕ್ರಿಯೆ. ಈ ವ್ಯವಸ್ಥೆಯಲ್ಲಿ ಸಾಂದರ್ಭಿಕ ಕಾರಣಗಳಿಂದಾಗಿ ಪರಸ್ಪರ ಅಪಹೊಂದಾಣಿಕೆ ಹಾಗೂ ಲಭ್ಯವಿರುವ ಪರ್ಯಾಯ ಮಾರ್ಗಗಳಿಂದಾಗಿ ದಾಂಪತ್ಯ ಬೇರ್ಪಡಿಕೆಗೆ ಒಲವು ತೋರಿಸಿ, ವಿಚ್ಛೇದನಕ್ಕೆ ಮೊರೆ ಹೋಗುತ್ತಿರುವುದು ಒಂದು ಪರಿವರ್ತನೆಯೇ ಸರಿ. ಮೂಲತಃ ಬಂಜಾರರು ಬುಡಕಟ್ಟು ಸಮೂಹದವರಾಗಿ ರುವುದರಿಂದ ಇವರ ಸಾಂಸಾರಿಕ ಜೀವನದಲ್ಲಿ ಸಂಭವಿಸಬಹುದಾದ ವಿರಸ, ಘರ್ಷಣೆ, ಮತ್ತಿತರ ಪೂರಕ ಕಾರಣಗಳಿಂದ ವಿಚ್ಛೇದನ ಪ್ರಕರಣಗಳು ಕಂಡುಬರುತ್ತಿರುವುದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಕ್ಷೇತ್ರಾಧ್ಯಯನದಲ್ಲಿ ಸಂಗ್ರಹಿಸಿರುವ ಮಾಹಿತಿ ಸಂಗ್ರಹಣೆಯನ್ನು ಆಧರಿಸಿ ವಿಶ್ಲೇಷಿಸಿ ಸುವುದಾದರೆ, ೨೦೦ ಮಾಹಿತಿದಾರರಲ್ಲಿ ಶೇ. ೮೦ರಷ್ಟು ಜನರು ವಿವಾಹ ವಿಚ್ಛೇದನವನ್ನು ಇಚ್ಛಿಸುವುದಿಲ್ಲ. ಆದರೆ ಸಾಂದರ್ಭಿಕ ಅಥವಾ ಅನಿವಾರ್ಯ ಸೂಕ್ತ ಕಾರಣಗಳಿಂದಾಗಿ ನ್ಯಾಯ ಪಂಚಾಯ್ತಿ ಮಟ್ಟದಲ್ಲಿ ಕೆಲವೊಮ್ಮೆ ನ್ಯಾಯಾಲಯದ ಮೂಲಕ ವಿಚ್ಛೇದನ ಪಡೆಯುತ್ತಿರುವುದು ವೈವಾಹಿಕ ಪರಿವರ್ತನೆಯ ಒಂದು ಮಾದರಿಯಾಗಿದೆ.

ಮುಂದುವರೆಯುತ್ತಾ ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ತಾಂಡದವರುಗಳಲ್ಲಿ ಶಿಕ್ಷಣದ ಅರಿವು, ಸ್ವಾವಲಂಬಿ ಜೀವನ ಪ್ರಭಾವದಿಂದಾಗಿ ವಿಚ್ಛೇದನ ಪ್ರಕರಣಗಳು ಸಾಧಾರಣ ವಾಗಿ, ಶೇ. ೧೭ರಷ್ಟು ಕುಟುಂಬಗಳಲ್ಲಿ ಕಂಡುಬಂದರೆ, ಶೈಕ್ಷಣಿಕ ಮತ್ತು ಆರ್ಥಿಕವಾಗಿ ತುಂಬಾ ಹಿಂದುಳಿದಿರುವ ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಲ್ಲಿ ತಾಂಡದಲ್ಲಿ ವಿಚ್ಛೇದನ ಪ್ರಕರಣ ಕೇವಲ ೯ರಷ್ಟು ಕುಟುಂಬಗಳು ಉಳಿದಂತೆ ಚಿಕ್ಕಮಗಳೂರು ಜಿಲ್ಲೆಯ ಶೇ. ೧೩ರಷ್ಟು ಪ್ರಕರಣಗಳನ್ನು ಕಾಣಬಹುದಾಗಿದೆ. ನಗರೀಕರಣ, ಶಿಕ್ಷಣ, ಪಾಶ್ಚಾತೀಕರಣದ ಪ್ರಭಾವ ಹಾಗೂ ಇವುಗಳ ನಿರಂತರ ಸಂಪರ್ಕದಿಂದಾಗಿ ಬಂಜಾರ ಸಮುದಾಯಗಳಲ್ಲಿ ವಿವಾಹ ವಿಚ್ಛೇದನ ಪ್ರಕರಣಗಳು ಹೆಚ್ಚಾಗುತ್ತಿರುವುದನ್ನು ಕಾಣಬಹುದಾಗಿದೆ.

### ೩.೪ ಕೌಟುಂಬಿಕ ವ್ಯವಸ್ಥೆ

**ಕುಟುಂಬ:** ಕುಟುಂಬವು ಸಾಮಾಜಿಕ ಜೀವನಕ್ಕೆ ಮೂಲ ನೆಲೆ. ಅದು ಮಾನವ ಜೀವನದ ತಳಹದಿಯೂ ಹೌದು. ಸಾಮಾಜಿಕ ಸಂಸ್ಥೆಗಳಲ್ಲೇ ಅತ್ಯಂತ ಮೂಲಭೂತ ಸ್ವರೂಪದ, ಸಾರ್ವತ್ರಿಕವಾದ ಮತ್ತು ಮಹತ್ವಪೂರ್ಣವಾದ ಸಂಸ್ಥೆಯಾಗಿದೆ. ವಿವಾಹವು ಅದಕ್ಕೆ ಶಾಸನಾತ್ಮಕ ತಳಹದಿಯನ್ನು ಹಾಕುತ್ತದೆ. ಆದರೆ ವಿವಾಹವಿಲ್ಲದಿದ್ದರೂ ಕುಟುಂಬವು ಅಸ್ತಿತ್ವದಲ್ಲಿರಲು ಸಾಧ್ಯವಿದೆ. ಮೂಲಕುಟುಂಬವೇ ಇದಕ್ಕೆ ನಿದರ್ಶನವಾಗಿದೆ. ಹೆತ್ತವರು ಮತ್ತು ಮಕ್ಕಳು ಕುಟುಂಬದಲ್ಲಿ ಒಟ್ಟಿಗೆ ವಾಸಿಸುವ ಒಂದು ಗೃಹ ಸಮೂಹ(Domestic group)ವಾಗಿದೆ. ಅದು ಮೂಲ ಸ್ವರೂಪದಲ್ಲಿ ದಂಪತಿಗಳು ಹಾಗೂ ಮಕ್ಕಳನ್ನು ಹೊಂದಿದೆ. ಇದನ್ನು ನಾವು 'ಅಣು' ಅಥವಾ 'ಮೂಲ ಕುಟುಂಬ'(Nuclear or Elementary Family) ಎನ್ನುತ್ತೇವೆ. ಇದು ಗೃಹ ಸಮೂಹವಾಗಿ ಸಮಾಜಗಳಲ್ಲಿ ಕಂಡುಬರುವುದು ತುಂಬಾ ವಿರಳ.

ಪಿತೃವಂಶೀಯ ಸಮಾಜದಲ್ಲಿನ ಕುಟುಂಬಗಳನ್ನು ೫ ಪ್ರಕಾರಗಳಾಗಿವೆ. ಅವೆಂದರೆ: ನೈಸರ್ಗಿಕ ಕುಟುಂಬ, ಸರಳ ನ್ಯಾಯಿಕ ಕುಟುಂಬ, ಸಂಕೀರ್ಣ ನ್ಯಾಯಿಕ ಕುಟುಂಬ, ಭೂತ ಕುಟುಂಬ ಮತ್ತುಸ್ತ್ರೀ–ಪತಿ ಕುಟುಂಬ

**ನೈಸರ್ಗಿಕ ಕುಟುಂಬ:** ನೈಸರ್ಗಿಕ ಕುಟುಂಬದಲ್ಲಿ ವಿವಾಹಿತ ಅಥವಾ ಅವಿವಾಹಿತ ಮಾತಾಪಿತೃಗಳು ಮತ್ತು ಅವರ ಮಕ್ಕಳು ಕಂಡುಬರುತ್ತಾರೆ. ಅವಿವಾಹಿತ ಮಾತುಪಿತೃಗಳ ಸಂಬಂಧವು ವೇಶ್ಯೆಯನ್ನಿಟ್ಟುಕೊಂಡಿರುವ(concubinage) ಸಂಬಂಧವಾಗುತ್ತದೆ. ಅಮೇರಿಕಾ ಸಮಾಜದಲ್ಲಿ ಈ ಪದ್ಧತಿ ಹೆಚ್ಚಾಗಿ ಕಂಡುಬರುತ್ತದೆ.

**ಸರಳ ನ್ಯಾಯಿಕ ಕುಟುಂಬ:** ಸರಳ ನ್ಯಾಯಿಕ ಕುಟುಂಬವು ವಿವಾಹಿತ ದಂಪತಿಗಳು ಮತ್ತು ಅವರ ಮಕ್ಕಳನ್ನು ಒಳಗೊಂಡಿರುತ್ತದೆ. ವಿವಾಹವಾಗಿರುವ ದಂಪತಿಗಳ ಸಂಬಂಧವು ನ್ಯಾಯಿಕ ಹಾಗೂ ಸಮಾಜ ಒಪ್ಪಿತ ಸಂಬಂಧವಾಗಿರುತ್ತದೆ.

**ಸಂಕೀರ್ಣ ನ್ಯಾಯಿಕ ಕುಟುಂಬ:** ಸಂಕೀರ್ಣ ನ್ಯಾಯಿಕ ಕುಟುಂಬವನ್ನು ಬಹುಪತ್ನಿತ್ವದ ಕುಟುಂಬ(Polygynous family) ಎಂದು ಕರೆಯುತ್ತಾರೆ. ಸಾಮಾನ್ಯ ತಂದೆಯೊಂದಿಗೆ ಅನೇಕ ಪ್ರತ್ಯೇಕ ಕುಟುಂಬಗಳ ಸಂಬಂಧ ಹೊಂದಿರುವ ಕುಟುಂಬವೆಂದು ಇದನ್ನು ವರ್ಣಿಸಲಾಗಿದೆ. ಇಲ್ಲಿ ಒಬ್ಬ ಮೂಲ ಪುರುಷನೊಡನೆ ಅದರ ಸದಸ್ಯರೆಲ್ಲರೂ ಸಂಬಂಧ ಕಲ್ಪಿಸುವರು.

**ಭೂತ ಕುಟುಂಬ:**ಭೂತ ವಿವಾಹವಿದ್ದಂತೆ 'ಭೂತ ಕುಟುಂಬ'ವು ಇದು ಭೂತವನ್ನು [ಕಾನೂನುಬದ್ಧ ತಂದೆ(pator)], ಅವನ ಹೆಂಡತಿ, ಅವರ ಮಕ್ಕಳು ಮತ್ತು ಅವರ ಬಂಧುಗಳನ್ನು(kinsman) ಹೊಂದಿದೆ. ಒಬ್ಬ ವ್ಯಕ್ತಿಯು ಭೂತದ ಪರವಾಗಿ ಸಂತಾನೋತ್ಪತ್ತಿ ಕಾರ್ಯವನ್ನು ಮುಂದುವರಿಸುತ್ತಾನೆ. ಅದು ಆತನ ಕರ್ತವ್ಯವಾಗಿರುತ್ತದೆ.ಇಲ್ಲಿ ಬಂಧು ಎಂದರೆ ನೈಜ, ಶಾರೀರಿಕ ಮತ್ತು ಜೈವಿಕ ತಂದೆ(Genitor).

**ಕನ್ಯಾಶುಲ್ಕ ಕುಟುಂಬ:** ಇವಾನ್ಸ್ ಪ್ರಿಚರ್ಡ್‌ನು ಈ ಕುಟುಂಬಕ್ಕೆ ಯಾವುದೇ ಹೆಸರನ್ನು ಕೊಟ್ಟಿಲ್ಲ. ಇದು ಕನ್ಯಾಶುಲ್ಕ(Bride Wealth)ವನ್ನು ಕೊಡುವ ಮಹಿಳೆಯಿಂದಾದ ಕುಟುಂಬ ಎನ್ನಲಾಗಿದೆ. ಇದನ್ನು ಗಂಡ ಹೆಂಡಿರ ಕುಟುಂಬವೆಂದರೆ ಅಡ್ಡಿಯಿಲ್ಲ.

ಬಹುತೇಕ ಮಾತೃವಂಶೀಯ ಸಮಾಜಗಳಲ್ಲಿ ಕುಟುಂಬವು ಗೃಹ ಸಮೂಹವಾಗಿಲ್ಲ (Domestic Group). ಉದಾ: ದಕ್ಷಿಣ ಭಾರತದಲ್ಲಿನ ಮಲಬಾರ್ ಸಮುದ್ರತೀರ ಪ್ರದೇಶ ದಲ್ಲಿರುವ ಕೇರಳದ ನಾಯರ್‌ಗಳಲ್ಲಿನ ತರವಾಡು(Taravad) ಕುಟುಂಬ: ಇದು ಅವಿಭಕ್ತ ಸ್ವರೂಪದ ರಕ್ತ ಸಂಬಂಧೀ(consanguine) ಮತ್ತು ಮಾತೃವಂಶೀಯ ಕುಟುಂಬ ಮಾತ್ರವಲ್ಲದೇ ಬಹುಪತಿತ್ವ ಕುಟುಂಬವು(Polyandrous) ಹೌದಾಗಿದೆ. ಇಲ್ಲಿ ಒಬ್ಬ ಸ್ತ್ರೀ, ಆಕೆಯ ಗಂಡು ಮತ್ತು ಹೆಣ್ಣುಮಕ್ಕಳು ಮತ್ತು ವಿವಾಹಿತ ಸ್ತ್ರೀಯರ ಮಕ್ಕಳು ಇರುತ್ತಾರೆ. ಇಂತಹ ಕುಟುಂಬಗಳ ಸದಸ್ಯರುಗಳು ರಕ್ತ ಸಂಬಂಧದ ನೆಲೆಯಲ್ಲಿ ಒಂದು ಗೂಡುತ್ತಾರೆ. ಇಲ್ಲಿ ಸ್ತ್ರೀಯರದೇ ಪ್ರಾಬಲ್ಯ. ವೈವಾಹಿಕ ಸಂಬಂಧಗಳಿಗೆ ಇಲ್ಲಿ ವಿಶೇಷವಾದ ಮಹತ್ವವಿಲ್ಲ.[೧೦]

---

೧೦. (E.K.Gough, 'The Nayars and the definiation of marriage, Journal of the Royal anthropological Institute, 1959 pp. 23-24).

• **ಸ್ತ್ರೀಕುಲ** (Woman clan) ಇಲ್ಲಿ ವಂಶ, ಆಸ್ತಿಪಾಸ್ತಿಗಳ ಬಗ್ಗೆ ಹಕ್ಕುದಾರಿಕೆ ಹಾಗೂ ಉತ್ತರಾಧಿಕಾರಿಗಳು ಸ್ತ್ರೀಕುಲವನ್ನೇ ಅನುಸರಿಸಿ ಬರುತ್ತವೆ. ಮಕ್ಕಳು ತಾಯಿಯ ವಂಶಕ್ಕೆ ಸೇರುವುದರಿಂದ ನಾಯರ್ ಕುಟುಂಬವನ್ನು ಮಾತೃವಂಶೀಯ ಎಂದು ಕರೆಯುತ್ತೇವೆ.

• **ಆಸ್ತಿಹಕ್ಕು** (Property Rights): ಕುಟುಂಬದ ಆಸ್ತಿಪಾಸ್ತಿಗಳ ಮೇಲಿನ ಹಕ್ಕು ಸಾಮನ್ಯವಾಗಿ ತಾಯಿಯಿಂದ ಹಿರಿಯ ಮಗಳಿಗೆ ಬರುತ್ತದೆ. ಆದರೆ ಖಾಸಿ ಜನಾಂಗದಲ್ಲಿ ಕಿರಿಯ ಮಗಳಿಗೆ ಬರುತ್ತದೆ. ಮತ್ತು ಆಕೆ ಅಲ್ಲಿ ಯಜಮಾನಿ. ನಾಯರ್‌ಲ್ಲಿ ಕಿರಿಯ ಮಗಳು ಆಸ್ತಿ ಪರಭಾರೆ ಮಾಡುವ ಹಕ್ಕನ್ನು ಹೊಂದಿಲ್ಲ. ಗಂಡು ಮಕ್ಕಳಿಗೆ ಆಸ್ತಿ ಒಡೆತನವಿಲ್ಲ.

• **ಪೌರೋಹಿತ್ಯ ಕಾರ್ಯ** (Priesthood): ಧಾರ್ಮಿಕ ಕಾರ್ಯದಲ್ಲಿ ಪೌರೋಹಿತ್ಯದ ಕಾರ್ಯವನ್ನು ಅವಳೇ ನಿರ್ವಹಿಸುತ್ತಾಳೆ. ಅನುವಂಶೀಯವಾದ ಸ್ಥಾನಮಾನಗಳು ತಾಯಿ ಯಿಂದ ಮಗಳಿಗೆ ಬರುತ್ತವೆ.

• **ಮಾತೃಸ್ಥಾನೀಯ** (Matrillocal): ಹೆಂಡತಿಯಾದವಳು ತಾನು ಹುಟ್ಟಿದ ಮೂಲ ಕುಟುಂಬವನ್ನು ಬಿಟ್ಟು ಕದಲುವುದಿಲ್ಲ. ವಿವಾಹನಂತರವೂ ತನ್ನ ತಾಯಿ ಸೋದರ ಸೋದರಿ ಯರ ನಡುವೆ ವಾಸಿಸುತ್ತಾಳೆ. ಆಕೆಯ ಮಕ್ಕಳೂ ಸಹ ಅಲ್ಲಿಯೇ ಪೋಷಿತರಾಗುತ್ತಾರೆ. ಆಕೆಯ ಗಂಡ ತಾನು ಇಚ್ಛಿಸಿದಾಗ ಅವಳಿರುವ ವಾಸಸ್ಥಾನಕ್ಕೆ ಹೋಗಿಬರಬಹುದು.

• **ಗಂಡ–'ಗೌರವಾನ್ವಿತ ಅಥಿತಿ'** (Respected Guest): ಗಂಡನಿಗೆ ಹೆಂಡತಿಯ ಮನೆಯಲ್ಲಿ ವಿಶೇಷ ಗೌರವವಾಗಲಿ, ಯಾವುದೇ ಸ್ಥಾನಮಾನಗಳಾಗಲೀ ಇರುವುದಿಲ್ಲ. ಹೆಂಡತಿ ಇರುವ ಮನೆಗೆ ಆಗಾಗ್ಗೆ ಭೇಟಿಕೊಡಬಹುದೇ ವಿನಾ ಅಲ್ಲಿಯೇ ನೆಲೆಸಲು ಅವಕಾಶವಿಲ್ಲ. ಆದ್ದರಿಂದಲೇ ಆತನನ್ನು 'ಗೌರವಾನ್ವಿತ ಅಥಿತಿ' ಎಂದು ಕರೆಯುತ್ತಾರೆ.

• **ಗಂಡನ ಸೋದರಿ ಮಕ್ಕಳ ಪೋಷಣೆಯ ಹೊಣೆ** (Responsibility to look after his sister's children): ಗಂಡನ ಸಂಪಾದನೆಯಲ್ಲಿ ಸ್ವಲ್ಪ ಭಾಗವೂ ಅವನ ಹೆಂಡತಿ ಮಕ್ಕಳಿಗೆ ಹೋಗುವುದಿಲ್ಲ. ತನ್ನ ಸೋದರಿಯ ಮಕ್ಕಳ ಮೇಲೆ ಅವನಿಗೆ ಅಧಿಕಾರವಿದೆ. ಅವರ ಪೋಷಣೆಯ ಹೊಣೆ ಅವನಿಗಿದೆ.

• **ಬಹುಪತಿತ್ವ ಕುಟುಂಬ** (Polyandrous family): ಮಲಬಾರಿನ ನಾಯರ್‌ಗಳು ಮಾತೃ ಪ್ರಧಾನ ಕುಟುಂಬಕ್ಕೆ ಸೇರಿದವರು ಮಾತ್ರವಲ್ಲದೆ ಅವರಲ್ಲಿ ಬಹುಪತಿತ್ವವು ಅನುಸರಣೆ ಯಲ್ಲಿದೆ ಎಂದು ಇ.ಕೆ. ಗೌಹ ತಿಳಿಸುತ್ತಾರೆ.

ಅಪ್ರಾಪ್ತ ವಯಸ್ಕಳಾದ ನಾಯರ್ ಕನ್ಯೆಯು ತನ್ನ ವಂಶಕ್ಕೆ ಸೇರಿದ ಒಬ್ಬ ಪುರುಷ ನೊಡನೆ ಸಾಂಪ್ರದಾಯಿಕವಾಗಿ ವಿವಾಹವಾಗಬೇಕಾಗುತ್ತದೆ. ಆತನು ಸಾಂಪ್ರದಾಯಿಕವಾಗಿ ಆಕೆಯೊಡನೆ ವಿವಾಹವಾದರೂ ಲೈಂಗಿಕ ಸಂಪರ್ಕ ಹೊಂದದೆ ಇರಬಹುದು. ಕನ್ಯೆಯು ಪ್ರೌಢಾವಸ್ಥೆಗೆ ತಲುಪಿದ ನಂತರ ಆಕೆಯು ತನಗೆ ಇಷ್ಟ ಬಂದ ಪುರುಷನೊಡನೆ ಲೈಂಗಿಕ ಸಂಬಂಧವನ್ನು ಏರ್ಪಡಿಸಿಕೊಳ್ಳಲು ಅನುಮತಿ ಪಡೆಯುವ ಮಾರ್ಗವಾಗಿದೆ. ಅಂತಹ ಸಂಬಂಧದಿಂದ ಜನಿಸುವ ಮಕ್ಕಳ ರಕ್ಷಣೆ ಮತ್ತು ಪೋಷಣೆಯ ಜವಾಬ್ದಾರಿಯನ್ನು ಅವರಲ್ಲಿ ಒಬ್ಬ ಪುರುಷನು ವಹಿಸಿಕೊಳ್ಳುತ್ತಾನೆ. ಸಾಂಪ್ರದಾಯಿಕ ವಿವಾಹ ಸಂಸ್ಕಾರ ನಡೆಯುವ ತನಕ ಮಹಿಳೆಯು ನ್ಯಾಯಸಮ್ಮತವಾದ ಮಾತೃತ್ವ ಪಡೆಯಲು ಅನುಮತಿ ದೊರಕುವುದಿಲ್ಲ. ಹೊರಬಾಂಧವ್ಯದ ಮೂಲಕ ಮಹಿಳೆಯು ತನಗೆ ಇಷ್ಟಬಂದ ಪುರುಷರನ್ನು ತನ್ನ ಪತಿಯರೆಂದು ಸ್ವೀಕರಿಸಬಹುದು. ಅದರ ಮೂಲಕ ಅವರ ಸ್ಥಾನಮಾನವು ಕುಟುಂಬದಲ್ಲಿ ನಿರ್ಧಾರವಾಗುತ್ತದೆ.

ಸಾಮಾನ್ಯವಾಗಿ ಬಂಜಾರ ಕುಟುಂಬಗಳಲ್ಲಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡು ಬರುತ್ತದೆ. ಆದರೆ ಅವಿಭಕ್ತ ಕುಟುಂಬಗಳ ಸಂಖ್ಯೆ ವಿರಳ. ಕುಟುಂಬಗಳು ಪಿತೃಪ್ರಧಾನವಾದ ಕುಟುಂಬಗಳಾಗಿದ್ದು, ಈ ಕುಟುಂಬಗಳಲ್ಲಿ ವಂಶಪಾರಂಪರಿಕೆ, ರಕ್ತಸಂಬಂಧ ಇತ್ಯಾದಿಗಳನ್ನು ತಂದೆಯ ಕುಲದ ಆಧಾರದ ಮೇಲೆ ಗುರುತಿಸಲಾಗುತ್ತದೆ. ಆದರೆ ಕೆಲವು ಮಾತೃಪ್ರಧಾನವಾದ ಕುಟುಂಬಗಳು ಅಲ್ಲಲ್ಲಿ ಕಂಡುಬಂದರೂ ಅದು ಕೇವಲ ಕುಟುಂಬದ ನಿರ್ವಹಣೆಗೆ ಮಾತ್ರ ಸೀಮಿತವಾಗಿದ್ದು, ಕುಲ-ವಂಶದ ನಿರ್ಧಾರ ತಂದೆಯ ಆಧಾರದ ಮೇಲೆ ನಿರ್ಧರಿತ ವಾಗುತ್ತದೆ. ಒಂದು ವೇಳೆ ತಂದೆ ಮರಣ ಹೊಂದಿದ್ದರೆ ಅಥವಾ ಮುಪ್ಪಿನಿಂದ ಕುಟುಂಬ ವನ್ನು ನಿರ್ವಹಿಸಲು ಸಾಧ್ಯವಾಗದಿದ್ದರೆ ಆಗ ಹಿರಿಯ ಮಗನಿಗೆ ಕುಟುಂಬದ ಜವಾಬ್ದಾರಿ ಯನ್ನು ವಹಿಸಲಾಗುತ್ತದೆ. ಈತ ಕುಟುಂಬದ ಎಲ್ಲಾ ಆಗು-ಹೋಗುಗಳನ್ನು ನೋಡಿ ಕೊಳ್ಳುತ್ತಾನೆ. ಕೆಲವು ಕುಟುಂಬಗಳಲ್ಲಿ ಗಂಡುಮಕ್ಕಳು ಸಾಮಾನ್ಯವಾಗಿ ವಿವಾಹವಾದ ಬಳಿಕ ತಮ್ಮ ಹೆಂಡತಿ ಮಕ್ಕಳೊಂದಿಗೆ ಅವಿಭಕ್ತ ಕುಟುಂಬದಿಂದ ಪ್ರತ್ಯೇಕವಾಗಿ ಜೀವನ ನಡೆಸುತ್ತಾರೆ.

ಮತ್ತೊಂದು ಗಮನಾರ್ಹ ಅಂಶವೆಂದರೆ ಬಂಜಾರ ದಂಪತಿಗಳು ಪರಸ್ಪರ ಒಬ್ಬರಿ ಗೊಬ್ಬರು ಹೆಸರು ಹಿಡಿದು ಕರೆಯುವುದಿಲ್ಲ. ಕಾರಣ ಹೆಸರು ಹೇಳುವುದರಿಂದ ಅವರ ಗಂಡನ ಆಯಸ್ಸು ಕಡಿಮೆಯಾಗುತ್ತದೆಯೆಂತಲೂ ಅಥವಾ ಆತ ಮುಪ್ಪಾಗುವನೆಂದು

ನಂಬಿರುತ್ತಾರೆ. ಬಂಜಾರ ದಂಪತಿಗಳು ವಿವಾಹವಾಗಿ ಅನೇಕ ವರ್ಷಗಳು ಕಳೆದರೂ ಬೀದಿಯಲ್ಲಿ ನಿಂತು ಮಾತನಾಡುವುದು, ಮನೆಯ ಹಿರಿಯರ ಎದುರಲ್ಲಿ ನಿಂತು ಮಾತಾಡುವುದು, ಒಬ್ಬರನೊಬ್ಬರು ಅನುಕರಣೆ ಮಾಡುವುದು, ಯಾರನ್ನಾದರೂ ಅಗೌರವ ಹಾಗೂ ಅಸಂಬದ್ಧವಾಗಿ ವರ್ತಿಸಿದರೆ ಅವರಿಗೆ ಘನತೆ ಗೌರವದ ಪ್ರಶ್ನೆಯಾಗುತ್ತದೆ. ಆದ್ದರಿಂದ ಇಂತಹ ಸೂಕ್ಷ್ಮ ವಿಷಯಗಳಲ್ಲಿ ಸಂಕೋಚ ಸ್ವಭಾವದ ಬಂಜಾರರು ಬಹು ಎಚ್ಚರಿಕೆಯಿಂದಲೇ ವರ್ತಿಸುತ್ತಾರೆ.

ದಕ್ಷಿಣ ಕರ್ನಾಟಕದ ಬಹುಪಾಲು ಜಿಲ್ಲೆಗಳಲ್ಲಿ ವಿಭಕ್ತ ಕುಟುಂಬಗಳು ಕಂಡುಬಂದಿದೆ. ಪಿತೃಪ್ರಧಾನ ವ್ಯವಸ್ಥೆ ಸಾಮಾನ್ಯವಾಗಿದೆ. ಅವಿಭಕ್ತ ಕುಟುಂಬಗಳು ವಿರಳವಾಗಿದ್ದು, ಅಲೆಮಾರಿ ಜೀವನದಿಂದಾಗಿ ಅವಿಭಕ್ತತೆ ಒಲವು ಕಡಿಮೆಯಾಗಿದೆ.

ಪ್ರಸ್ತುತ ಅಧ್ಯಾಯದಲ್ಲಿ ಬಂಜಾರರಲ್ಲಿ ಬಂಧುತ್ವ ಮತ್ತು ವಿವಾಹ ಆಚರಣೆಗಳ ಸ್ಥೂಲ ಪರಿಚಯ ಮಾಡಿಕೊಂಡು, ಸಂಶೋಧನಾ ಅಧ್ಯಯನದಲ್ಲಿ ಕಂಡುಕೊಂಡಂತಹ ಹಾಗೂ ಸಂಗ್ರಹಣೆ ಮಾಡಿರುವ ಮಾಹಿತಿಗಳನ್ನು ಅವಲೋಕಿಸಿದಾಗ, ಒಂದು ಸೀಮಿತ ಸಂಖ್ಯೆಯ ಬಂಜಾರ ಸಮುದಾಯಗಳ ತಾಂಡಗಳಲ್ಲಿನ ಜನರು ಬದಲಾದ ಸನ್ನಿವೇಶಗಳಿಗೆ ತಮ್ಮನ್ನು ತಾವು ಅರ್ಪಿಸಿಕೊಂಡು ಪರಿವರ್ತನೆಯ ಹಾದಿಯನ್ನು ತುಳಿಯುತ್ತಿದ್ದಾರೆ. ಅದರಲ್ಲೂ ಶೈಕ್ಷಣಿಕವಾಗಿ ಪ್ರಗತಿಯಲ್ಲಿರುವ ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ತಾಂಡಗಳ ೭೦ ಬಾತ್ಮೀದಾರರ ಕುಟುಂಬಗಳನ್ನು ಸಂದರ್ಶಿಸಿ ಅವಲೋಕಿಸಿದಾಗ ಕಂಡು ಬಂದಂತಹ ಮಾಹಿತಿಯೆಂದರೆ, ಶಿಕ್ಷಣ, ಉದ್ಯೋಗ, ಪರಿಸರ, ಸಂಪರ್ಕ, ನಗರೀಕರಣ ಹಾಗೂ ಆಧುನೀಕರಣ ಪ್ರಭಾವಗಳಿಂದಾಗಿ ಈ ತಾಂಡಗಳಲ್ಲಿನ ಬಹುತೇಕ ಕುಟುಂಬಗಳ ಜೀವನಶೈಲಿ, ಕೌಟುಂಬಿಕ ವ್ಯವಸ್ಥೆ ಸುಧಾರಿತ ಹಂತದಲ್ಲಿದ್ದು, ಸಾಂಪ್ರದಾಯಿಕ ಬದುಕಿನ ದಿಕ್ಕನ್ನು ಬದಲಾಯಿಸಿದೆ, ಉಳಿದಂತೆ ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಯ ಕಡೂರು ಮತ್ತು ಬಾಗೇಪಳ್ಳಿಯಲ್ಲಿನ ತಾಂಡಗಳಲ್ಲಿನ ೭೦–೬೦ ಕುಟುಂಬಗಳ ಬದಕು ತೀರಾ ಕಷ್ಟಕರವಾಗಿದ್ದು, ಹೆಚ್ಚಿನ ಅಭಿವೃದ್ಧಿ ಸುಧಾರಣೆಯಾಗಬೇಕಾಗಿದೆ. ಜೀವನಮಟ್ಟ ಅಥವಾ ಶೈಲಿ, ಶಿಕ್ಷಣ, ಸಂಪರ್ಕ, ಪರಿಸರ, ನಗರೀಕರಣ ಮುಂತಾದ ಅಂಶಗಳಲ್ಲಿ ಅಷ್ಟೇನೂ ಪ್ರಗತಿ ಕಾಣದೇ ಸಾಂಪ್ರದಾಯಿಕ ನೆಲೆಗಟ್ಟಿನಲ್ಲೇ ಸಂಪೂರ್ಣವಾಗಿರದೆ, ಬದಲಾವಣೆಯ ದಿಕ್ಕಿಗೆ ಪೂರ್ಣ ಪ್ರಮಾಣದಲ್ಲಿ ಹೊಂದಿಕೊಳ್ಳದಂತಹ ಸ್ಥಿತಿಯಲ್ಲಿರುವುದು, ಅವರಲ್ಲಿನ ಹಿಂದುಳಿದಿರುವಿಕೆಗೆ ಕಾರಣವಾಗಿದೆ.

❖ ❖ ❖

ಅಧ್ಯಾಯ ನಾಲ್ಕು

# ಬಂಜಾರರ ಆರ್ಥಿಕ ಜೀವನ

ಳ.೧. ಆರ್ಥಿಕ ವ್ಯವಸ್ಥೆ

ಳ.೨. ಮೂಲ ಕಸುಬು ಮತ್ತು ಇತರೆ ವೃತ್ತಿಗಳು

ಳ.೩. ಸಾಕ್ಷರತೆ ಮತ್ತು ಮಾತೃಭಾಷೆ

ಳ.ಳ. ಒಳಾಡಳಿತ ವ್ಯವಸ್ಥೆ

ಳ.೫. ನ್ಯಾಯಪಂಚಾಯ್ತಿ, ನ್ಯಾಯ ನಿರ್ಣಯಗಳು

ಅಧ್ಯಾಯ ನಾಲ್ಕು

# ಬಂಜಾರರ ಆರ್ಥಿಕ ಜೀವನ

**ನಾ**ಗರೀಕವಲ್ಲದ ಸಮಾಜಗಳು ಪ್ರಪಂಚದಾದ್ಯಂತದಲ್ಲಿ ಆರ್ಥಿಕಾಭಿವೃದ್ಧಿಯ ವಿವಿಧ ಹಂತಗಳ ಮುಖಾಂತರ ಕಂಡುಬಂದಿದೆ. ಆದುದರಿಂದಲೇ ಭಾರತದ ಆದಿವಾಸಿಗಳು ಆಹಾರ ಸಂಗ್ರಹಣೆ ಬೇಟೆ–ಮೀನುಗಾರಿಕೆ, ಪ್ರಾಣಿ ಸಾಕಾಣೆ, ತೋಟಗಾರಿಕೆ ಅರ್ಥವ್ಯವಸ್ಥೆ ಯಿಂದ ಕೃಷಿಕ ಅರ್ಥ ವ್ಯವಸ್ಥೆಗೆ ವಿಕಸಗೊಂಡಿದೆ. ಇದೇ ಪರಿಸ್ಥಿತಿ ಎಲ್ಲೆಡೆಯಲ್ಲೂ ಇತ್ತು. ಇಂತಹ ಸಮಾಜವನ್ನೇ ಸರಳ ಸಮಾಜ ಎನ್ನುತ್ತೇವೆ. ಅಂದರೆ ಆಂತರಿಕವಾಗಿ ಅತ್ಯಂತ ಕನಿಷ್ಠಮಟ್ಟದ ವೈವಿಧ್ಯವನ್ನು ಹೊಂದಿರುವ ಮತ್ತು ಮಾನವ ಸಮಾಜಗಳಲ್ಲಿ ಅತ್ಯಂತ ಆರಂಭಿಕ ರೂಪದಲ್ಲಿರುವ ಸಮಾಜವೇ ಸರಳ ಸಮಾಜವಾಗಿದೆ. ಇಂತಹ ಸಮಾಜವೇ ಬುಡಕಟ್ಟು ಸಮಾಜ ಸಮುದಾಯ.[೧]

ಲಂಬಾಣಿ ಬುಡಕಟ್ಟು ಜನರು ಮೂಲತಃ ವ್ಯಾಪಾರಿಗಳಾಗಿದ್ದು ರಾಜಸ್ಥಾನದ 'ವಣಿಕ್' ಸಮಾಜಕ್ಕೆ ಸೇರಿದವರಾಗಿದ್ದು. ದೇಶ ವಿದೇಶಗಳಿಗೆ ವ್ಯಾಪಾರಕ್ಕಾಗಿ ಸಂಚರಿಸು ತ್ತಿದ್ದರೆಂದು ಇತಿಹಾಸದ ಮೂಲಕಗಳು ತಿಳಿಸುತ್ತವೆ. ರಾಜಸ್ಥಾನದ ಈ ವ್ಯಾಪಾರಿ ಜನರಲ್ಲಿ ಗುರ್ಜರ

---

೧. ಲೂಸಿಮೆಯರ್" ಆ್ಯನ್ ಇನ್‌ಟ್ರಡಕ್ಷನ್ ಟೂ ಸೋಷಿಯಲ್ ಅನ್‌ಡ್ರೊಪಾಲಜಿ ಸಿ.ಯುಎಲ್.ಟಿ ೧೯೮೪

ಮಾರವಾಡಿ ಹಾಗೂ ಲಂಬಾಣಿ ಜನರು ಅತ್ಯಂತ ಪ್ರಸಿದ್ಧಿಯನ್ನು ಪಡೆದಿದ್ದರು. ರಾಜಸ್ಥಾನದ ಮಾರವಾಡಿಗಳ ಉಪಜೀವನದ ಸಾಧನ ವಾಣಿಜ್ಯವಾಗಿರುವಂತೆ ಬಂಜಾರರ ಉಪಜೀವನವು ವ್ಯಾಪಾರವೇ ಆಗಿದೆ.

ರಾಜಸ್ಥಾನದ ಮಾರವಾಡಿಗಳ ಉಪಜೀವನ ಸಾಧನ ವಾಣಿಜ್ಯವಾಗಿರುವಂತೆ ಲಂಬಾಣಿಗಳ ಉಪಜೀವನದ ಸಾಧನ ವಾಣಿಜ್ಯ(ವ್ಯಾಪಾರ)ವೇ ಆಗಿದೆ ರಾಣಾ ಪ್ರತಾಪನ ಅನುಯಾಯಿ ಗಳೆಂದು ಹೇಳಲಾಗುವ ಈ ಜನರು ಅವನೊಂದಿಗೆ ಅನೇಕ ಕಷ್ಟ-ನಷ್ಟಗಳನ್ನೆದುರಿಸಿ ಕಾಲಾಂತರದಲ್ಲಿ ಬದುಕುವುದಕ್ಕೂ ಕಷ್ಟವಾಗಿ ಜೀವನೋಪಾಯಕ್ಕಾಗಿ ತಮ್ಮ ಅಸಂಖ್ಯಾತ ದನಕರುಗಳೊಂದಿಗೆ ರಾಜಸ್ಥಾನ ಹಾಗೂ ಪಹಾಡ ಪ್ರದೇಶಗಳನ್ನು ಬಿಟ್ಟು 'ಮಾಳವಾ' ಮುಖಾಂತರವಾಗಿ ದಕ್ಷಿಣಕ್ಕೆ ಅಲೆಮಾರಿಗಳಾಗಿ ಬಂದು ಗುಂಪುಗಳಲ್ಲಿ ವ್ಯಾಪಾರಕ್ಕಾಗಿ ನಿಂತರು. ದೇಶದಲ್ಲಿ ರೈಲುಯುಗ ಇನ್ನೂ ಅಸ್ತಿತ್ವದಲ್ಲಿರಲಾರದ ಸಮಯದಲ್ಲಿ ಈ ಲಂಬಾಣಿಗಳು ಇಲ್ಲಿ ಬಂದು, ಭಾರೀ ವಸ್ತುಗಳನ್ನು ತಮ್ಮ ದನಕರುಗಳ ಮೇಲೆ ಹೇರಿಕೊಂಡು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಬರಾಜು ಮಾಡುವುದನ್ನು ಪ್ರಾರಂಭಿಸಿದರು. ಪ್ರತಿಯೊಬ್ಬರಲ್ಲಿ ಸಾಕಷ್ಟು ಪ್ರಮಾಣದಲ್ಲಿ ದನಕರುಗಳಿದ್ದುದರಿಂದ ಅವುಗಳನ್ನು ಇದಕ್ಕಾಗಿ ಉಪಯೋಗಿಸಿಕೊಂಡರು. ಈ ಗುಂಪುಗಳಲ್ಲಿ ಕೆಲವರು ಲವಣದ(ಉಪ್ಪು) ವ್ಯಾಪಾರವನ್ನು ಕೈಕೊಂಡರೆ, ಇನ್ನೂ ಕೆಲವರು ಆಹಾರ ಧಾನ್ಯಗಳು, ಖಾದ್ಯಪದಾರ್ಥಗಳ ಹಾಗೂ ಮುತ್ತಿನ ವ್ಯಾಪಾರವನ್ನು ಕೈಕೊಂಡಿರುವುದು ಕಂಡುಬರುತ್ತದೆ. ಲಂಬಾಣಿಗರ ಶಕ್ತಿ, ಸಾಹಸ ಹಾಗೂ ಧೈರ್ಯವನ್ನು ಕಂಡು ಮೊಗಲರು ತಮ್ಮ ಸೈನ್ಯಗಳಿಗೆ ಆಹಾರ ಧಾನ್ಯವನ್ನು ಪೂರೈಸುವುದಕ್ಕಾಗಿ ಇವರನ್ನು ನಿಯಮಿಸಿಕೊಂಡರೆಂದು ತಿಳಿಯುತ್ತದೆ. ಸೇನೆಗಳಿಗೆ ಆಹಾರ ಧಾನ್ಯವನ್ನು ಪೂರೈಸುವುದು ಅಷ್ಟು ಸುಲಭದ ಕೆಲಸವಲ್ಲ. ದಟ್ಟಡವಿಯ ಮೂಲಕ ಹೋಗಬೇಕಾಗುತ್ತಿತ್ತು ಅಲ್ಲದೆ ಭಯಂಕರವಾದ ಕ್ರೂರ ಮೃಗಗಳನ್ನು ಕಳ್ಳಕಾಕರನ್ನು ಎದುರಿಸಬೇಕಾಗುತ್ತಿತ್ತು.

ಮೊಗಲ ಸಾಮ್ರಾಜ್ಯದ ಪತನವಾದ ಮೇಲೆ ಹಿಂದುಸ್ಥಾನದಲ್ಲಿ ಹಲವಾರು ಹೊಸ ಹೊಸ ಪರಿವರ್ತನೆಗಳಾದವು. ಇದರಿಂದ ಕೆಲವರಿಗೆ ಲಾಭ, ಇನ್ನೂ ಕೆಲವರಿಗೆ ನಷ್ಟವಾಯಿತು ೧೭ನೇಯ ಶತಮಾನದ ಈ ಕಾಲಾವಧಿಯಲ್ಲಿ ರೈಲುಗಾಡಿಗಳು ಬಳಕೆಯಲ್ಲಿ ಬಂದುದರ ಫಲವಾಗಿ ಲಂಬಾಣಿಗರ ಅವರೆಗಿನ ಸರಬರಾಜು ಮಾಡುವ ಕಾರ್ಯ ನಿಂತುಹೋಗಿ, ಅವರಿಗೆ ಅತೀವ ಹಾನಿಯುಂಟಾಯಿತು. ಹೀಗಾಗಿ ಬಹಳಷ್ಟು ಕಷ್ಟದ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಮುಂದೆ ೧೭ನೇಯ ಶತಮಾನದ ಉತ್ತರಾರ್ಧಕ್ಕೆ ಲಂಬಾಣಿಗರು

'ತಾಂಡಾ'ದ ರೂಪದಲ್ಲಿ ನೆಲೆಯಾಗಿ, ಆಯಾ ಪ್ರದೇಶಗಳಲ್ಲಿ ಪ್ರಚಲಿತವಿರುವ ಕಸಬುಗಳನ್ನೇ ತಮ್ಮದನ್ನಾಗಿ ಸ್ವೀಕರಿಸಿದರು.

ಕರ್ನಾಟಕದ ಲಂಬಾಣಿಗರು ಕೃಷಿಯನ್ನೇ ತಮ್ಮ ಪ್ರಧಾನ ಕಸಬನ್ನಾಗಿ ಮಾಡಿಕೊಂಡು ಉಪಜೀವಿಸುತ್ತಿದ್ದಾರೆ. ವ್ಯವಸಾಯಗಾರರಲ್ಲಿ ಒಣಬೇಸಾಯದವರೇ ಹೆಚ್ಚು ಜನ. ಗದ್ದೆ ತೋಟಗಳಿರುವ ಜನ ತೀರ ಕಡಿಮೆ ಎಷ್ಟೋ ಜನ ಲಂಬಾಣಿಗರು ತಮ್ಮ ಸ್ವಂತ ಜಮೀನು ಇಲ್ಲದೆ ಬೇರೆಯವರ ಜಮೀನಿನಲ್ಲಿ ಕೃಷಿ ಮಾಡುತ್ತಾರೆ. ಮೊದಲು ಅಲೆಮಾರಿಗಳಾಗಿದ್ದು ಇಂದು ಗುಂಪಿನಲ್ಲಿ ನೆಲೆಸಿರುವ ಈ ಜನರು ಪ್ರಕೃತಿಯ ಶಿಶುಗಳಾಗಿದ್ದಾರೆ.ಆರ್ಥಿಕ ದೃಷ್ಟಿಯಿಂದ ತುಂಬಾ ಹೀನಸ್ಥಿತಿಯಲ್ಲಿದ್ದಾರೆ. ಹೆಚ್ಚಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಈ ಜನರು ಕಾಡು ಕಡಿದು ಅಲ್ಪಸ್ವಲ್ಪ ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದರೂ, ಹೆಚ್ಚು ಜನ ಕೂಲಿಯನ್ನು ಅವಲಂಬಿಸಿದ್ದಾರೆ. ಕೆಲವು ಜನರಲ್ಲಿ ಮೂಲದ ವ್ಯಾಪಾರ ಮನೋವೃತ್ತಿ ಇಂದಿಗೂ ಉಳಿದುಬಂದಿದೆ. ಕಾಡಿನಲ್ಲಿ ಸುಲಭವಾಗಿ ಸಿಗುವ ಜೇನು, ಕವಳಿಹಣ್ಣು, ನೆಲ್ಲಿಕಾಯಿ, ಬಿಕ್ಕೆಹಣ್ಣು ಇತ್ಯಾದಿಗಳನ್ನು ಪೇಟೆಗೆ ತಂದು ಮಾರಿ ಹಣ ಸಂಪಾದಿಸುತ್ತಾರೆ. ಈ ಸಮಾಜದಲ್ಲಿ ಹೆಚ್ಚಾಗಿ ಗಂಡಸರು ಸೋಮಾರಿಗಳು, ಹೆಣ್ಣುಮಕ್ಕಳ ಶ್ರಮಜೀವಿಗಳಾಗಿದ್ದಾರೆ. ಕೆಲವರು ಕಾಡಿನಲ್ಲಿ ಕಟ್ಟಿಗೆ ಕಡಿದು ತಲೆಯ ಮೇಲೆ ಹೊತ್ತು ದೂರದ ಪಟ್ಟಣ ಪ್ರದೇಶಗಳಲ್ಲಿ ಹೋಗಿ ಮಾರಾಟ ಮಾಡಿ ಜೀವಿಸುತ್ತಾರೆ. ಕೆಲವೊಮ್ಮೆ ಲಂಬಾಣಿಗರು ಕೆಲಸವಿಲ್ಲದೆ ಬದುಕಲು ಕಷ್ಟವೆಂದು ತೋರಿದಾಗ ತಾಂಡಾ ಬಿಟ್ಟು ದೂರದ ಪ್ರದೇಶಗಳಿಗೆ ವಲಸೆ ಹೋಗಿ ಬೇರೆ ಬೇರೆ ಕೆಲಸಗಳಲ್ಲಿ ನಿರತರಾಗುತ್ತಾರೆ. ಕಲ್ಲು ಒಡೆಯುವುದು, ಭಾರ ಹೊರುವುದು–ಹೀಗೆ ಅನೇಕ ಕೆಲಸಗಳಲ್ಲಿ ತೊಡಗಿ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಅವರಿಗೆ ಮೈ ಮುರಿದು ದುಡಿಯದೆ ಗತ್ಯಂತರವೆ ಇಲ್ಲ. ಬೆವರು ಸುರಿಸಿ ಬದುಕನ್ನು ಸಾಗಿಸುತ್ತಾರೆ.

ಲಂಬಾಣಿಗರು ತಮ್ಮ ಮಕ್ಕಳನ್ನು ಆಲಸಿಗಳಾಗಲು ಬಿಡುವುದಿಲ್ಲ. ಯಾವುದಾದರೂ ಕೆಲಸದಲ್ಲಿ ತೊಡಗಿಸಿ ಬೆವರಿನ ಬೆಲೆ ಏನೆಂಬುದನ್ನು ಮನವರಿಕೆ ಮಾಡಿಕೊಡುತ್ತಾರೆ. ಕೆಲಸವಿಲ್ಲದೆ ವ್ಯರ್ಥವಾಗಿ ಅಲೆಯುತ್ತಿದ್ದರೆ ಮೀನು ಹಿಡಿಯುವುದಕ್ಕಾಗಿಯೊ, ಜೇನು ಬಿಡಿಸುವುದಕ್ಕಾಗಿಯೊ ಅವರನ್ನು ಕಳಿಸಿಕೊಡುತ್ತಾರೆ. ೪–೫ ವರ್ಷದ ಮಕ್ಕಳು ಕೈಗೆ ಬಂದರೆ ಅವರಿಗೆ ತುಂಬಾ ಸಂತೋಷ. ಅವರು ತಮ್ಮೊಂದಿಗೆ ದುಡಿಯಲು ಅರ್ಹರಾಗಿಬಿಡುತ್ತಾರೆ. ಅವರಿಗಾಗಿ ಚಿಂತಿಸಬೇಕಾಗಿಲ್ಲ. ಅವರ ಭವಿಷ್ಯಕಾಗಿ ಯೋಚಿಸಬೇಕಾಗಿಲ್ಲ. ತಾವು ಹೇಗೋ ತಮ್ಮ

ಮಕ್ಕಳು ಹಾಗೆಯೇ ದುಡಿದು ತಿಂದು ಜೀವಿಸುತ್ತಾರೆಂದು ತಿಳಿಯುತ್ತಾರೆ. ತಮಗೆ ಮಕ್ಕಳು ಹೆಚ್ಚಾಗಿದ್ದಷ್ಟೂ ಒಳ್ಳೆಯದೆಂದು ಭಾವಿಸುತ್ತಾರೆ. ಅವರೆಲ್ಲ ಕೆಲಸ ಮಾಡುವುದರಿಂದ ತಮಗೆ ಬಡತನ ತಪ್ಪುವುದೆಂಬ ಮೌಢ್ಯ ಅವರಲ್ಲಿ ತುಂಬಿದೆ. ಹೀಗೆ ಈ ಜನರು ಮಳೆ, ಗಾಳಿ, ಚಳಿ, ಬಿಸಿಲೆನ್ನದೆ ಬೆವರು ಸುರಿಸಿ ಬದುಕನ್ನು ಸಾಗಿಸುತ್ತಾರೆ. ಕುಟುಂಬದ ಪ್ರತಿಯೊಬ್ಬ ಸದಸ್ಯರು ಹಣ ಸಂಪಾದನೆಗಾಗಿ ತೊಡಗುತ್ತಾರೆ. ನಿಜ, ಆದರೆ ಅವರ ಆರ್ಥಿಕ ಸಂಘಟನೆಯ ಬಹುಪಾಲು ಹಣ ದುಂದುವೆಚ್ಚಕ್ಕಾಗಿ ಪೋಲಾಗುತ್ತದೆ. ಕಷ್ಟಪಟ್ಟು ದುಡಿದು ತಂದ ಹಣದಲ್ಲಿ ಅರ್ಧದಷ್ಟು ಕುಡಿತದಂತಹ ದುಶ್ಚಟಕ್ಕಾಗಿ ಹಾಕುತ್ತಾರೆ. ಪ್ರತಿನಿತ್ಯ ಹೆಂಡ-ಮಾಂಸವನ್ನು ಬಯಸುವ ಈ ಜನರ ಆರ್ಥಿಕ ಸ್ಥಿತಿಗತಿ ಸುಧಾರಿಸುವುದು ತುಂಬಾ ಕಷ್ಟ.[೨]

ಕರ್ನಾಟಕದ ಲಂಬಾಣಿಗರು ಮೂಲತಃ ರಾಜಸ್ತಾನದವರಾಗಿದ್ದು, ಸಂಚಾರಿ ಜನಾಂಗವಾಗಿ ದಕ್ಷಿಣಕ್ಕೆ ಬಂದು ಅಲ್ಲಲ್ಲಿ ತಂಡೋಪತಂಡಗಳಾಗಿ ನೆಲೆನಿಂತು ಕರ್ನಾಟಕ, ಆಂಧ್ರ ಪ್ರದೇಶ ಹಾಗೂ ಮಹಾರಾಷ್ಟ್ರಗಳನ್ನೇ ತಮ್ಮ ತಾಯ್ನಾಡನ್ನಾಗಿ ಮಾಡಿಕೊಂಡಿದ್ದಾರೆ. ಸಮೀಕ್ಷೆ ಹಾಗೂ ಜನಗಣತಿ ಪ್ರಕಾರ ಇವರು ಕರ್ನಾಟಕದ ಎಲ್ಲಾ(ಮಡಿಕೇರಿ ಹೊರತುಪಡಿಸಿ) ಜಿಲ್ಲೆಗಳಲ್ಲಿಯೂ ಕಂಡುಬರುತ್ತಾರೆ. ಲಂಬಾಣಿಗಳದು ಶತಮಾನಗಳಿಂದ ಕಂಡು ಬರುವ ಒಂದು ರೀತಿಯ ಸಂಚಾರಿ ಜೀವನ. ಆದರೂ ಅವರಲ್ಲಿ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ಸಂಘಟನೆಗಳಿಗೆ ಬಹುದೊಡ್ಡ ಶಕ್ತಿಯು ಅಡಕವಾಗಿರುವುದನ್ನು ಕಾಣಬಹುದು. ಲಂಬಾಣಿ ಸಮಾಜದಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬಗಳು ಇದ್ದರೂ ಮಾತೃಪ್ರಧಾನ ಕುಟುಂಬಗಳು ಅಲ್ಲಲ್ಲಿ ಕಂಡುಬರುತ್ತವೆ. ಈ ಸಮಾಜದಲ್ಲಿ ಮಹಿಳೆಯರಿಗಿಂತ ಪುರುಷರ ಸ್ಥಾನಮಾನಗಳು ಗೌರವಯುತವಾಗಿರುತ್ತದೆ. ಹಾಗೂ ಎಲ್ಲಾ ಹೊಣೆಗಾರಿಕೆಗಳು ಇವರದ್ದೇ ಆಗಿರುತ್ತದೆ. ಹೀಗಾಗಿ ಈ ಸಮಾಜದಲ್ಲಿ ಮಹಿಳೆಯರು ಪುರುಷರಿಗೆ ಅಧೀನರಾಗಿ ಬಾಳುತ್ತಾರೆ. ತಂದೆಯ ಆಸ್ತಿಗೆ, ವಂಶದ ಕೀರ್ತಿಗೆ ಇಲ್ಲದೆ ವಾರಸುದಾರಿಕೆಗೆ ಕುಟುಂಬದ ಹಿರಿಯ ಮಗನೇ ಹಕ್ಕುದಾರನಾಗಿರುತ್ತಾನೆ. ಕುಟುಂಬದಲ್ಲಿ ತಂದೆಯ ನಂತರ ಹಕ್ಕು ವಾರಸುದಾರಿಕೆ ಹಿರಿಯ ಮಗನಿಗೆ ಹಸ್ತಾಂತರವಾಗುತ್ತದೆ. ಹಾಗೆಯೇ ಹೆಚ್ಚಿನ ಜವಾಬ್ದಾರಿಯನ್ನು ನೀಡಲಾಗುತ್ತದೆ.

---

೨. ಪಿ.ಕೆ. ಖಂಡೋಬ, ಕರ್ನಾಟಕದ ಲಂಬಾಣಿಗಳು, ಸಾಂಸ್ಕೃತಿಕ ಅಧ್ಯಯನ, ದಿ ತೇಜಸಿಂಗ್, ರಾಠೋಡ್, ಮೆಮೋರಿಯಲ್ ಟ್ರಸ್ಟ್, ಗುಲ್ಬರ್ಗಾ-೧೯೯೧. ಪುಟ.೪೮-೫೦

### ೪.೧. ಆರ್ಥಿಕ ವ್ಯವಸ್ಥೆ

ಬಂಜಾರರು ಮೂಲತಃ ವ್ಯಾಪಾರಿಗಳಾಗಿದ್ದು ವಾಣಿಜ್ಯ-ವ್ಯಾಪಾರ ಕ್ಷೇತ್ರಗಳಲ್ಲಿ ಇನ್ನೂಳಿದವುಗಳಿಗಿಂತ ಮುಂದುವರೆದಿದ್ದವು. ಕಾಲಾಂತರಗಳಲ್ಲಿ ಅನೇಕ ರಾಜಪ್ರಭುತ್ವಗಳ ಆಳ್ವಿಕೆ ಮತ್ತು ಬ್ರಿಟೀಷರ ಸುಧೀರ್ಘ ಆಡಳಿತಾತ್ಮಕ ವ್ಯವಸ್ಥೆಯಿಂದ ತಮ್ಮ ಮೂಲ ಕಸುಬುಗಳಲ್ಲಿ ಸಾಕಷ್ಟು ಸುಧಾರಣೆಗಳನ್ನು ಕಂಡು ಸಾಂದರ್ಭಿಕವಾಗಿ ತಮ್ಮ ಜೀವನ ನಿರ್ವಹಣೆಗಾಗಿ ಇತರೆ ವೃತ್ತಿ ಅಥವಾ ಉದ್ಯೋಗಗಳತ್ತ ಗಮನಹರಿಸಿರುತ್ತಾರೆ. ಕರ್ನಾಟಕದ ಬಂಜಾರರು ಕೃಷಿಯೇತರ ಚಟುವಟಿಕೆಗಳೇ ತಮ್ಮ ಪ್ರಧಾನ ಕಸಬನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ವ್ಯವಸಾಯಗಾರರಲ್ಲಿ ಒಣಬೇಸಾಯವೇ ಹೆಚ್ಚಾಗಿದೆ. ಗರಿಷ್ಠ ಪ್ರಮಾಣದ ಜನರು ತಮಗೆ ಸ್ವಂತ ಜಮೀನು ಇಲ್ಲದೆ ಬೇರೆಯವರ ಜಮೀನಿನಲ್ಲಿ ಕೃಷಿ ಮಾಡುತ್ತಾರೆ. ಮೊದಲು ಅಲೆಮಾರಿಗಳಾಗಿದ್ದು, ಇಂದು ಗುಂಪಿನಲ್ಲಿ ನೆಲೆಸಿರುವ ಈ ಜನರು ಪ್ರಕೃತಿ ಪ್ರಿಯರಾಗಿದ್ದಾರೆ.ಆರ್ಥಿಕ ಸ್ಥಿತಿಯಿಂದ ತುಂಬಾ ಹೀನಾಯ ಸ್ಥಿತಿಯಲ್ಲಿದ್ದಾರೆ, ಹೆಚ್ಚಾಗಿ ಗುಡ್ಡಗಾಡಿನಲ್ಲಿ ವಾಸಿಸುವ ಈ ಜನರು ಕಾಡು ಕಡಿದು ಅಲ್ಪಸ್ವಲ್ಪ ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದರೂ, ಹೆಚ್ಚು ಜನ ಕೂಲಿಯನ್ನು ಅವಲಂಬಿಸಿದ್ದಾರೆ. ಕೆಲವರಲ್ಲಿ ತಮ್ಮ ವಂಶ ಮೂಲದ ವ್ಯಾಪಾರ ಮನೋವೃತ್ತಿ ಇಂದಿಗೂ ಉಳಿದು ಬಂದಿದೆ.

ಸಂದರ್ಶನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಒಟ್ಟು ೨೦೦ ಮಾಹಿತಿದಾರರಲ್ಲಿ ೬೦ ಜನರು ಸಣ್ಣಪುಟ್ಟ ವ್ಯಾಪಾರ ವೃತ್ತಿಯನ್ನು ಅವಲಂಬಿಸಿದ್ದಾರೆ. ಅಂದರೆ ಬೇರೆ ಊರುಗಳಲ್ಲಿ ನೆಡೆಯುವ ಹಬ್ಬ, ಹರಿದಿನ, ಜಾತ್ರೆ ಮಹೋತ್ಸವ ಇನ್ನಿತರೆ ಕಾರ್ಯಕ್ರಮಗಳಲ್ಲಿ ವ್ಯಾಪಾರ ಮಾಡಿಕೊಂಡು ಜೀವಿಸುವವರಾಗಿದ್ದಾರೆ. ವಾರ್ಷಿಕವಾಗಿ ಒಂದು ನಿರ್ದಿಷ್ಟ ಅವಧಿಯಲ್ಲಿ ಮಾತ್ರ ಸೀಮಿತ ಉಳಿದಂತೆ ಕೂಲಿ ಮಾಡಿಕೊಂಡು ಜೀವಿಸುತ್ತಾರೆ. ಮಾಹಿತಿದಾರರಲ್ಲಿ ೨೦ರಷ್ಟು ಮಂದಿ ಸರ್ಕಾರಿ ಉದ್ಯೋಗ ಪಡೆಯುವಲ್ಲಿ ಯಶ್ವಸಿಯಾಗಿರುತ್ತಾರೆ. ಉದ್ಯೋಗದ ನಿಮಿತ್ತ ತಮ್ಮ ತಾಂಡದಿಂದ ಬಹುದೂರ, ದೂರದೂರದ ಊರುಗಳಲ್ಲಿ ವಾಸಿಸುತ್ತಿದ್ದಾರೆ. ಕಾಲಾಂತರಗಳಲ್ಲಿ ಅವರು ಮೂಲಸಂಪರ್ಕವನ್ನು ಕಡಿದುಕೊಳ್ಳುತ್ತಾರೆ. ಹೊಸದುರ್ಗಾ ತಾಲ್ಲೂಕಿನ ಬಂಜಾರ ಸಮುದಾಯದವರು ಶೈಕ್ಷಣಿಕವಾಗಿ ಮುಂದುವರೆದಿದ್ದು, ಸರ್ಕಾರಿ ಉದ್ಯೋಗ, ಅರೆಸರ್ಕಾರಿ ಹಾಗೂ ಖಾಸಗಿ ಸಂಸ್ಥೆಗಳಲ್ಲಿ ಬೆಂಗಳೂರು ಮತ್ತು ಸಮೀಪದ ಜಿಲ್ಲೆಗಳಲ್ಲಿ ವಾಸ್ತವ್ಯ ಹೊಂದಿದ್ದಾರೆ. ಈ ಜಿಲ್ಲೆಯಲ್ಲಿನ ಬಂಜಾರರ ಬದುಕು ಉಳಿದ ಜಿಲ್ಲೆಗಳಿಗಿಂತ ಸುಧಾರಿಸಿದೆ. ಉಳಿದ ೯೦ ಮಂದಿ ಜನರು ಅರೆಕೃಷಿ ಮತ್ತು ಬೇರೆಯವರ ಜಮೀನುಗಳಲ್ಲಿ ಕಾರ್ಮಿಕರಾಗಿ ಇಲ್ಲವೇ ಪಕ್ಕದ ಪೇಟೆಗಳಿಗೆ ಕೂಲಿಕಾರರಾಗಿ ದುಡಿಯುತ್ತಿದ್ದಾರೆ.

ಕೆಲವು ಸಂದರ್ಭಗಳಲ್ಲಿ ಬಂಜಾರರು ಕೆಸಲವಿಲ್ಲದೆ ಬದುಕು ನೆಡೆಸಲು ಕಷ್ಟ ಎಂದಾಗ ದೂರದ ಪ್ರದೇಶಗಳಿಗೆ ವಲಸೆ ಹೋಗಿ ಬೇರೆ ಬೇರೆ ಕೆಲಸಗಳಲ್ಲಿ ನಿರತರಾಗಿರುತ್ತಾರೆ. ಕಲ್ಲು ಹೊಡೆಯುವುದು, ಕಟ್ಟಡದ ಸಿಮೆಂಟು, ಇಟ್ಟಿಗೆ ಕೆಲಸದಲ್ಲಿ, ಇನ್ನೂ ಕೆಲವು ಸಧೃಡ ಯುವಕರು ಮದುವೆ ಛತ್ರಗಳಲ್ಲಿ ಅಡುಗೆಯವರಾಗಿ, ಊಟ ಬಡಿಸುವವರಾಗಿ ಕೆಲಸ ಮಾಡುತ್ತಿದ್ದಾರೆ. ಹೀಗೆ ಅನೇಕ ಕೆಲಸಗಳಲ್ಲಿ ತೊಡಗಿ ಆರ್ಥಿಕ ಸ್ಥಿತಿಯನ್ನು ಉತ್ತಮ ಪಡಿಸಿಕೊಳ್ಳುತ್ತಾರೆ. ಒಟ್ಟಿನಲ್ಲಿ ಅವರಿಗೆ ಮೈ ಮುರಿದು ದುಡಿಯದೆ ಗತ್ಯಂತರವೇ ಇಲ್ಲ. ಬೆವರು ಸುರಿಸಿ ಬದುಕನ್ನು ಸಾಗಿಸುತ್ತಾರೆ. ಉಳಿದ ೩೦ ಮಾಹಿತಿದಾರರ ಕುಟುಂಬಗಳಿಗೆ ಯಾವುದೇ ನಿರ್ದಿಷ್ಟ ಉದ್ಯೋಗವಿಲ್ಲದೆ ಅತಂತ್ರ ಸ್ಥಿತಿಯಲ್ಲಿದ್ದಾರೆ. ಚಿಕ್ಕಬಳ್ಳಾಪುರ ಜಿಲ್ಲೆಯ ಬಂಜಾರರ ತಾಂಡದ ಜನರು ಯಾವುದೇ ನಿಶ್ಚಿತ ಉದ್ಯೋಗ ಹೊಂದಿಲ್ಲ. ಹೆಚ್ಚು ಜನರು ಪಕ್ಕದ ಆಂಧ್ರ ಪ್ರದೇಶಕ್ಕೆ ಹಾಗೂ ಬೆಂಗಳೂರು ನಗರಗಳಿಗೆ ವಲಸೆ ಹೋಗಿರುತ್ತಾರೆ. ದೈನಂದಿನ ಬದುಕು ಹೆಚ್ಚು ದುಸ್ಥರವಾಗಿದೆ. ಅರೆಕಾಲಿಕ ಉದ್ಯೋಗವನ್ನು ಹೊಂದಿದ್ದು ಅಷ್ಟೇನು ಪ್ರಗತಿಯನ್ನು ಹೊಂದಿಲ್ಲದವರಾಗಿದ್ದಾರೆ.

**ಬಂಜಾರರಲ್ಲಿ ಕೃಷಿ ಜೀವನ–ಕುಟುಂಬದ ಭೂಮಿ ವಿವರ**

ಅಲೆಮಾರಿಗಳಾಗಿ ಅಲೆದಾಡುತ್ತ ಹೊಟ್ಟೆಪಾಡಿನ ಜೀವನ ನಡೆಸುತ್ತಿದ್ದು ಬಂಜಾರರು ಕ್ರಮೇಣವಾಗಿ ಒಂದೆಡೆ ನೆಲೆನಿಂತು ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡರು, ಅವರ ಮೂಲ ವೃತ್ತಿಯಲ್ಲಿ ಗಣನೀಯ ಬದಲಾವಣೆ ಉಂಟಾಯಿತು. ಕಾಡುಗಳನ್ನು ಕಡಿದು ವ್ಯವಸಾಯ ಭೂಮಿಯನ್ನಾಗಿ ಪರಿವರ್ತಿಸತೊಡಗಿದರು, ಕಾಡುಭೂಮಿಯಿಂದ ಅನೇಕ ಬೆಳೆಗಳನ್ನು ಬೆಳೆದು ಆರ್ಥಿಕ ಜೀವನ ಸುಧಾರಿಸುವಲ್ಲಿ ಸಫಲರಾದರು. ಅಧ್ಯಯನಕ್ಕೆ ಒಳಪಟ್ಟು ೨೦೦ ಮಾಹಿತಿದಾರರಲ್ಲಿ ೪೦ ಜನರು ಮಾತ್ರ ವ್ಯವಸಾಯ ಭೂಮಿಯನ್ನು ಹೊಂದಿದವ ರಾಗಿದ್ದು ಅವರಲ್ಲಿ ಕೇವಲ ೧ ಎಕರೆ ಭೂಮಿಗಿಂತ ಕಡಿಮೆ ಇರುವವರ ಸಂಖ್ಯೆ ೨೮ ರಷ್ಟಿದ್ದರೆ, ೧ ರಿಂದ ೨ ಎಕರೆ ಭೂಮಿ ಹೊಂದಿರುವವರ ಸಂಖ್ಯೆ ೦೭ರಷ್ಟಿದೆ. ೩ ರಿಂದ ೪ ಎಕರೆ ಭೂಮಿ ಹೊಂದಿರುವವರು ೦೫ ರಷ್ಟಿದ್ದಾರೆ. ಉಳಿದ ೧೬೦ ಜನರಿಗೆ ಯಾವುದೇ ವ್ಯವಸಾಯ ಭೂಮಿ ಇರುವುದಿಲ್ಲ. ಇವರೆಲ್ಲರೂ ಕೃಷಿ ಹಾಗೂ ಕೃಷಿಯೇತರ ಕಾರ್ಮಿಕ ರಾಗಿರುತ್ತಾರೆ.

ಜಿಲ್ಲಾವಾರು ಹಂಚಿಕೆ ವಿವರವನ್ನು ಸೂಕ್ಷ್ಮವಾಗಿ ಗಮನಿಸುವುದಾದರೆ ಚಿಕ್ಕಬಳ್ಳಾಪುರ ಜಿಲ್ಲೆಗೆ ಹೋಲಿಸಿದರೆ ಚಿತ್ರದುರ್ಗ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಹೆಚ್ಚು ಭೂಮಿಯನ್ನು ಹೊಂದಿರುವ ಅಂಶ ಎದ್ದು ಕಾಣುತ್ತದೆ. ಈ ಜನರು ಸಾಮಾನ್ಯವಾಗಿ ಉತ್ತರ ಭಾರತ

ದಿಂದ ವಲಸೆ ಬಂದಿದ್ದು, ಶಾಶ್ವತವಾಗಿ ನೆಲೆಯೂರಿರುತ್ತಾರೆ. ರಾಷ್ಟ್ರೀಯ ಹೆದ್ದಾರಿಯ ಸಂಪರ್ಕ ರಸ್ತೆ, ರೈಲು ಸಾರಿಗೆ ವ್ಯವಸ್ಥೆ ಮತ್ತು ವ್ಯಾಪಾರ ವಲಸೆ ನಿಮಿತ್ತ ಈ ಜಿಲ್ಲೆಯನ್ನು ಶಾಶ್ವತ ವಾಸ್ತವ್ಯಕ್ಕಾಗಿ ಆಯ್ಕೆ ಮಾಡಿಕೊಂಡಿರುತ್ತಾರೆ.

ಅಧ್ಯಯನ ಕ್ಷೇತ್ರದ ಬಂಜಾರರು ತಮ್ಮ ವ್ಯವಸಾಯ ಭೂಮಿಯಲ್ಲಿ ಅನೇಕ ಬೆಳೆಗಳನ್ನು ಅಂದರೆ ಭತ್ತ, ರಾಗಿ, ಜೋಳ, ದ್ವಿದಳ ಧಾನ್ಯಗಳು ವಾಣಿಜ್ಯ ಬೆಳೆಯಾದ ಹಿಪ್ಪುನೇರಳೆ (ರೇಷ್ಮೆ) ಬೆಳೆಯುತ್ತಿದ್ದಾರೆ. ಕೆಲವರು ಆಹಾರ ಬೆಳೆ ಮಾತ್ರ ಬೆಳೆದರೆ ಇನ್ನೂ ಕೆಲವರು ವಾಣಿಜ್ಯ ಬೆಳೆಗಳನ್ನು ಮತ್ತು ಕೆಲವರು ಈ ಎರಡೂ ಬೆಳೆಗಳನ್ನು ಬೆಳೆಯುವ ಮಟ್ಟಕ್ಕೆ ಹೊಂದಿಕೊಂಡಿದ್ದಾರೆ.

ದೊರೆತ ಮಾಹಿತಿ ಆಧಾರದ ಮೇಲೆ ಹೇಳುವುದಾದರೆ ೪೦ ಜನರು ವ್ಯವಸಾಯಗಾರರಲ್ಲಿ ೨೨ ಜನ ಆಹಾರ ಮತ್ತು ವಾಣಿಜ್ಯ ಬೆಳೆಗಳೆರಡನ್ನು ಅವರ ಅನುಕೂಲಕ್ಕೆ ಮತ್ತು ಆರ್ಥಿಕ ಸಬಲತೆಗೆ ತಕ್ಕಂತೆ ಬೆಳೆದರೆ ಇನ್ನುಳಿದ ೧೮ರಷ್ಟು ಜನರಲ್ಲಿ ಅರ್ಧ ಜನರು ಆಹಾರ ಧಾನ್ಯಗಳನ್ನು ಇನ್ನೂ ಅರ್ಧದಷ್ಟು ಜನರು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಿರುವುದು ಅಧ್ಯಯನದಲ್ಲಿ ತಿಳಿದುಬಂದಿದೆ. ಬಂಜಾರರು ಕಾಡು-ಮೇಡು, ಗಿರಿಕಕಂದರ, ಗುಡ್ಡಗಾಡು ಗಳಿಂದ ಬಂದವರಾಗಿದ್ದರೂ ಸಮಾಜದ ಇತರ ಸಮೂಹದ ಜೊತೆ ಬೆರೆತು ಅವರ ಮಾದರಿಯನ್ನು ಅನುಸರಿಸಿ ಸಾಮಾಜಿಕ ಪರಿವರ್ತನೆಗೆ ಅವಕಾಶ ಮಾಡಿಕೊಂಡು ಸಾರ್ಥಕತೆ ಜೀವನ ನಡೆಸುತ್ತಿರುವುದು ನಿಜಕ್ಕೂ ಮೆಚ್ಚುವಂತಹದ್ದು, ಹೊಸದುರ್ಗ ಜಿಲ್ಲೆ ತಾಲ್ಲೂಕಿನ ತಾಂಡದವರು ಆಹಾರ ಬೆಳೆಗಳನ್ನು ಹೆಚ್ಚಾಗಿ ಬೆಳೆಯುವವರಾಗಿದ್ದಾರೆ, ವಾಣಿಜ್ಯ ಬೆಳೆಗಳಲ್ಲಿ ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಬಂಜಾರ ಸಮುದಾಯಗಳಲ್ಲಿ ಹೆಚ್ಚು ಆಸಕ್ತಿ ವಹಿಸಿರುವುದು ಕಂಡುಬಂದಿದೆ. ಆಹಾರ ಮತ್ತು ವಾಣಿಜ್ಯ ಬೆಳೆಗಳೆರಡನ್ನು ಬೆಳೆಯುವುದರಲ್ಲಿ ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಕೃಷ್ಣಾಪುರ, ಅಲಘಟ್ಟ, ಸಿಂಗನಹಳ್ಳಿ ತಾಂಡಗಳ ಕುಟುಂಬಗಳಲ್ಲಿ ಕಾಣಬಹುದು, ಉಳಿದಂತೆ ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಳ್ಳಿ ತಾಲ್ಲೂಕಿನ ತಾಂಡಗಳಲ್ಲಿ ಯಾವುದೇ ಕೃಷಿ ಚಟುವಟಿಕೆಗಳು ತೃಪ್ತಿಕರವಾಗಿ ಕಂಡುಬಂದಿರುವುದಿಲ್ಲಾ.

**ಕೃಷಿಯೇತರ ಚಟುವಟಿಕೆಗಳು**

ಬಂಜಾರರು ಮೂಲತಃ ವ್ಯಾಪಾರಿಗಳಾಗಿದ್ದು, ಉತ್ತರ ಭಾರತದ ಭೂ ಭಾಗಗಳು ವಾಣಿಜ್ಯ-ವ್ಯಾಪಾರ ಕ್ಷೇತ್ರಗಳಲ್ಲಿ ಉಳಿದವುಗಳಿಗಿಂತ ಮುಂದುವರೆದಿದ್ದವು. ಕಾಲಾಂತರದಲ್ಲಿ ರಾಜಪ್ರಭುತ್ವ-ಬ್ರಿಟೀಷ್ ಆಳ್ವಿಕೆ ಪ್ರಭಾವಗಳಿಂದ ಮೂಲ ಕಸುಬಿನಲ್ಲಿ ಸಾಕಷ್ಟು ಬದಲಾವಣೆ

ಯನ್ನು ಕಂಡುಕೊಂಡು ಕಾಲಮಾನಕ್ಕನುಗುಣವಾಗಿ ಸ್ಥಳೀಯ ಜನರೊಂದಿಗೆ ಸ್ಥಳೀಯ ಕಸುಬುಗಳ ಜೊತೆ ರಾಜಿ ಮಾಡಿಕೊಂಡು ಆರ್ಥಿಕ ಜೀವನವನ್ನು ಮುಂದುವರೆಸುತ್ತಿದ್ದಾರೆ. ಕರ್ನಾಟಕದ ಬಂಜಾರರು ಕೃಷಿಯನ್ನೇ ತಮ್ಮ ಪ್ರಧಾನ ಕಸುಬನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ಮಳೆಯಾಧಾರಿತ ಒಣಬೇಸಾಯವೇ ಹೆಚ್ಚು, ನೀರಾವರಿ ಸೌಲಭ್ಯಗಳು ತುಂಬಾ ಕಡಿಮೆ ಪ್ರಮಾಣದಲ್ಲಿವೆ. ತಮ್ಮ ಸ್ವಂತ ಜಮೀನು ಇಲ್ಲದೆ ಬೇರೆಯವರ ಜಮೀನಿನಲ್ಲಿ ಕೃಷಿ ಮಾಡುತ್ತಾರೆ, ಹೆಚ್ಚು ಜನರ ಕೂಲಿಜೀವನವನ್ನೇ ಅವಲಂಬಿಸಿದ್ದಾರೆ. ಗರಿಷ್ಠ ಪ್ರಮಾಣದ ಬಂಜಾರ ಸಮುದಾಯಗಳು ಆರ್ಥಿಕ ದೃಷ್ಟಿಯಿಂದ ತುಂಬಾ ಹೀನಸ್ಥಿತಿಯಲ್ಲಿದ್ದಾರೆ.

ಬಂಜಾರ ಸಮುದಾಯದವರಲ್ಲಿ ಹೆಚ್ಚು ಜನ ಕುಶಲಕರ್ಮಿ ಚಟುವಟಿಕೆಗಳಿಂದ ಗುರ್ತಿಸಿಕೊಳ್ಳುತ್ತಿದ್ದಾರೆ. ಕೃಷಿ ನಂತರ ಬಿಡುವಿನ ಸಮಯ ಅಥವಾ ಕೃಷಿಗೆ ಪೂರಕವಾಗಿ ಇಲ್ಲವೆ ಕೃಷಿ ಕೈಕೊಟ್ಟಾಗ ಸಣ್ಣ ಪ್ರಮಾಣದ ವ್ಯಾಪಾರ, ಮರಗೆಲಸ, ಬಟ್ಟೆ ಹೊಲೆಯುವುದು, (ಕಸೂತಿ ಕೆಲಸ) ಬಟ್ಟೆಗೆ ಬಣ್ಣಹಾಕುವಿಕೆ, ಕಟ್ಟಡದ ಕೆಲಸ, ಮದುವೆ ಛತ್ರಗಳಲ್ಲಿ ಅಡಿಗೆ ಭಟ್ಟರಾಗಿ, ಊಟ ಬಡಿಸುವವರಾಗಿ ಮುಂತಾದ ಕೆಲಸಗಳಲ್ಲಿ ನಿರತರಾಗಿ ಹಣ ಸಂಪಾದಿಸುವ ಜಾಣ್ಮೆಯನ್ನು ಬೆಳೆಸಿಕೊಂಡಿರುತ್ತಾರೆ.

ಸಂಶೋಧನಾ ಕ್ಷೇತ್ರದಲ್ಲಿ ಕಂಡುಕೊಂಡಿರುವಂತೆ ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವವರು ೧೬೦ ರಷ್ಟಿದ್ದಾರೆ. ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಳ್ಳಿ ತಾಲ್ಲೂಕಿನ ಜನರು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದು ಕಂಡುಬಂದರೆ, ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಆಯ್ಕೆಗೊಳಪಟ್ಟಿರುವ ಬಹುತೇಕ ತಾಂಡಗಳಲ್ಲಿ ಕೃಷಿಯೇತರ ಚಟುವಟಿಕೆಗಳಾಗಿ ಆಧುನಿಕ ಕೃಷಿಪೂರಕ ಉಪಕರಣಗಳಾದ ಟ್ರ್ಯಾಕ್ಟರ್, ಜೆಸಿಬಿ, ಧಾನ್ಯ ಶುದ್ಧೀಕರಿಸುವ ಯಂತ್ರ, ಲಗೇಜು ಸಾಗಿಸುವ ಮೋಟಾರು ಬಂಡಿಗಳು, ಮತ್ತಿತರ ಚಟುವಟಿಕೆಗಳಲಿ ತೊಡಗಿಸಿಕೊಂಡಿರುವುದನ್ನು ಕಾಣಬಹುದು. ಈ ವೃತ್ತಿಯಲ್ಲಿ ನಿರತರಾಗಿರುವವರು ಒಟ್ಟು ೭೦ ಜನ ಕಂಡುಬರುತ್ತಾರೆ. ಮಧ್ಯಮ ವರ್ಗದಲ್ಲಿ ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ಬಂಜಾರ ತಾಂಡಗಳು ಕಡಿಮೆ ಕೃಷಿ ಮತ್ತು ಕಡಿಮೆ ವ್ಯಾಪಾರ ವೃತ್ತಿಯಯನ್ನನು ಮುಂದುವರೆಸಿರುವುದಾಗಿ ತಿಳಿದುಬಂದಿದೆ.

ಪ್ರಸ್ತುತ ಅಧ್ಯಯನದಲ್ಲಿ ಕಂಡುಬಂದಿರುವಂತೆ ಹೊಸದುರ್ಗ ತಾಲ್ಲೂಕು ಕೃಷಿ ಮತ್ತು ಕೃಷಿ ಪೂರಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವ ಬಂಜಾರ ತಾಂಡಗಳು

ಕಂಡು ಬಂದರೆ, ಕಡೂರು ಮತ್ತು ಬಾಗೇಪಲ್ಲಿ ತಾಲ್ಲೂಕುಗಳ ಬಂಜಾರ ತಾಂಡಗಳು ಹೆಚ್ಚು ವಲಸಿತ ಕುಟುಂಬಗಳಾಗಿದ್ದು, ಕೈಗಾರಿಕೆಗಳಲ್ಲಿ ಹೋಟೆಲ್ ಉಪಹಾರ ಗೃಹಗಳಲ್ಲಿ ಕಟ್ಟಡಗಳ ನಿರ್ಮಾಣಗಳಲ್ಲಿ ದಿನಗೂಲಿ ಕಾರ್ಮಿಕರಾಗಿ ದುಡಿಯುತ್ತಿರುವುದನ್ನು ಕಾಣಬಹುದಾಗಿದೆ.

ಬಂಜಾರು ಮೂಲತಃ ಅಲೆಮಾರಿಗಳಾಗಿದ್ದು, ಯಾವುದೇ ಕ್ಷೇತ್ರದಲ್ಲಿ ಸ್ಥಿರವಾಗಿ ನಿಲ್ಲದವರಾಗಿರುತ್ತಾರೆ. ಇವರು ತಮ್ಮ ಬಿಡುವಿನ ಸಮಯದಲ್ಲಿ ನಗರ ಪ್ರದೇಶಗಳಲ್ಲಿ ಸೊಳ್ಳೆಪರದೆ, ಕಂಬಳಿ ಅಲಂಕಾರಿಕ ವಸ್ತುಗಳು ಮುಂತಾದ ಆಕರ್ಷಕ ಸಾಮಗ್ರಿಗಳನ್ನು ತಯಾರಿಸಿ, ಮಾರುತ್ತಾರೆ. ಜನರೊಂದಿಗೆ ಹಣಕಾಸು ವ್ಯವಹಾರವನ್ನು ಬಹಳ ಜಾಣತನದಿಂದ ವ್ಯವಹರಿಸುತ್ತಾರೆ. ಇವರ ಪದಾರ್ಥಗಳು ದೇಶ ವಿದೇಶಗಳಿಗೂ ರಫ್ತಾಗುತ್ತಿರುತ್ತವೆ. ಇದಕ್ಕೆ ಅವರಬಳಿ ಇರುವ ಪಾಸ್‌ಪೋರ್ಟ್‌ಗಳೇ ಸಾಕ್ಷಿ ಉದಾಹರಣೆಗೆ ಲಂಬಾಣಿಗಳ ಕಸೂತಿ ಕಲೆಗೆ ರಾಷ್ಟ್ರಪ್ರಶಸ್ತಿ ಪಡೆದ ಶಾಂತಾಬಾಯಿರವರು ಲಂಡನ್ ಮತ್ತು ನ್ಯೂಯಾರ್ಕ್‌ಗೆ ಹೋಗಿ ತನ್ನ ಕೌಶಲ್ಯತೆಯನ್ನು ಪ್ರದರ್ಶಿಸಿ ಹಲವು ಪ್ರಶಸ್ತಿಗಳನ್ನು ಗಳಿಸಿರುವುದು ಕಂಡು ಬಂದಿರುತ್ತದೆ.

**೪.೨. ಮೂಲಕಸುಬು ಮತ್ತು ಇತರೆ ವೃತ್ತಿಗಳು:**

ಮಾನವಶಾಸ್ತ್ರೀಯ ಅಧ್ಯಯನಗಳಲ್ಲಿ ತಿಳಿಸಿರುವಂತ ಜಾನಪದ ಉದ್ಯೋಗ ಸ್ಥಿತಿ ಸಮುದಾಯಗಳಲ್ಲಿನ ಜನರ ಮೂಲಭೂತ ಅವಶ್ಯಕತೆಗಳ ಈಡೇರಿಕೆ ಮತ್ತು ಪಡೆಯುವಿಕೆಗಾಗಿ ವೃತ್ತಿ ಮತ್ತು ವರಮಾನಗಳು ಬಹುಮುಖ್ಯ ಪಾತ್ರವನ್ನು ನಿರ್ವಹಿಸುತ್ತವೆ. ಆರ್ಥಿಕ ಬೇಡಿಕೆಯು ನಾಗರೀಕತೆ ಮತ್ತು ಪರಂಪರೆಗಳನ್ನು ಸದಾ ಕ್ರಿಯಾಶೀಲವನ್ನಾಗಿಸುತ್ತದೆ. ತನ್ಮೂಲಕ ಒಂದು ಸಮುದಾಯ ಸ್ಥಳೀಯವಾಗಿ ಹೆಚ್ಚು ಚಟುವಟಿಕೆಗಳಿಂದ ಕೂಡಿರುತ್ತವೆ. ಬಂಜಾರದ ಸಮುದಾಯಗಳು ಕೂಡ ಇದರಿಂದ ಹೊರತಾಗಿಲ್ಲ. ವ್ಯಕ್ತಿಯೋರ್ವನ ಅವಶ್ಯಕತೆಗಳ ಈಡೇರಿಕೆಯಲ್ಲಿ, ಶಕ್ತಿ, ಸಾಮರ್ಥ್ಯ, ಕೌಶಲ್ಯ ಮತ್ತು ಸ್ವಾತಂತ್ರ್ಯ ನಿರ್ವಹಣೆಗಳು ಬಹುಮುಖ್ಯವಾಗಿರುತ್ತವೆ. ಈ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿರುವ ಒಟ್ಟು ೨೦೦ ಮಾಹಿತಿದಾರ ಉದ್ಯೋಗ ಸ್ಥಿತಿಯನ್ನು ಗಮನಿಸುವುದಾದರೆ ಪಟ್ಟಿಯಲ್ಲಿ ಸೂಚಿಸಿರುವಂತೆ ಮೂರು ತಾಲ್ಲೂಕುಗಳ ಒಟ್ಟು ೧೫ ತಾಂಡಗಳಲ್ಲಿನ ಜನರ ಉದ್ಯೋಗವು ಹೆಚ್ಚು ಶ್ರಮದಾಯಿಕವಾಗಿದ್ದು, ಗರಿಷ್ಠ ಪ್ರಮಾಣದ ಜನರು ೮೫ (ಶೇ.೪೨.೫೦)ರಷ್ಟು ಕಟ್ಟಡ ಕಾರ್ಮಿಕರಾಗಿರುತ್ತಾರೆ. ಅಂದರೆ ವಿವಿಧ ಕುಶಲತೆಯ ಜ್ಞಾನ, ಗಾರೆಕೆಲಸ, ಕಾರ್ಪೆಂಟರ್, ಪೇಯಿಂಟರ್, ಪ್ಲಂಬರ್ಸ್, ಕಬ್ಬಿಣದ

ಕೆಲಸ ಮತ್ತಿತರೆ ಕಟ್ಟಡ ನಿರ್ಮಾಣಕ್ಕೆ ಪೂರಕವಾದ ಚಟುವಟಿಕೆಗಳಲ್ಲಿ ತೊಡಗಿಸಿ ಕೊಂಡಿರುತ್ತಾರೆ. ನಂತರ ಕೃಷಿ ಕಾರ್ಮಿಕರು ೭೨ (ಶೇ.೩೬.೦೦)ರಷ್ಟಿದ್ದು, ಇತ್ತೀಚಿನ ದಶಕಗಳಲ್ಲಿ ಬಹುಪಾಲ ಕೃಷಿಚಟುವಟಿಕೆಗಳು ಸ್ಥಗಿತಗೊಳ್ಳುತ್ತಿವೆ. ಅದರಲ್ಲೂ ಚಿತ್ರದುರ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳು ಜಲಕ್ಷಾಮವನ್ನು ಹೊಂದಿದ್ದು, ಯಾವುದೇ ಜಲಸಂಪನ್ಮೂಲ ಮತ್ತು ಗರಿಷ್ಠ ನೀರಾವರಿ ಸೌಲಭ್ಯವನ್ನು ಹೊಂದಿರುವುದಿಲ್ಲ ಹಾಗೂ ಹೆಚ್ಚು ಬರಪೀಡಿತ ಪ್ರದೇಶಕ್ಕೆ ಸೇರಿದವಾಗಿದೆ. ಉಳಿದಂತೆ ಚಿಕ್ಕಮಗಳೂರು ಜಿಲ್ಲೆಯಲ್ಲಿ ಮಾತ್ರ ಕೃಷಿ ಚಟುವಟಿಕೆಗಳು ಸಾಕಷ್ಟು ಪ್ರಮಾಣದಲ್ಲಿದ್ದು ಇಲ್ಲಿನ ತಾಂಡದ ಜನರು ಹೆಚ್ಚು ಕೃಷಿ ಕಾರ್ಮಿಕರಾಗಿದ್ದಾರೆ. ನಂತರ ಬಯಲು ಪ್ರದೇಶದ ಜನರು ಅಕ್ಕಪಕ್ಕದ ಬೆಟ್ಟಗುಡ್ಡ ಮತ್ತು ಅಲ್ಪಸ್ವಲ್ಪದ ಕಾಡು ಗಳಲ್ಲಿ ಕಟ್ಟಿಗೆಗಳನ್ನು ಸಂಗ್ರಹಿಸಿ ಮಾರಾಟ ಮಾಡಿ ಜೀವನ ನಡೆಸುವವ ರಾಗಿದ್ದಾರೆ. ಇವರ ಸಂಖ್ಯೆ ೨೪ ಶೇ. ೧೨.೦೦ರಷ್ಟನ್ನು ಕಾಣಬಹುದಾಗಿದೆ. ಆದರೆ ಸರ್ಕಾರಿ ಉದ್ಯೋಗಿ ಗಳು/ಸೇವೆಯಲ್ಲಿರುವವರ ಸಂಖ್ಯೆ ಕೇವಲ ೧೯(ಶೇ.೯.೫೦)ಕ್ಕೆ ಸೀಮಿತಗೊಂಡಿದ್ದು ಅದರಲ್ಲೂ, ಇತ್ತೀಚಿನ ಹೊಸ ತಲೆಮಾರಿನವರು ಹೆಚ್ಚು ಶಿಕ್ಷಿತರಾದಂತೆ ಅವರಲ್ಲಿ ವಿದ್ಯೆ, ಉದ್ಯೋಗದ ಆಸಕ್ತಿ ಹೆಚ್ಚಾಗುತ್ತಿದೆ (ಕೋಷ್ಟಕ IX ರಂತೆ).

**ಕೋಷ್ಟಕ – IX ಉದ್ಯೋಗ ಸ್ಥಿತಿ**

| ಕ್ರ.ಸಂ. | ಉದ್ಯೋಗ | ಸಂಖ್ಯೆ | ಶೇಕಡ |
|---|---|---|---|
| ೧ | ಕೃಷಿ ಕಾರ್ಮಿಕರು | ೭೨ | ೩೬.೦೦ |
| ೨ | ಕಟ್ಟಡ ಕಾರ್ಮಿಕರು | ೮೫ | ೪೨.೫೦ |
| ೩ | ಕಟ್ಟಿಗೆ ವ್ಯಾಪಾರಿಗಳು | ೨೪ | ೧೨.೦೦ |
| ೪ | ಸರ್ಕಾರಿ ಸೇವೆಯಲ್ಲಿರುವವರು | ೧೯ | ೦೯.೫೦ |
| | ಒಟ್ಟು | ೨೦೦ | ೧೦೦.೦೦ |

**ವಾರ್ಷಿಕ ವರಮಾನ**

ಅಧ್ಯಯನಕ್ಕೆ ಒಳಪಡಿಸಲಾದ ಒಟ್ಟು ಮಾಹಿತಿದಾರ ವಾರ್ಷಿಕ ವರಮಾನವನ್ನು ಪಟ್ಟಿಯಲ್ಲಿರುವಂತೆ ಗಮನಿಸಿದರೆ, ಗರಿಷ್ಠ ಪ್ರಮಾಣದ ಆದಾಯ ಅಂದರೆ ೧೫೦೦೧ರಿಂದ ೨೦,೦೦೦ ರೂಪಾಯಿಗಳ ವರಮಾನ ಹೊಂದಿರುವವರ ಸಂಖ್ಯೆ ೯೫ ಶೇ. ೪೭.೫೦. ಇವರಲ್ಲಿ ಕಟ್ಟಡ ಕಾರ್ಮಿಕರು ಹೆಚ್ಚಾಗಿರುತ್ತಾರೆ. ಇತ್ತೀಚೆಗೆ ನಗರ, ಪಟ್ಟಣಗಳಲ್ಲಿ, ವಸತಿ,

ವಾಣಿಜ್ಯ ಸಂಕೀರ್ಣ ಕಟ್ಟಡಗಳು ಹೆಚ್ಚು ನಿರ್ಮಾಣಗೊಳ್ಳುತ್ತಿರುವ ಹಿನ್ನಲೆಯಲ್ಲಿ ಕಟ್ಟಡ ಕಾರ್ಮಿಕರ ಬೇಡಿಕೆ ಹೆಚ್ಚಾಗುತ್ತಿದೆ. ಗರಿಷ್ಠ ಪ್ರಮಾಣದ ಬಂಜಾರ ಸಮುದಾಯದ ಪುರುಷ–ಸ್ತ್ರೀಯರು ಪಕ್ಕದ ಪೇಟೆಗಳತ್ತ ವಲಸೆಯ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿದ್ದಾರೆ. ನಂತರ ವಾರ್ಷಿಕ ೧೦,೦೦೦–೧೫,೦೦೦ ವರಮಾನದವರು ೬೨ (ಶೇಕಡ ೩೧.೦೦) ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನಲ್ಲಿ ಕೃಷಿ ಚಟುವಟಿಕೆಗಳು ನಿರಂತರವಾಗಿದ್ದರೆ, ಬಯಲು ಪ್ರದೇಶಗಳಾದ ಚಿತ್ರದುರ್ಗ, ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಅಲ್ಪ ಪ್ರಮಾಣದ ನೀರಾವರಿ ಮತ್ತು ಜಲಸಂಪನ್ಮೂಲದ ಹಿನ್ನಲೆಯಲ್ಲಿ ತಾಂಡದ ಜನರು ಕೃಷಿ ಚಟುವಟಿಕೆಗಳು ತೊಡಗಿಸಿಕೊಂಡಿರುತ್ತಾರೆ. ಉಳಿದಂತೆ ಕಟ್ಟಿಗೆ ವ್ಯಾಪಾರಿಗಳು ವಾರ್ಷಿಕವಾಗಿ ೨೦,೦೦೧ರಿಂದ ೨,೫೦೦೦ ರೂಪಾಯಿಗಳ ವರಮಾನ ಹೊಂದಿದ್ದಾರೆ. ಸೀಮಿತ ಸಂಖ್ಯೆಯ ಜನರು ೨೦ (ಶೇ.೧೦.೦೦) ಸರ್ಕಾರಿ ಸೇವೆಯಲ್ಲಿರುವವರು ವಾರ್ಷಿಕ ೩೦,೦೦೦ ರೂಪಾಯಿಗಳು ಹೆಚ್ಚು ವರಮಾನವನ್ನು ಹೊಂದಿದ್ದಾರೆ.

**ಕೋಷ್ಟಕ – X ವಾರ್ಷಿಕ ಮಾಹಿತಿದಾರರ ವರಮಾನ**

| ಕ್ರ.ಸಂ. | ವಯಸ್ಸಿನ ಅಂತರ | ಸಂಖ್ಯೆ | ಶೇಕಡ |
|---|---|---|---|
| ೧ | ೧೦,೦೦೦–೧೫,೦೦೦ | ೬೨ | ೩೧.೦೦ |
| ೨ | ೧೫೦೦೧–೨೦೦೦೦ | ೯೫ | ೪೭.೫೦ |
| ೩ | ೨೦೦೦೧–೨೫೦೦೦ | ೨೩ | ೧೧.೫೦ |
| ೪ | ೩೦,೦೦೦ ಮೇಲ್ಪಟ್ಟು | ೨೦ | ೧೦.೦೦ |
| ಒಟ್ಟು | | ೨೦೦ | ೧೦೦.೦೦ |

**ಸಾಮಾಜಿಕ ವ್ಯವಸ್ಥೆ**

ಲಂಬಾಣಿಗಳು ಶತಮಾನಗಳಿಂದ ಒಂದು ಬಗೆಯ ಸಂಚಾರಿ ಜೀವನವನ್ನು ಕಳೆಯುತ್ತ ಬಂದಿದ್ದರೂ ಅವರಲ್ಲಿ ಸಾಮಾಜಿಕ ಆರ್ಥಿಕ ಹಾಗೂ ಪಂಚಾಯತ ಸಂಘಟನೆಯ ಬಹುದೊಡ್ಡ ಶಕ್ತಿಯು ಅಡಕವಾಗಿದೆ. ಸಾಮಾನ್ಯವಾಗಿ ಲಂಬಾಣಿಗಳು ಊರುಗಳಿಂದ ದೂರದಲ್ಲಿ, ಕಾಡುಮೇಡುಗಳಲ್ಲಿ ತಮ್ಮದೇ ಆದ ಗುಂಪುಗಳಲ್ಲಿ ವಾಸಿಸುತ್ತಾರೆ. ಈ ಗುಂಪುಗಳಿಗೆ 'ತಾಂಡ' ಎಂದು ಹೆಸರು. ಗ್ರಾಮ ಸಮುದಾಯಗಳಿಂದ ಸ್ವಲ್ಪ ದೂರದಲ್ಲಿ ಇದ್ದು ತಮ್ಮದೇ ಆದ ತಾಂಡಾವನ್ನು ಕಟ್ಟಿಕೊಳ್ಳುವಲ್ಲಿ ಅವರಿಗೆ ವಿಶೇಷವಾದ ಆಸಕ್ತಿ

ಇರುವುದು ಕಂಡುಬರುತ್ತದೆ. ಗ್ರಾಮ ಸಮುದಾಯದ ಹಂದಿ, ಕೋಳಿ, ಕುರಿಗಳು ತಾಂಡಾದಲ್ಲಿ ಪ್ರವೇಶಿಸದಂತೆ ಆದಷ್ಟು ದೂರದಲ್ಲಿ ತಾಂಡಾಗಳನ್ನು ಕಟ್ಟಿಕೊಂಡಿರುತ್ತಾರೆ. ತಮ್ಮ ದನಕರುಗಳಿಗೆ ಗ್ರಾಮ ಸಮುದಾಯದಿಂದ ಹುಲ್ಲು, ನೀರಿನ ಸಮಸ್ಯೆ ಉಂಟಾಗ ದಿರಲೆಂದೂ, ತಮ್ಮ ಸ್ವಚ್ಛಂದ ಬದುಕಿಗೆ ಗ್ರಾಮ ಸಮುದಾಯದ ನಿರ್ಬಂಧನೆಗಳು, ಕಟ್ಟುಕಟ್ಟಳೆಗಳು ಅನ್ವಯವಾಗದಂತೆ ಸಾಮಾನ್ಯವಾಗಿ ತಾಂಡಾಗಳನ್ನು ಪ್ರತ್ಯೇಕವಾಗಿ ದೂರದಲ್ಲಿ ಕಟ್ಟೀಕೊಳ್ಳುತ್ತಾರೆ. ಹೊಟ್ಟೆಪಾಡಿಗಾಗಿ ಪಟ್ಟಣಗಳಿಗೆ ವಲಸೆ ಹೋಗುವ ಲಂಬಾಣಿಗರು ಅಲ್ಲಿಯೂ ತಮ್ಮದೇ ಆದ ಜನಸಮುದಾಯದಲ್ಲಿ ಬದುಕುತ್ತಿರುವುದನ್ನು ಕಾಣುತ್ತೇವೆ. ಕೆಲವೆಡೆ ರಸ್ತೆಯ ಒಂದು ಬದಿಗೆ ಊರು, ಇನ್ನೊಂದು ಬದಿಗೆ ತಾಂಡೆಗಳಿರುವುದನ್ನು ಗಮನಿಸಬಹುದು. ಇಂಥ ಕಡೆಗಳಲ್ಲಿ ಲಂಬಾಣಿಗರು ನಾಗರಿಕತೆಯಿಂದ ತುಂಬಾ ಪ್ರಭಾವಿತ ರಾಗಿರುವುದು ಗೋಚರಿಸುತ್ತದೆ.

ಉತ್ತರ ಭಾರತದಿಂದ ದಕ್ಷಿಣಕ್ಕೆ ವ್ಯಾಪಾರಕ್ಕಾಗಿ ವಲಸೆ ಬಂದಿರುವ ಲಂಬಾಣಿಗರು, ಕಾಲಾಂತರದಲ್ಲಿ ಅಲ್ಲಲ್ಲಿ ತಂಡೋಪತಂಡವಾಗಿ ತಮ್ಮದೇ ಆದ ಜನಸಮುದಾಯದ ತಾಂಡಗಳನ್ನು ನಿರ್ಮಿಸಿಕೊಂಡು ಸಾವಿರಾರು ವರ್ಷಗಳಿಂದ ತಮ್ಮ ಸಂಸ್ಕೃತಿ, ಸಂಪ್ರದಾಯ ವನ್ನು ಉಳಿಸಿಕೊಂಡು ಬದುಕಿದ್ದಾರೆ. ಈಗೀಗ ನವನಾಗರಿಕತೆಯ ಪ್ರಭಾವ ಅವರ ಮೇಲೆ ಬೀರಿದರೂ ಅವರಲ್ಲಿ ಅಷ್ಟಾಗಿ ಬದಲಾವಣೆ ಕಂಡು ಬರುವುದಿಲ್ಲ. ಒಂದೊಂದು ತಾಂಡದಲ್ಲಿ ಕೇವಲ ೮–೯ ಕುಟುಂಬಗಳಿರುವ ಅತಿ ಚಿಕ್ಕ ಜನಸಮುದಾಯವಿದ್ದರೆ; ೭–೮ ನೂರು ಕುಟೂಂಬಗಳಿರುವ ಅತಿದೊಡ್ಡ ಜನ ಸಮುದಾಯಗಳೂ ಇವೆ ತಾಂಡಾದ ಪ್ರಮಾಣ ಅತಿದೊಡ್ಡದಾಗಿದ್ದಲ್ಲಿ ಒಳಜಗಳಗಳು ಉದ್ಭವಿಸಿ ಆ ತಾಂಡವು ಒಡೆದು ಎರಡು ಮೂರು ತಾಂಡಗಳಾಗಿರುವ ನಿದರ್ಶನಗಳಿವೆ. ಇಂತಹ ತಾಂಡವು ಸಣ್ಣ ತಾಂಡ, ದೊಡ್ಡ ತಾಂಡ, ಹಿಂದಿನ ತಾಂಡ, ಮುಂದಿನ ತಾಂಡ ಎಂದೂ, ಇಲ್ಲವೆ ಅಲ್ಲಿಯ ಪ್ರಮುಖ ವ್ಯಕ್ತಿಗಳ ಹೆಸರಿನಿಂದಲೂ ಕರೆಯಲ್ಪಡುವುದು ಕಂಡುಬರುತ್ತದೆ.

ಲಂಬಾಣಿಗರು ಸಾಮಾನ್ಯವಾಗಿ ತಮ್ಮ ತಾಂಡಾಗಳನ್ನು ಕಾಡುಪ್ರಾಣಿಗಳಿಂದ ರಕ್ಷಿಸಿ ಕೊಳ್ಳುವುದಕ್ಕಾಗಿ ಸುತ್ತಲ್ಲೂ ದೊಡ್ಡಿ(ಹಟ್ಟಿ)ಗಳನ್ನು ಹಾಕಿಕೊಂಡಿರುತ್ತಾರೆ. ಸುಲಭವಾಗಿ ಸಿಗುವ ಮುಳ್ಳುಬೇಲಿಗಳನ್ನು ಇದಕ್ಕಾಗಿ ಉಪಯೋಗಿಸುತ್ತಾರೆ. ತಾಂಡಾದಲ್ಲಿ ಸಾಮಾನ್ಯವಾಗಿ ಗುಡಿಸಲುಗಳೇ ಹೆಚ್ಚು. ಇತ್ತೀಚೆಗೆ ಅವರ ತಾಂಡಾಗಳಲ್ಲಿ ಮಾಳಿಗೆ ಮನೆಗಳು, ಹಂಚಿನ ಮನೆಗಳೂ, ತಾರಸಿ ಮನೆಗಳೂ ಮತ್ತು ಆರ್.ಸಿ.ಸಿ ಕಟ್ಟಡಗಳೂ ಕಾಣಿಸಿಕೊಳ್ಳುತ್ತಿವೆ. ಇದು ಅವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿದೆ.

ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಲಂಬಾಣಿಗರು ತುಂಬಾ ಅಸ್ತವ್ಯಸ್ತವಾದ ಬದುಕನ್ನು ಸಾಗಿಸುತ್ತಾರೆ. ಅವರ ಜೀವನ ವಿಧಾನ, ಬದುಕುವ ರೀತಿ–ನೀತಿಗಳು ತುಂಬಾ ವಿಚಿತ್ರವಾಗಿವೆ. ಆಹಾರ ಪದಾರ್ಥಗಳನ್ನು ಮಣ್ಣಿನ ಮಡಕೆಗಳಲ್ಲಿ ತುಂಬಿ ಒಂದರಮೇಲೊಂದ ರಂತೆ ಸಾಲುಸಾಲಾಗಿ ಇಟ್ಟಿರುತ್ತಾರೆ. ಇಲ್ಲವೆ ನೇತು ಹಾಕಿರುವ ನೆಲುವು(ಸಿಕ್ಕೆ)ಗಳಲ್ಲಿ ಇಡುತ್ತಾರೆ. ಮಲಗಲು ಚಾಪೆ, ಚೀಲ ಇತ್ಯಾದಿಗಳನ್ನು ಹಾಸಿಗೆಗಳನ್ನಾಗಿ ಬಳಸುತ್ತಾರೆ. ಹೊದೆಯಲು ಸಾಮಾನ್ಯವಾಗಿ ಹೆಂಗಸರು ತಮ್ಮ ಓಡಣಿ(ಮುಸುಕು)ಯನ್ನು, ಗಂಡಸರು ತಮ್ಮ ಧೋತಿಗಳನ್ನು ಬಳಸುತ್ತಾರೆ. ಕೆಲವರು ಕವದೆ, ಕಂಬಳಿ, ಮದುವೆ ಶಾಲು ಮತ್ತು ಚಾದರುಗಳನ್ನು ಉಪಯೋಗಿಸುತ್ತಾರೆ. ಚಿಕ್ಕದಾಗಿ ಇರುವ ಒಂದೇ ಮನೆ ಇಲ್ಲವೆ ಗುಡಿಸಲಿ ನಲ್ಲಿ ಕುಟುಂಬದ ಸದಸ್ಯರೆಲ್ಲ ವಾಸಮಾಡುತ್ತಾರೆ, ಸ್ನಾನಕ್ಕಾಗಿ ಮನೆಯ ಮುಂದೆ ಒಂದಿಷ್ಟು ಆಸರೆ ಮಾಡಿಕೊಂಡಿರುತ್ತಾರೆ. ದನ–ಕರುಗಳನ್ನು ಮನೆಯ ಅಂಗಳದಲ್ಲಿ ಕಟ್ಟುತಾರೆ. ಕುರಿ, ಕೋಳಿಗಳನ್ನು ತಾವಿರುವ ಮನೆಯಲ್ಲಿಯೇ ಕೂಡಿಹಾಕುತ್ತಾರೆ. ಇಲ್ಲವೆ ಅವುಗಳಿಗೆ ಮನೆಯ ಹೊರಗೆ ಪ್ರತ್ಯೇಕವಾಗಿ ಗೂಡು ಕಟ್ಟಿರುತ್ತಾರೆ, ಹಿಟ್ಟು–ಬಟ್ಟೆ ಇಡುವುದಕ್ಕಾಗಿ ಮರದ ಪೆಟ್ಟಿಗೆ(ಸಂದುಕ)ಯನ್ನು ಉಪಯೋಗಿಸುತ್ತಾರೆ.

ತಾಂಡಾದ ಮಧ್ಯದಲ್ಲಿ ಇಲ್ಲವೆ ಹೊರಗೆ ದೇವಸ್ಥಾನಗಳನ್ನು ಕಟ್ಟಿಕೊಳ್ಳುತ್ತಾರೆ. ಈ ದೇವಸ್ಥಾನಗಳು ಆಕಾರದಲ್ಲಿ ಹಿಂದೂ ದೇವಸ್ಥಾನಗಳನ್ನೇ ಹೋಲುತ್ತವೆ. ದೇವಸ್ಥಾನಗಳಿಗೆ 'ಮಟ್', 'ದೇವಳ್', 'ಗುಡಿ' ಮುಂತಾದ ಹೆಸರುಗಳಿಂದ ಕರೆಯುತ್ತಾರೆ. ಈ ದೇವಸ್ಥಾನಗಳಿಗೆ ಒಬ್ಬೊಬ್ಬ ಪೂಜಾರಿ(ಭಗತ್) ಇರುತ್ತಾರೆ. ಈ ಪೂಜಾರಿಯು ದೇವರ ಮೂರ್ತಿ ಹಾಗೂ ದೇವರ ಆಭರಣಗಳನ್ನು ಕೆಂಪು ಇಲ್ಲವೆ ಬಿಳಿವಸ್ತ್ರದಲ್ಲಿ ಕಟ್ಟಿ ತನ್ನ ಮನೆಯ ಪೆಟ್ಟಿಗೆ ಯಲ್ಲಿ ಸುರಕ್ಷಿತವಾಗಿ ಕಾಯ್ದಿಡುತ್ತಾನೆ. ಲಂಬಾಣಿಗರು ಸಾಮಾನ್ಯವಾಗಿ ವರ್ಷಕ್ಕೊಮ್ಮೆಯೇ ದೇವರನ್ನು ಪೂಜಿಸುತ್ತಾರೆ. ಅಂಥ ಸಂದರ್ಭಗಳಲ್ಲಿ ಮಾತ್ರ ದೇವರ ಮೂರ್ತಿಯನ್ನು ಹೊರತೆಗೆದು ಅಕ್ಕಸಾಲಿಗನಿಂದ ಬೆಳಗಿಸಿ, ದೇವಸ್ಥಾನದಲ್ಲಿಟ್ಟು ಪೂಜಿಸುತ್ತಾರೆ. ಅವರ ಪ್ರತಿಯೊಂದು ದೇವಸ್ಥಾನದ ಎದುರು ಎರಡು ನಿಶಾನೆಗಳಿರುತ್ತವೆ. ಒಂದು ಬಿಳಿ; ಇನ್ನೊಂದು ಕೆಂಪು. ಇವೆರಡೂ ತಮ್ಮ ಸಾಂಸ್ಕೃತಿಕ ನಾಯಕ ಸೇವಾಲಾಲನ ಸಂಕೇತಗಳೆಂದು ಹೇಳುತ್ತಾರೆ. ಈ ದೇವಸ್ಥಾನಗಳ ಎದುರಿನಲ್ಲಿ ಸಾಮಾನ್ಯವಾಗಿ ಬೇವಿನ ಮರಗಳು ಇರುವುದು ವಿಶೇಷ. ದೇವಸ್ಥಾನಗಳಲ್ಲಿ ದೇವರ ಗದ್ದುಗೆ ಒಂದು ಕಡೆಗೆ ಇದ್ದರೆ, ಇನ್ನೊಂದು ಕಡೆಗೆ ಹಿಂದೆ ಇದ್ದ ಪೂಜಾರಿ ಇಲ್ಲವೆ ಪವಾಡ ಪುರುಷರ ಗದ್ದುಗೆ ಇರುತ್ತದೆ. ಲಂಬಾಣಿಗರು ದೇವಸ್ಥಾನಗಳ ಎದುರಿನಲ್ಲಿ ಬಲಿಯನ್ನು ಅರ್ಪಿಸಿದರೂ ದೇವರುಗಳಿಗೆ ಮಾಂಸದ ನೈವೇದ್ಯವನ್ನು ಕೊಡುವುದಿಲ್ಲ.

ತಾಂಡಾದ ಸಾಮಾಜಿಕ ಸಂಘಟನೆಯಲ್ಲಿ ಪೂಜಾರಿಯ (ಭಗತ್) ಪಾತ್ರ ಹಿರಿದಾಗಿರುತ್ತದೆ. ತಾಂಡಾದಲ್ಲಿ ನಡೆಯುವ ಪ್ರತಿಯೊಂದು ಪೂಜೆ-ಪುನಸ್ಕಾರ, ಮದುವೆ-ಮುಂಜಿವೆ ಹಾಗೂ ಇನ್ನುಳಿದ ಯಾವುದೇ ಮಹತ್ವದ ಕಾರ್ಯಗಳಲ್ಲಿ ಪೂಜಾರಿಗೆ ಮಹತ್ತರವಾದ ಸ್ಥಾನವಿರುತ್ತದೆ. ಏಕೆಂದರೆ ಅವನು ಆ ಜನಸಮೂಹದ 'ಗುರು'ವಾಗಿದ್ದಾನೆ. ಹೀಗಾಗಿ ಲಂಬಾಣಿಗರು ಆಯಾ ಸಂದರ್ಭ-ಸನ್ನಿವೇಶಗಳಲ್ಲಿ ಈ ಪೂಜಾರಿಯ ಸಲಹೆ-ಸೂಚನೆಗಳನ್ನು, ಉಪದೇಶ ಗಳನ್ನು ಪಡೆದು ಮುಂದಿನ ಕೆಲಸಕ್ಕಾಗಿ ತೊಡಗುತ್ತಾರೆ. ಈ ಪೂಜಾರಿಯು ಕೆಲವು ವಿಶೇಷ ಸಂದರ್ಭಗಳಲ್ಲಿ ದೇವರನ್ನು ಮೈಯಲ್ಲಿ ಬರಿಸಿಕೊಂಡು ಈ ಜನರ ಕಷ್ಟ-ಸಮಸ್ಯೆ ಗಳಿಗೆ ಪರಿಹಾರವನ್ನು ಸೂಚಿಸುತ್ತಾನೆ. ಜನರು ಪೂಜಾರಿಯ ಹೇಳಿದ ಮಾರ್ಗದಲ್ಲಿ ನಡೆದು ಪರಿಹಾರ ಕಾಣಲು ಮುಂದಾಗುತ್ತಾರೆ.

ಸಾಮಾಜಿಕ ಸಂಘಟನೆಯಲ್ಲಿ ತಾಂಡಾದ ನಾಯಕನ ಪಾತ್ರವೂ ಕೂಡ ಅಸಾಧಾರಣ ವಾಗಿದೆ. ಪ್ರತಿಯೊಂದು ಕಟ್ಟುಕಟ್ಟಳೆಯನ್ನು ಈ ಜನರು ಅಕ್ಷರಶಃ ಪಾಲಿಸಿಕೊಂಡು ಹೋಗುತ್ತಾರೆ. ಒಂದು ರೀತಿಯಲ್ಲಿ ಸಾಮಾಜಿಕ ಉತ್ತರದಾಯಿತ್ವದ ಭಾವನೆ ಈ ಜನರಲ್ಲಿ ನಿಚ್ಚಳವಾಗಿ ಕಾಣಬಹುದು. ತಾಂಡಾದ ಯಾವುದೇ ಒಬ್ಬ ವ್ಯಕ್ತಿಯು ಸುಖ-ದುಃಖಗಳಲ್ಲಿ ಕಾರ್ಯಕಲಾಪಗಳಲ್ಲಿ, ಮದುವೆ-ಮುಂಜಿವೆಗಳಲ್ಲಿ ಹಾಗೂ ಸಂಸ್ಕಾರಾದಿಗಳಲ್ಲಿ ಸಮುದಾಯದ ಪ್ರತಿಯೊಬ್ಬ ವ್ಯಕ್ತಿ ಪಾಲ್ಗೊಳ್ಳುವಲ್ಲಿ ಅವರ ಸಾಮಾಜಿಕ ಸಂಘಟನಾ ಮನೋಭಾವನೆ ಎದ್ದುಕಾಣಿಸುತ್ತದೆ.

ಅಧ್ಯಯನದ ವ್ಯಾಪ್ತಿಯನ್ನು ಕೇಂದ್ರೀಕರಿಸಿಕೊಂಡು ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳ ಪ್ರದೇಶಗಳಲ್ಲಿ ಕಂಡುಬರುವ ಬಂಜಾರ ಸಮುದಾಯ ದವರಲ್ಲಿನ ಸಾಕ್ಷರತೆ, ಲಿಂಗಸಂಯೋಜನೆ ವಯಸ್ಸು, ವೈವಾಹಿಕ ಸ್ಥಾನಮಾನ, ಮಾತೃಭಾಷೆ, ವೃತ್ತಿಗಳು, ವರಮಾನ ವಾಸ್ತವ್ಯ, ಭೂಮಾಲಿಕತ್ವ ಒಳಾಡಳಿತ ಮತ್ತಿತರ ಅಂಶಗಳನ್ನು ಕೇಂದ್ರೀಕರಿಸಿ ಕ್ಷೇತ್ರಾಧ್ಯಯನದಲ್ಲಿ ಕಂಡು ಬಂದಿರುವ ವಿಷಯಗಳನ್ನು ವಿಶ್ಲೇಷಣೆಗೆ ಒಳಪಡಿಸ ಲಾಗಿರುವ ವಿವರಣೆ ಈ ಕೆಳಕಂಡಂತಿದೆ.

## ಕರ್ನಾಟಕ ತಾಂಡಾ ಅಭಿವೃಧಿ ನಿಗಮ ಮಂಡಳಿ ತಾಂಡಾಗಳ ಪಟ್ಟಿ

| ಕ್ರ.ಸಂ. | ಜಿಲ್ಲಾವಾರು | ತಾಲ್ಲೂಕುಗಳು | ತಾಂಡಗಳ ಸಂಖ್ಯಾ ಪ್ರಮಾಣ |
|---|---|---|---|
| ೧. | ರಾಮನಗರ | ಕನಕಪುರ | ೯೦ |
| | | ರಾಮನಗರ | ೧೩ |
| | | ಮಾಗಡಿ | ೧೪ |
| | | **ಒಟ್ಟು** | ೧೧೭ |
| ೨. | ಬೆಂಗಳೂರು | ಚಿಕ್ಕಬಳ್ಳಾಪುರ | ೧೫ |
| | | ನೆಲಮಂಗಳ | ೪ |
| | | **ಒಟ್ಟು** | ೧೯ |
| ೩. | ಬೆಂಗಳೂರು ನಗರ | ಅನೇಕಲ್ | ೧೩ |
| | | ಬೆಂಗಳೂರು | ೫ |
| | | **ಒಟ್ಟು** | ೧೮ |
| ೪. | ಬೆಳಗಾಂ | ರಾಮದುರ್ಗ | ೧೫ |
| | | ಸವದತ್ತಿ | ೧೧ |
| | | **ಒಟ್ಟು** | ೨೬ |
| ೫. | ಬಾಗಲಕೋಟೆ | ಬಾಗಲಕೋಟೆ | ೧೭ |
| | | ಬಾದಾಮಿ | ೧೫ |
| | | ಬೀಳಗಿ | ೧೧ |
| | | ಮುದೋಳ್ | ೮ |
| | | ಹುನದುಂಡ | ೧೨ |
| | | ಜಮಕಂಡಿ | ೨ |
| | | **ಒಟ್ಟು** | ೬೫ |
| ೬ | ತುಮಕೂರು | ಚಿಕ್ಕನಾಯಕನಹಳ್ಳಿ | ೪೦ |
| | | ತಿಪಟೂರು | ೮ |
| | | ಗುಬ್ಬಿ | ೨ |

| | | | |
|---|---|---|---|
| | | ತುಮಕೂರು | ೬ |
| | | ಪಾವಗಡ | ೨೫ |
| | | ಮದುಗಿರಿ | ೧೧ |
| | | ಕುಣಿಗಲ್ | ೮ |
| | | ಕೊರಟಗೆರೆ | ೨೨ |
| | | ಶಿರ | ೨೧ |
| | | ಒಟ್ಟು | ೧೪೩ |
| ೭ | ರಾಯಚೂರು | ದೇವದುರ್ಗ | ೪೪ |
| | | ಲಿಂಗಸಗೂರು | ೭೭ |
| | | ಮಾನ್ವಿ | ೧೧ |
| | | ರಾಯಚೂರು | ೪ |
| | | ಸಿಂಧನೂರು | ೨೩ |
| | | ಒಟ್ಟು | ೧೫೯ |
| ೮. | ಕೊಪ್ಪಳ | ಕೊಪ್ಪಳ | ೨೦ |
| | | ಕುಷ್ಟಗಿ | ೧೯ |
| | | ಗಂಗಾವತಿ | ೪೬ |
| | | ಯಲಬುರ್ಗ | ೨೭ |
| | | ಒಟ್ಟು | ೧೧೨ |
| ೯. | ಹಾಸನ | ಹಾಸನ | ೩ |
| | | ಬೇಲೂರು | ೧ |
| | | ಅರಸೀಕೆರೆ | ೬೪ |
| | | ಒಟ್ಟು | ೬೮ |
| ೧೦. | ಚಿಕ್ಕಬಳ್ಳಾಪುರ | ಬಾಗೇಪಲ್ಲಿ | ೨೭ |
| | | ಗೌರಿಬಿದನೂರು | ೧೯ |
| | | ಒಟ್ಟು | ೪೬ |

| | | | |
|---|---|---|---|
| ೧೧. | ಮಂಡ್ಯ | ಮಂಡ್ಯ | ೧೪ |
| | | ಮಳವಳ್ಳಿ | ೧೧ |
| | | ಪಾಂಡವಪುರ | ೧ |
| | | ಮದ್ದೂರು | ೪ |
| | | **ಒಟ್ಟು** | ೩೦ |
| ೧೨. | ಚಾಮರಾಜನಗರ | ಚಾಮರಾಜನಗರ | ೬ |
| | | ಕೊಳ್ಳೆಗಾಲ | ೨೪ |
| | | **ಒಟ್ಟು** | ೩೦ |
| ೧೩. | ಮೈಸೂರು | ಹೆಚ್.ಡಿ.ಕೋಟೆ | ೧೨ |
| ೧೪. | ಉತ್ತರ ಕರ್ನಾಟಕ | ಹಳಿಯಾಲ | ೨ |
| | | ಮುದಗೋಡು | ೭ |
| | | **ಒಟ್ಟು** | ೯ |
| ೧೫. | ಚಿಕ್ಕಮಂಗಳೂರು | ತರೀಕೆರೆ | ೪೫ |
| | | ಕಡೂರು | ೮೧ |
| | | ಚಿಕ್ಕಮಂಗಳೂರು | ೧ |
| | | **ಒಟ್ಟು** | ೧೨೭ |
| ೧೬. | ಬಳ್ಳಾರಿ | ಕುಷ್ಟಗಿ | ೧೩ |
| | | ಹೊಸಪೇಟೆ | ೧೨ |
| | | ಹಗರಿಬೊಮ್ಮನಹಳ್ಳಿ | ೧೭ |
| | | ಹೂವಿನಹಡಗಲಿ | ೩೩ |
| | | ಬಳ್ಳಾರಿ | ೩ |
| | | ಸಂಡೂರು | ೪ |
| | | ಸಿರಗುಪ್ಪ | ೧ |
| | | **ಒಟ್ಟು** | ೮೩ |

| | | | |
|---|---|---|---|
| ೧೭ | ಬೀದರ್ | ಬೀದರ್ | ೧೫ |
| | | ಹುನಮಬದ್ | ೧೨ |
| | | ರಾಡ್ | ೮೪ |
| | | ಬಸವಕಲ್ಯಾಣ್ | ೩೭ |
| | | ಬಾಲ್ಕಿ | ೧೪ |
| | | ಒಟ್ಟು | ೧೬೨ |
| ೧೮. | ವಿಜಯಪುರ(ಬಿಜಾಪುರ) | ಬಿಜಾಪುರ | ೮೪ |
| | | ಬಸವನಬಾಗೇವಾಡಿ | ೪೫ |
| | | ಸಿಂಧಗಿ | ೩೩ |
| | | ಇಂಡಿ | ೬೨ |
| | | ಮುದ್ದೆಬಿಹಲಿ | ೨೮ |
| | | ಒಟ್ಟು | ೨೫೨ |
| ೧೯. | ಚಿತ್ರದುರ್ಗ | ಹೊಳಲಕೆರೆ | ೩೫ |
| | | ಚಳ್ಳಕೆರೆ | ೨೫ |
| | | ಹಿರಿಯೂರು | ೨೬ |
| | | ಚಿತ್ರದುರ್ಗ | ೧೮ |
| | | ಹೊಸದುರ್ಗ | ೨೫ |
| | | ಒಟ್ಟು | ೧೨೯ |
| ೨೦. | ದಾವಣಗೆರೆ | ದಾವಣಗೆರೆ | ೫೦ |
| | | ಹರಿಹರ | ೫ |
| | | ಜಗಳೂರು | ೧೫ |
| | | ಹರಪ್ಪನಹಳ್ಳಿ | ೫೨ |
| | | ಹೊನ್ನಳ್ಳಿ | ೪೦ |
| | | ಚನ್ನಗಿರಿ | ೯೨ |
| | | ಒಟ್ಟು | ೨೫೪ |

| | | | |
|---|---|---|---|
| ೨೧. | ಶಿವಮೊಗ್ಗ | ಶಿವಮೊಗ್ಗ | ೬೪ |
| | | ಶಿಕಾರಿಪುರ | ೬೧ |
| | | ಸೊರಭ | ೫ |
| | | ಭದ್ರಾವತಿ | ೩೫ |
| | | ಒಟ್ಟು | ೧೬೫ |
| ೨೨. | ಕಲಬುರ್ಗಿ (ಗುಲ್ಬರ್ಗಾ) | ಚಿಂಚೋಳಿ | ೧೧೦ |
| | | ಶಹಪುರ | ೪೧ |
| | | ಕಲಬುರ್ಗಿ (ಗುಲ್ಬರ್ಗ) | ೪೩ |
| | | ಚಿತ್ತಪುರ | ೮೦ |
| | | ಯಾದಗಿರಿ | ೭೮ |
| | | ಜವರ್ಗಿ | ೨೮ |
| | | ಅಲಂದ | ೪೬ |
| | | ಸುರಪುರ | ೪೬ |
| | | ಅಫ್ಜಲ್‌ಪುರ | ೧೯ |
| | | ಸದೇಮ್ | ೭೧ |
| | | ಒಟ್ಟು | ೫೬೨ |
| ೨೩. | ದಾರವಾಡ | ಧಾರವಾಡ | ೪ |
| | | ಹುಬ್ಬಳ್ಳಿ | ೪ |
| | | ಕುಂಡಗೊಲ | ೫ |
| | | ಕಲಗಟ್ಗಿ | ೮ |
| | | ನವಲ್‌ಗುಂಡ | ೨ |
| | | ಒಟ್ಟು | ೨೩ |
| ೨೪. | ಹಾವೇರಿ | ರಾಣೆಬೆನ್ನೂರು | ೨೦ |
| | | ಹಾವೇರಿ | ೧೦ |
| | | ಶಿಗ್ಗಾನ್ | ೧೦ |

| | | | |
|---|---|---|---|
| | | ಸವನೂರು | ೧೬ |
| | | ಹನಗಲ್ | ೧೩ |
| | | ಹಿರೇಕೆರೂರ್ | ೧೭ |
| | | ಬ್ಯಾಡಗಿ | ೧೦ |
| | | **ಒಟ್ಟು** | **೯೬** |
| ೨೫. | ಗದಗ್ | ಗದಗ್ | ೧೧ |
| | | ರೊಣ | ೧೬ |
| | | ನರಗುಂದ | ೩ |
| | | ಮುಂಡರಗಿ | ೧೦ |
| | | ಶಿರಹಟ್ಟಿ | ೨೩ |
| | | **ಒಟ್ಟು** | **೬೩** |
| | | **ಒಟ್ಟು ಮೊತ್ತ** | **೨೭೭೦** |
| ೨೬. | ದಕ್ಷಿಣ ಕನ್ನಡ | | |
| ೨೭. | ಕೋಲಾರ | | |
| ೨೮. | ಉಡುಪಿ | | |
| ೨೯. | ಕೊಡಗು | | |
| | | **ಒಟ್ಟು** | **೨೭೭೦** |

**ಮೂಲ:** ಕರ್ನಾಟಕದ ತಾಂಡ ಅಭಿವೃದ್ಧಿ ನಿಗಮ, ತಾಂಡಾಗಳ ಪಟ್ಟಿ, ಜಿಲ್ಲಾ ಮತ್ತು ತಾಲ್ಲೂಕುವಾರು ತಾಂಡಗಳ ಸಂಖ್ಯಾ ಪ್ರಮಾಣ

## ೪.೩. ಸಾಕ್ಷರತೆ ಮತ್ತು ಮಾತೃಭಾಷೆ

ಸಾಕ್ಷರತೆಯು ವ್ಯಕ್ತಿಯ ಮನೋಭಾವ, ವೈಚಾರಿಕ ನಿಲುವು, ಕಾರ್ಯಶೀಲತೆ ಇತರೆ ಪೂರಕ ಅಂಶಗಳ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ. ಸಾಕ್ಷರತೆಯು ಬೇರೆಯವರ ವಿಚಾರಗಳನ್ನು ಅರಿಯಲು ಹಾಗೆಯೇ ತಮ್ಮ ವಿಚಾರಗಳನ್ನು ಬೇರೆಯವರಿಗೆ ತಿಳಿಸಲು ಸಾಧ್ಯವಾಗುತ್ತದೆ. ಸಾಮಾಜಿಕ ಮತ್ತು ಆರ್ಥಿಕ ಪ್ರಜ್ಞೆಯನ್ನು ಮೂಡಿಸುವಲ್ಲಿ ಸಾಕ್ಷರತೆ ಒಂದು ಮುಖ್ಯ ಸಾಧನವಾಗಿದೆ. ತಮ್ಮ ಹಕ್ಕು ಕರ್ತವ್ಯ ಮತ್ತು ದೊರೆಯಬೇಕಾದ ಸೌಲಭ್ಯಗಳ ಬಗೆಗೆ ತಿಳಿದುಕೊಳ್ಳಲು ಓದು ಬರಹ ಅನಿವಾರ್ಯ ಹಾಗೂ ಅವಶ್ಯಕವಾಗಿದೆ.

ಕರ್ನಾಟಕದಲ್ಲಿ ಸಾಕ್ಷರತೆಯ ಪ್ರಮಾಣವನ್ನು ಆಧಾರವಾಗಿಟ್ಟುಕೊಂಡು ಆಯ್ಕೆ ಮಾಡಿಕೊಂಡಿರುವ ಮೂರು ಜಿಲ್ಲೆಗಳಲ್ಲಿ ಕಂಡುಬರುವ ಸಾಕ್ಷರತೆಯ ಮಟ್ಟವನ್ನು ಅರಿಯಲು ಯತ್ನಿಸಲಾಗಿದೆ.

ಒಬ್ಬ ಅಕ್ಷರಸ್ಥ ಹೊಂದಿರುವ ಸಾಮಾಜಿಕ, ಸಾಂಸ್ಕೃತಿಕ ದೃಷ್ಟಿಕೋನಕ್ಕೂ ಅನಕ್ಷರಸ್ಥ ಹೊಂದಿರುವ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ದೃಷ್ಟಿಕೋನಕ್ಕೂ ಬಹಳಷ್ಟು ವ್ಯತ್ಯಾಸವಿರುತ್ತದೆ. ವ್ಯತ್ಯಾಸಕ್ಕೆ ಉತ್ತರ ಪಡೆಯುವ ಉದ್ದೇಶದಿಂದಾಗಿ ಶಿಕ್ಷಣ ಹೊಂದಿರುವ ಮಾಹಿತಿದಾರರ/ಪ್ರತಿವರ್ತಿತರನ್ನು ಒಟ್ಟು ೨೦೦ ಕುಟುಂಬಗಳನ್ನು ವಿಂಗಡಿಸಿಕೊಂಡು ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಇದರ ಪ್ರಕಾರ ಕರ್ನಾಟಕದ ನಕ್ಷೆ, ಬಂಜಾರರ ಸಾಕ್ಷರತೆಯ ಪ್ರಮಾಣವನ್ನು ಆಧರಿಸಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಜಿಲ್ಲೆಗಳು ಹಾಗೂ ಅಲ್ಲಿನ ಸಾಕ್ಷರತಾ ಪ್ರಮಾಣವನ್ನು ಸೂಚಿಸುತ್ತದೆ. ಬಂಜಾರರ ಸಾಕ್ಷರತಾ ಪ್ರಮಾಣ ಹಾಗೂ ಜಿಲ್ಲೆಯ ಸಾಕ್ಷರತಾ ಪ್ರಮಾಣ ನಿಕಟ ಸಂಬಂಧ ಹೊಂದಿದೆ.

ಬಂಜಾರ ಜನರು ಹೆಚ್ಚಾಗಿ ವಾಸಿಸುವಂತಹ ಜಿಲ್ಲೆಗಳಾದ ಶಿವಮೊಗ್ಗ, ಧಾರವಾಡ, ಚಿಕ್ಕಮಗಳೂರು, ಹಾವೇರಿ, ದಾವಣಗೆರೆ, ಚಿತ್ರದುರ್ಗ, ಗುಲ್ಬರ್ಗಾ, ಕೊಪ್ಪಳ, ರಾಯಚೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಲ್ಲಿ ಸಂಶೋಧಕರ ಕಾಲ, ವ್ಯಾಪ್ತಿ ಮತ್ತು ಕರ್ತವ್ಯ ಅಂಶಗಳನ್ನು ಪರಿಗಣಿಸಿ, ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ೨೦೧೧ರ ಜನಗಣತಿಯ ಪ್ರಕಾರ ಚಿಕ್ಕಮಗಳೂರು ಶೇ. ೭೨.೩ರಷ್ಟು ಚಿತ್ರದುರ್ಗ ಶೇ. ೭೨.೧ರಷ್ಟು ಚಿಕ್ಕಬಳ್ಳಾಪುರ ಶೇ. ೬೮.೫ರಷ್ಟು ಸಾಮಾನ್ಯ ಸಾಕ್ಷರತಾ ಪ್ರಮಾಣವನ್ನು ಹೊಂದಿವೆ. ಬಂಜಾರದಲ್ಲಿನ ಸಾಕ್ಷರತೆಯನ್ನು ನೋಡಿದಾಗ ಕ್ರಮವಾಗಿ ಚಿಕ್ಕಮಗಳೂರು ಶೇ. ೫೨.೩, ಮತ್ತು ಚಿತ್ರದುರ್ಗ ಶೇ. ೪೮.೬ ಮತ್ತು ಚಿಕ್ಕಬಳ್ಳಾಪುರ ಶೇ. ೪೫.೬ರಷ್ಟು ಪ್ರಮಾಣದ ಸಾಕ್ಷರರನ್ನು ಕಾಣಬಹುದಾಗಿದೆ.

**ಕೋಷ್ಟಕ I: ಅಧ್ಯಯನಕ್ಕೆ ಒಳಪಡಿಸಿಕೊಂಡಿರುವ ಆಯ್ಕೆ ಜಿಲ್ಲೆಗಳ ಸಾಕ್ಷರತೆಯ ವಿವರ**

| ಕ್ರಸಂ. | ಜಿಲ್ಲೆಗಳು | ಸಾಮಾನ್ಯ ಸಾಕ್ಷರತೆ | ಬಂಜಾರರಲ್ಲಿ ಸಾಕ್ಷರತೆ |
|---|---|---|---|
| ೧ | ಚಿಕ್ಕಮಗಳೂರು | – ೭೨.೦೩ | ೫೨.೩ |
| ೨ | ಚಿತ್ರದುರ್ಗ | – ೭೨.೦೧ | ೪೮.೬ |
| ೩ | ಚಿಕ್ಕಬಳ್ಳಾಪುರ | – ೬೮.೦೫ | ೪೫.೬ |

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಮೂರು ಜಿಲ್ಲೆಗಳನ್ನು ಸಾಕ್ಷರತಾ ಪ್ರಮಾಣಗಳ ಆಧಾರದ ಮೇಲೆ ಈ ಕೆಳಕಂಡಂತೆ ವಿಂಗಡಿಸಲಾಗಿದೆ. ಗರಿಷ್ಠ ಸಾಕ್ಷರತಾ ಹೊಂದಿರುವ ಜಿಲ್ಲೆಗಳು, ಮಾಧ್ಯಮ ಸಾಕ್ಷರತೆ ಮತ್ತು ಕನಿಷ್ಠ ಸಾಕ್ಷರತೆ ಹೊಂದಿರುವ ಜಿಲ್ಲೆಗಳು, ಪ್ರತಿಯೊಂದು ಜಿಲ್ಲೆಯ ಆಯ್ದ ತಾಲ್ಲೂಕುಗಳಲ್ಲಿ ಅತಿ ಹೆಚ್ಚು ಜನಸಂಖ್ಯೆ ಹೊಂದಿರುವ ಐದು ಲಂಬಾಣಿ ತಾಂಡಾಗಳನ್ನು ಅಧ್ಯಯನದ ಕಾರ್ಯಕ್ಕೆ ಆಯ್ಕೆ ಮಾಡಿಕೊಂಡು ಮಾಹಿತಿ ಸಂಗ್ರಹಿಸಲಾಗಿದೆ.

**ಕೋಷ್ಟಕ – II**

ಸಂಶೋಧನಾ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿರುವ ಹದಿನೈದು ತಾಂಡಗಳಲ್ಲಿ ಕಂಡುಬಂದಿರುವ ಸಾಕ್ಷರತಾ ವಿವರಗಳು ಸಾಮಾನ್ಯ ಮಾಹಿತಿ

| ಕ್ರ.ಸಂ. | ವಿವರ | ಸಂಖ್ಯೆ | ಶೇಕಡವಾರು |
|---|---|---|---|
| ೧ | ಪ್ರಾಥಮಿಕ ಶಿಕ್ಷಣ | ೬೨ | ೩೧.೦೦ |
| ೨ | ಪ್ರೌಢ ಶಿಕ್ಷಣ | ೩೬ | ೧೮.೦೦ |
| ೩ | ಪಿಯುಸಿ ಶಿಕ್ಷಣ | ೧೫ | ೦೭.೦೫ |
| ೪ | ಪದವಿ ಶಿಕ್ಷಣ | ೧೩ | ೦೬.೦೫ |
| ೫ | ಸ್ನಾತಕೋತ್ತರ ಮತ್ತು ತರಬೇತಿ ಶಿಕ್ಷಣ | ೧೮ | ೦೯.೦೫ |
| ೬ | ವಿದ್ಯಾವಂತರಲ್ಲದವರು | ೫೬ | ೨೭.೦೫ |
| | | ೨೦೦ | ೧೦೦.೦೦ |

**ಕೋಷ್ಟಕ – III**

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನಲ್ಲಿ ಆಯ್ಕೆ ಮಾಡಿಕೊಂಡಿರುವ ೫ ಲಂಬಾಣಿ ತಾಂಡಗಳ ಸಾಕ್ಷರತಾ ವಿವರ (ಎಂ.ಎನ್. ತಾಂಡ, ಬಸವನಹಳ್ಳಿ ತಾಂಡ, ಸಿ.ಎಲ್. ತಾಂಡ, ನಿಡುವಳ್ಳಿ ತಾಂಡ ಮತ್ತು ಉಪ್ಪಿನಹಳ್ಳಿ ತಾಂಡ)

| ಕ್ರಸಂ | ವಿದ್ಯಾವಂತರು | ಸಂಖ್ಯೆ | ಶೇಕಡವಾರು |
|---|---|---|---|
| ೧ | ಪ್ರಾಥಮಿಕ ಶಿಕ್ಷಣ | ೧೭ | ೩೭.೦೮ |
| ೨ | ಪ್ರೌಢ ಶಿಕ್ಷಣ | ೧೪ | ೧೮.೦೦ |
| ೩ | ಪಿಯುಸಿ ಶಿಕ್ಷಣ | ೦೯ | ೧೨.೦೬ |
| ೪ | ಪದವಿ ಶಿಕ್ಷಣ | ೦೬ | ೦೮.೦೪ |
| ೫ | ಸ್ನಾತಕೋತ್ತರ ಮತ್ತು ತರಬೇತಿ ಶಿಕ್ಷಣ | ೦೪ | ೦೮.೦೪ |
| ೬ | ಯಾವುದೇ ಶಿಕ್ಷಣ ಪಡೆಯದೇ ಇರುವವರು ಅಥವಾ ಅವಿದ್ಯಾವಂತರು | ೨೦ | ೧೯.೩ |
| | | ೭೦ | ೧೦೦.೦೦ |

**ಕೋಷ್ಟಕ – IV**

ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ಸಂಶೋಧನೆಗೆ ಆಯ್ಕೆಮಾಡಿಕೊಂಡಿರುವ ಐದು ತಾಂಡಗಳಲ್ಲಿಕಂಡುಬಂದಿರುವ ಸಾಕ್ಷರತಾ ಮಟ್ಟ (ಸಿಂಗನಹಳ್ಳಿ ತಾಂಡ, ಕೃಷ್ಣಾಪುರ ತಾಂಡ, ಅಲಘಟ್ಟಾ ತಾಂಡ, ಹನುಮನಹಳ್ಳಿ ತಾಂಡ ಹಾಗೂ ತಂಡಗ ತಾಂಡ)

| ಕ್ರಸಂ | ವಿವರ | ಸಂಖ್ಯೆ | ಶೇಕಡವಾರು |
|---|---|---|---|
| ೧ | ಪ್ರಾಥಮಿಕ ಶಿಕ್ಷಣ | ೦೮ | ೧೨.೦೬ |
| ೨ | ಪ್ರೌಢ ಶಿಕ್ಷಣ | ೨೦ | ೨೮.೦೬ |
| ೩ | ಪಿಯುಸಿ ಶಿಕ್ಷಣ | ೦೮ | ೧೨.೦೬ |
| ೪ | ಪದವಿ ಶಿಕ್ಷಣ | ೦೭ | ೦೮.೦೯ |
| ೫ | ಸ್ನಾತಕೋತ್ತರ ಮತ್ತು ತರಬೇತಿ ಶಿಕ್ಷಣ | ೦೫ | ೦೬.೦೫ |
| ೬ | ವಿದ್ಯಾವಂತರಲ್ಲದವರು | ೨೨ | ೩೦.೦೮ |
| | | ೭೦ | ೧೦೦.೦೦ |

**ಕೋಷ್ಟಕ – V**

ಚಿಕ್ಕಬಳ್ಳಾಪುರ ಜಿಲ್ಲೆ, ಬಾಗೇಪಳ್ಳಿ ತಾಲ್ಲೂಕಿನಲ್ಲಿ ಸಂಶೋಧನೆಗೆ ಆಯ್ಕೆ ಮಾಡಿಕೊಂಡಿರುವ ಐದು ತಾಂಡಗಳಲ್ಲಿನ ಸಾಕ್ಷರತಾ ಮಟ್ಟ(ಲಕ್ಷಣತಾಂಡ, ಸಿದ್ದನಪಲ್ಲಿ ತಾಂಡಾ, ಮರುವಾಪಲ್ಲಿ ತಾಂಡ, ಪಾರ್ವತಿಪುರ ತಾಂಡ, ಮತ್ತು ಕ್ಯುಯ್ಯುಗುಂಟ ತಾಂಡಗಳು)

| ಕ್ರಸಂ | ವಿವರ | ಸಂಖ್ಯೆ | ಶೇಕಡವಾರು |
|---|---|---|---|
| ೧ | ಪ್ರಾಥಮಿಕ ಶಿಕ್ಷಣ | ೧೫ | ೨೮.೦೦ |
| ೨ | ಪ್ರೌಢ ಶಿಕ್ಷಣ | ೧೨ | ೧೬.೫೦ |
| ೩ | ಪಿಯುಸಿ ಶಿಕ್ಷಣ | ೦೬ | ೦೮.೦೦ |
| ೪ | ಪದವಿ ಶಿಕ್ಷಣ | ೦೫ | ೦೭.೦೦ |
| ೫ | ಸ್ನಾತಕೋತ್ತರ ಮತ್ತು ತರಬೇತಿ ಶಿಕ್ಷಣ | ೦೪ | ೦೨.೫೦ |
| ೬ | ವಿದ್ಯಾವಂತರಲ್ಲದವರು | ೨೮ | ೩೮.೦೦ |
| | | ೬೦ | ೧೦೦.೦೦ |

**ಗರಿಷ್ಠ ಸಾಕ್ಷರತಾ ತಾಂಡ:** ಚಿಕ್ಕಮಗಳೂರು ಜಿಲ್ಲೆ ಗರಿಷ್ಠ ಸಾಕ್ಷರತಾ ಮಟ್ಟವು ಶೇ. ೭೨.೧ರಷ್ಟಾಗಿದ್ದರೂ ರಾಜಕೀಯ, ಆರ್ಥಿಕವಾಗಿ ಇಲ್ಲಿನ ಜನತೆ ಯಾರೂ ಮುಂದೆ ಬಂದಿಲ್ಲ. ಆದರೆ ಕಡೂರು ತಾಲ್ಲೂಕಿನಿಂದ ಬೇರೆ ಜಿಲ್ಲೆಯಿಂದ ಬಂದಿರುವವರೊಬ್ಬರೂ ಶಾಸಕರಾಗಿ, ಸಚಿವರಾಗಿ ಆಯ್ಕೆಯಾಗಿರುತ್ತಾರೆ. ಸರ್ಕಾರದ ವಿಕೇಂದ್ರೀಕರಣ ಪದ್ಧತಿಯ ನಂತರ ಯುವಕರು ರಾಜಕೀಯವಾಗಿ ಪ್ರವೇಶಿಸುತ್ತಿದ್ದಾರೆ. ಚಿಕ್ಕಮಗಳೂರು ಜಿಲ್ಲೆ ಒಟ್ಟು ಬಂಜಾರರ ಕುಟುಂಬಗಳು ೧೧೨೯ ಈ ಕುಟುಂಬಗಳ ಒಟ್ಟು ಜನಸಂಖ್ಯೆ ೪೯೫೧೩ ಪುರುಷರು ೨೫೭೫೬, ಸ್ತ್ರೀಯರು ೨೩೭೫೭, ಸಾಕ್ಷರತೆಯ ಮಟ್ಟ ೫೮೩೫. ಕಡೂರು ತಾಲ್ಲೂಕಿನಲ್ಲಿ ಒಟ್ಟು ೬೫೧೫ ಮನೆಗಳಿದ್ದು ಇವರ ಜನಸಂಖ್ಯೆ, ೧೭೮೫ ಇವರಲ್ಲಿ ಪುರುಷರು ೯೨೯ ಮತ್ತು ಸ್ತ್ರೀಯರು ೮೭೯.

**ಮಧ್ಯಮ ಸಾಕ್ಷರತೆ ತಾಂಡ:** ಈ ಜಿಲ್ಲೆಯ ತಾಂಡಾಗಳ ಜನತೆ ಮತ್ತು ಶಿಕ್ಷಣ ಹೋಲಿಸಿದರೆ ವಿದ್ಯಾವಂತ ಸಂಖ್ಯೆ ಇನ್ನುಳಿದ ಜಿಲ್ಲೆಗಳಿಗಿಂತ ಉನ್ನತ ಮಟ್ಟದಲ್ಲಿದೆ ಎಂದು ಹೇಳಬಹುದು. ಪ್ರತಿಯೊಂದು ಮನೆಯಲ್ಲಿಯೂ ಒಬ್ಬ ವಿದ್ಯಾವಂತರು ಇರುವುದನ್ನು ಕಾಣಬಹುದು ಹಾಗೂ ತಾಂಡಾಗಳಲ್ಲಿ ಕೆಲವರು ಉನ್ನತ ಶಿಕ್ಷಣ ಪಡೆದವರು ಸಹ ಕಂಡುಬರುತ್ತಾರೆ. ಬಂಜಾರ ತಾಂಡಾಗಳು ಜಿಲ್ಲೆಗೆ ಹತ್ತಿರವಿರುವುದು ಶಿಕ್ಷಣ ಪ್ರಗತಿಗೆ ಒಂದು ಮುಖ್ಯ ಕಾರಣವಾಗಿರುತ್ತದೆ. ಲಂಬಾಣಿ ಶಾಲಾ ಕಾಲೇಜುಗಳು, ಈ ಜಿಲ್ಲೆಯಲ್ಲಿ ಕಂಡುಬರುತ್ತದೆ. ಸುಮಾರು ೬ ಪ್ರೌಢಶಾಲೆಗಳು, ಮಾಧ್ಯಮಿಕ ಶಾಲೆಗಳು ಮತ್ತು ಬಣಜಾರ ಪ್ರಥಮ ದರ್ಜೆ ಕಾಲೇಜು ಇರುವುದನ್ನು ಗಮನಿಸಬಹುದು.ಈ ಶಾಲೆಗಳಲ್ಲಿ ಲಂಬಾಣಿಗರಿಗೆ

ಮೊದಲ ಆದ್ಯತೆ ನೀಡುತ್ತಾರೆ ಮತ್ತು ಲಂಬಾಣಿ ಮಕ್ಕಳಿಗೆ ವಿಶೇಷವಾಗಿ ವಸತಿ ನಿಲಯಗಳು ಕಂಡುಬರುತ್ತವೆ.

**ಕಡಿಮೆ ಸಾಕ್ಷರತಾ ತಾಂಡ:** ಚಿಕ್ಕಬಳ್ಳಾಪುರ ಜಿಲ್ಲೆ ಇತ್ತೀಚೆಗೆ ಅಸ್ತಿತ್ವಕ್ಕೆ ಬಂದಿದ್ದು, ಶೈಕ್ಷಣಿಕವಾಗಿ ಇನ್ನೂ ಪರಿಪೂರ್ಣ ಪ್ರಗತಿಯನ್ನು ಹೊಂದಿರುವುದಿಲ್ಲಾ, ಇಲ್ಲಿನ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳು ಮಧ್ಯಮ ಹಂತದಲ್ಲಿದ್ದು, ಬಂಜಾರರ ಸಮುದಾಯ ಇದಕ್ಕಿಂತ ಹೊರತಾಗಿಲ್ಲ. ಈ ಜಿಲ್ಲೆಯಬಾಗೇಪಲ್ಲಿ ತಾಲ್ಲೂಕಿನಲ್ಲಿ ಕಂಡುಬಂದಿರುವ ಒಟ್ಟು ತಾಂಡಗಳು ೩೨ ಕುಟುಂಬಗಳ ಸಂಖ್ಯೆ ೧೬೧೫, ಒಟ್ಟು ಜನಸಂಖ್ಯೆ ೯೨೭೫ ಇವರಲ್ಲಿ ಪುರುಷರು ೪೭೫೦, ಮಹಿಳೆಯರು ೪೫೨೫ರಷ್ಟಿದೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಒಟ್ಟು ೬೦ ಕುಟುಂಬಗಳಲ್ಲಿ ೩೨(ಶೇ.೫೨) ಕುಟುಂಬಗಳ ಸದಸ್ಯರು ವಿದ್ಯಾವಂತರಾಗಿದ್ದು, ೨೮ ಜನರು (ಶೇ.೪೮) ವಿದ್ಯಾವಂತರಲ್ಲದವರಾಗಿದ್ದಾರೆ. ಇವರಲ್ಲಿ ಪ್ರಾಥಮಿಕ ಶಾಲಾವಲಯದಲ್ಲಿ ಕಲಿತವರು ೧೫ ಜನ (ಶೇ.೨೮) ಪ್ರೌಢ ಶಿಕ್ಷಣ ಪಡೆದವರು ೧೨ ಜನ(ಶೇ.೧೬.೫೦) ಪದವಿಪೂರ್ವ ಶಿಕ್ಷಣ ಪಡೆದವರು ೦೬ ಜನ (ಶೇ.೮) ಪದವಿ ವ್ಯಾಸಂಗ ಮಾಡಿರುವವರು ೦೫ ಜನ (ಶೇ.೭) ಉಳಿದಂತೆ ೦೪ ಜನರು (ಶೇ.೦೨.೫೦) ಇವರು ಸ್ನಾತಕೋತ್ತರ ಮತ್ತು ಇತರೆ ತರಬೇತಿ ಶಿಕ್ಷಣ ಹೊಂದಿದವರಾಗಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಅಧ್ಯಯನದ ಮಾಹಿತಿ ಕಾರ್ಯಕ್ಕೆ ಒಳಪಟ್ಟಿರುವ ಬಂಜಾರ ಸಮುದಾಯದ ಐದು ತಾಂಡಗಳಾದ ಎಂ.ಎನ್.ತಾಂಡ್ಯ, ಬಸವನಹಳ್ಳಿ ತಾಂಡ್ಯ, ಸಿ.ಎಲ್.ತಾಂಡ್ಯ, ನಿಡುವಳಿ ತಾಂಡ್ಯ ಮತ್ತು ಉಪ್ಪಿನಹಳ್ಳಿ ತಾಂಡ್ಯ ಗಳಲ್ಲಿ ಕಂಡುಬಂದಿರುವ ಸಾಕ್ಷರತೆಯನ್ನು ಪರಿಶೀಲಿಸಿದಾಗ ೭೦ ಬಾತ್ಮೀದಾರರಲ್ಲಿ ೧೭ ಜನರು ಪ್ರಾಥಮಿಕ ಶಾಲೆ ಕಲಿತವರಾಗಿದ್ದಾರೆ. ೧೪ ಜನ(ಶೇ.೧೮) ಪ್ರೌಢಶಿಕ್ಷಣ ಪಡೆದಿದ್ದಾರೆ, ಪಿ.ಯು.ಸಿ ಶಿಕ್ಷಣವನ್ನು ೦೯(ಶೇ.೧೨.೬), ಪದವಿ ಶಿಕ್ಷಣ ೦೬ ಜನ (ಶೇ.೮.೦೪) ಮತ್ತು ಸ್ನಾತಕ್ಕೋತ್ತರ ಹಾಗು ಇತರೆ ತರಬೇತಿ ಶಿಕ್ಷಣ ಪಡೆದವರು ೦೪ ಜನ (ಶೇ.೮.೦೪) ಯಾವುದೇ ಶಿಕ್ಷಣ ಪಡೆಯದೆ ಇರುವವರ ಸಂಖ್ಯೆ ೨೦ ಜನ (ಶೇ.೧೯.೦೩) ಮಾಧ್ಯಮಿಕ ಶಾಲೆ ೦೮ ಜನರು ಪ್ರೌಢಶಾಲೆ ಕೇವಲ ೦೫ ಜನರು ಪದವಿಪೂರ್ವ ಶಿಕ್ಷಣದವರೆವಿಗೂ ವಿಧ್ಯಾಭ್ಯಾಸರನ್ನು ಹೊಂದಿದವರಾಗಿದ್ದು ಒಟ್ಟು ೩೯ ಮಂದಿ ಸಾಕ್ಷರತಾಗಿರುತ್ತಾರೆ ಉಳಿದ ೩೧ ಜನರು ಅನಕ್ಷರಸ್ಥರಾಗಿರುತ್ತಾರೆ.

ಚಿತ್ರದುರ್ಗ ಜಿಲ್ಲೆ ಹೊಸದುರ್ಗ ತಾಲ್ಲೂಕಿನ ೫ ತಾಂಡಗಳಾದ ಸಿಂಗನಹಳ್ಳಿ ಲಂಬಾಣಿ ತಾಂಡ, ಕೃಷ್ಣಾಪುರ ತಾಂಡ, ಹನುಮನಹಟ್ಟಿ ತಾಂಡ, ಅಲಘಟ್ಟ ತಾಂಡ ಮತ್ತು ತಂಡಗ ಲಂಬಾಣಿ ತಾಂಡಗಳ ಒಟ್ಟು ೭೦ ಜನ ಬಾತ್ಮೀದಾರರಲ್ಲಿ ಸಾಕ್ಷರತೆಯ ಮಟ್ಟವು ೦೮ ಜನರು(ಶೇ.೧೨.೬) ಪ್ರಾಥಮಿಕ ಶಾಲಾಶಿಕ್ಷಣ ಪಡೆದರೆ ೨೦ ಜನರು(ಶೇ.೨೮.೬), ಪ್ರೌಢಶಾಲೆ, ೦೮ ಜನರು (ಶೇ.೧೨.೬) ಪದವಿಪೂರ್ವ ಶಿಕ್ಷಣ, ಪದವಿ ಶಿಕ್ಷಣ ಪಡೆದಿರುವವರು ಒಟ್ಟು ೦.೭ (ಶೇ.೮.೯) ಸ್ನಾತಕೋತ್ತರ ಪದವಿ ಮತ್ತು ಇತರೆ ತರಬೇತಿ ಪಡೆದಿರುವವ ಸಂಖ್ಯೆ ೦.೫ ಜನ (ಶೇ.೦.೬೫) ಉಳಿದ ೨೨ ಜನರು (ಶೇ.೩೦.೫) ಸಾಕ್ಷರಲ್ಲದವರಾಗಿದ್ದಾರೆ. ಈ ತಾಲ್ಲೂಕಿನ ಬಂಜಾರ ಸಮುದಾಯದವರಲ್ಲಿನ ಸಾಕ್ಷರತಾ ಮಟ್ಟವು ಹೆಚ್ಚು ಪ್ರಗತಿಯಲ್ಲಿದೆ.

**ಲಿಂಗಸಂಯೋಜನೆ ಮತ್ತು ವಯಸ್ಸು**

ಅಧ್ಯಯನದ ಮಾಹಿತಿ ಕಾರ್ಯಕ್ಕೆ ಒಳಪಟ್ಟು ಒಟ್ಟು ೨೦೦ ಜನ ಬಾತ್ಮೀದಾರರಲ್ಲಿ ೧೨೦ ಪುರುಷರು ಮತ್ತು ೮೦ ಜನ ಮಹಿಳೆಯರು ಕಂಡುಬರುತ್ತಾರೆ. ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ ೫ ತಾಂಡಗಳಿಂದ ಒಟ್ಟು ೬೦ ಜನ ಮಾಹಿತಿದಾರರನ್ನು ಇವರಲ್ಲಿ ಪ್ರತಿತಾಂಡದಿಂದ ೧೨ ಜನರು ಆಯ್ಕೆಯಾಗಿದ್ದು, ೭ ಜನ ಪುರುಷರು, ೫ ಜನ ಮಹಿಳೆಯರಾಗಿದ್ದಾರೆ. ಇವರು ಅಧ್ಯಯನಕ್ಕೆ ಸೂಕ್ತ ಮಾಹಿತಿ ಒದಗಿಸಿದ್ದಾರೆ. ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ಐದು ತಾಂಡಗಳಲ್ಲಿನ ಲಿಂಗ ಸಂಯೋಜನೆಯು ಒಟ್ಟು ೭೦ ಮಾಹಿತಿದಾರರನ್ನು ಅವಲಂಬಿಸಿದ್ದು, ಇದರಲ್ಲಿ ಪ್ರತಿ ತಾಂಡದಿಂದ ಮಾಹಿತಿದಾರರನ್ನು ಆಯ್ಕೆ ಮಾಡಲಾಗಿದೆ. ಇವರಲ್ಲಿ ೯ ಜನರು ಪುರುಷರು ೫ ಜನರು ಮಹಿಳೆಯರಾಗಿರುತ್ತಾರೆ. ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ೫ ತಾಂಡಗಳಲ್ಲಿ ಪ್ರತಿ ತಾಂಡದಿಂದ ೧೪ ಮಾಹಿತಿದಾರರನ್ನು ಆಯ್ಕೆ ಮಾಡಿ ಇವರಲ್ಲಿ ೯ ಜನ ಪುರುಷರು ೫ ಜನ ಮಹಿಳೆಯ ರಾಗಿದ್ದು ಒಟ್ಟು ೭೦ ಜನ ಅಧ್ಯಯನಕ್ಕೆ ಒಳಪಟ್ಟಿರುತ್ತಾರೆ. ಮಾನವಶಾಸ್ತ್ರೀಯ ಸಂಶೋಧನೆ ಯಲ್ಲಿ ವ್ಯಕ್ತಿಯ ಜೈವಿಕ ವಯೋಮಾನವು ಒಂದು ಪ್ರಮುಖ ಪರಿವರ್ತಕವಾಗಿರುತ್ತದೆ. ಅವರ ಅನುಭವಗಳ ಪರಿದೃಷ್ಟಿಗಳು, ಅಭಿಪ್ರಾಯಗಳ ರಚನೆ ಮತ್ತು ಮುನ್ನೋಟಗಳು ವಯೋಮಾನದ ಸೂಕ್ತ ಮಾಹಿತಿ ಗಳಾಗಿರುತ್ತವೆ. ಸಾಮಾನ್ಯ ಅಭಿಪ್ರಾಯದಲ್ಲಿ ಹೇಳುವುದಾದರೆ ಯುವ ಮತ್ತು ಸಧೃಡ ವ್ಯಕ್ತಿಗಳು ತುಂಬಾ ಕ್ರಿಯಾಶೀಲ ಹಾಗೂ ಚಟುವಟಿಕೆಗಳಿಂದ ಕೂಡಿರುತ್ತಾರೆ. ಹಾಗೆಯೇ ಆರೋಗ್ಯಕರ ಸ್ವಸ್ಥ್ಯ ಸಮಾಜಗಳಿಗೆ ಪೂರಕ ಚಿಂತನೆಗಳನ್ನು ಹೊಂದಿರುತ್ತಾರೆ. ಈ ಹಿನ್ನಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿರುವ ಮಾಹಿತಿದಾರರ

ವಯೋಮಾನವನ್ನು ವಿಶ್ಲೇಷಿಸಲಾಗಿದೆ. ಆಯ್ಕೆಯಾದ ಒಟ್ಟು ೨೦೦ ಮಾಹಿತಿದಾರರ ವಯೋಮಾನವನ್ನು ವಿಶ್ಲೇಷಿಸಲಾಗಿದೆ. ಆಯ್ಕೆಯಾದ ಒಟ್ಟು ೨೦೦ ಮಾಹಿತಿದಾರರಲ್ಲಿ ೨೦ ರಿಂದ ೨೦ ವಯಸ್ಸಿನವರು ೧೧೩(ಶೆ.೫೬.೫೦) ಜನರು, ೩೦ ರಿಂದ ೩೯ ವಯೋಮಾನ ದವರು, ೪೬ ಜನರು (೨೩.೦೦) ೪೦ರಿಂದ ೪೯ ವಯೋಮಾನದವರು ೨೪ ಜನರು (ಶೇ.೧೨.೦೦) ಮತ್ತು ೫೦ ವರ್ಷಮೇಲ್ಪಟ್ಟವರಲ್ಲಿ ೧೭ ಜನರು ಇರುತ್ತಾರೆ. ಇವರ ಶೇಕಡ ೦೮.೫೦ ಪ್ರಮಾಣದಷ್ಟಿದೆ. ಪಟ್ಟಿಯಲ್ಲಿ ಸೂಚಿಸಿರುವಂತೆ ಗರಿಷ್ಠ ಪ್ರಮಾಣದಲ್ಲಿ ಯುವ ವಯೋಮಾನದವರಾಗಿದ್ದು ಶೇ. ೫೬.೫೦ರಷ್ಟು ಅಧಿಕವಾಗಿದ್ದು ೫೦ರ ವಯೋಮಾನ ದವರು (ಶೇ.೮.೫೦) ಆಗಿರುತ್ತಾರೆ(ಕೋಷ್ಟಕ ೪.೧ರಲ್ಲಿ ತೋರಿಸುವಂತೆ).

**ಕೋಷ್ಟಕ – VI ಮಾಹಿತಿದಾರರ ವಯೋಮಾನ**

| ಕ್ರ.ಸಂ. | ವಯಸ್ಸು | ಸಂಖ್ಯೆ | ಶೇಕಡ |
|---|---|---|---|
| ೧ | ೨೦–೨೯ | ೧೧೩ | ೫೬.೫೦ |
| ೨ | ೩೦–೩೯ | ೪೬ | ೨೩.೦೦ |
| ೩ | ೪೦–೪೯ | ೨೪ | ೧೨.೦೦ |
| ೪ | ೫೦ರ ಮೇಲ್ಪಟ್ಟು | ೧೭ | ೦೮.೫೦ |
| | **ಒಟ್ಟು** | **೨೦೦** | **೧೦೦.೦೦** |

**ವೈವಾಹಿಕ ಸ್ಥಾನಮಾನ**

ಬಂಜಾರರ ಸಾಮಾಜಿಕ–ಆರ್ಥಿಕ ಜೀವನ ವ್ಯವಸ್ಥೆಯಲ್ಲಿ ವಿವಾಹ ಸ್ಥಿತಿಯು ಒಂದು ಪ್ರಮುಖ ಪರಿವರ್ತಕವಾಗಿದೆ. ಒಬ್ಬ ವ್ಯಕ್ತಿ ವಿವಾಹದ ಮೂಲಕ ಸಂಸಾರ ಬಂಧನಕ್ಕೆ ಒಳಗಾಗಿದ್ದಾನೆ. ಎಂದರೆ ಅವನು ಪ್ರೌಢನಾಗಿದ್ದಾನೆ ಎಂದು ತಿಳಿದುಬರುತ್ತದೆ. ಆತನಿಗೆ ಕುಟುಂಬನಿರ್ವಹಣೆ, ಜವಾಬ್ದಾರಿ ಅಥವಾ ಹೊಣೆಗಾರಿಕೆಗಳನ್ನು ತಿಳಿಯುವ ಶಕ್ತಿ ಬಂದಿರುತ್ತದೆ. ಯಾವುದೇ ವ್ಯಕ್ತಿಯ ವೈವಾಹಿಕ ಸ್ಥಿತಿ ಅವರ ಆರ್ಥಿಕ ಮತ್ತು ಸಾಮಾಜಿಕ ಜೀವನದ ಮೇಲೆ ಹೆಚ್ಚು ಪರಿಣಾಮಬೀರುತ್ತದೆ ಮತ್ತು ಕುಟುಂಬದ ನಿರ್ವಹಣೆಯನ್ನು ಅವಲಂಬಿಸಿರುತ್ತದೆ. ಈ ಹಿನ್ನಲೆಯಲ್ಲಿ ಮಾಹಿತಿದಾರರ ವೈವಾಹಿಕ ಸ್ಥಾನಮಾನ ಹಂಚಿಕೆಯು ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿರುತ್ತದೆ. ಸೂಚಿಸಿರುವಂತೆ ಗಮನಿಸುವುದಾದರೆ ಗರಿಷ್ಠ ಮಟ್ಟ ೧೦೫ ಜನರು ಶೇ. (೫೨.೫೦) ಮಾಹಿತಿದಾರರು ವಿವಾಹಿತರಿದ್ದು, ೫೮(ಶೇ.

೨೯.೦೦) ಜನರು ಅವಿವಾಹಿತರಾಗಿದ್ದಾರೆ, ವಿಧವೆಯರು ಸಂಖ್ಯೆ ೨೫ (ಶೇ.೧೨.೫೦) ಮತ್ತು ಉಳಿದ ವಿಧುರರು ೧೨ ಜನ (ಶೇ. ೦೬.೦೦)ರಷ್ಟಿದ್ದಾರೆ.

ಮೂರು ಜಿಲ್ಲೆಗಳ ತಾಲ್ಲೂಕು ಮತ್ತು ತಾಂಡಾವಾರು ಮಟ್ಟವನ್ನು ಗಮನಿಸುವುದಾದರೆ ಒಟ್ಟು ೧೦೫ ವಿವಾಹಿತ ಮಾಹಿತಿದಾರರಲ್ಲಿ ಬಹುತೇಕ ಒಂದೇ ರೀತಿಯಾದ ಹಂಚಿಕೆ (ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ೫ ತಾಂಡಗಳಲ್ಲಿ ೩೫ (ಶೇ. ೩೩.೫೦) ಜನರು, ಚಿತ್ರದುರ್ಗದ ಹೊಸದುರ್ಗ ತಾಲ್ಲೂಕಿನ ೫ ತಾಂಡಗಳಲ್ಲಿ ೪೨ (ಶೇ. ೪೦.೦೦) ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ ೨೯ (ಶೇ. ೨೬.೫೦) ಕಂಡುಬಂದರೆ ಅವಿವಾಹಿತ, ವಿಧವೆ ಮತ್ತು ವಿಧುರರ ಹಂಚಿಕೆಯೂ ಸಹ ಇದರಿಂದ ಹೊರತಾಗಿಲ್ಲ(ಕೋಷ್ಟಕ ೪.೨ರಂತೆ).

**ಕೋಷ್ಟಕ – VII ವೈವಾಹಿಕ ಸ್ಥಾನಮಾನ**

| ಕ್ರ.ಸಂ. | ವಿವಾಹ ಸ್ಥಿತಿ | ಸಂಖ್ಯೆ | ಶೇಕಡ |
|---|---|---|---|
| ೧ | ವಿವಾಹಿತರು | ೧೦೫ | ೫೨.೫೦ |
| ೨ | ಅವಿವಾಹಿತರು | ೫೮ | ೨೯.೦೦ |
| ೩ | ವಿಧವೆಯರು | ೨೫ | ೧೨.೫೦ |
| ೪ | ವಿಧುರರು | ೧೨ | ೦೬.೦೦ |
| | **ಒಟ್ಟು** | ೨೦೦ | ೧೦೦.೦೦ |

**ವಿವಾಹದ ವಯಸ್ಸು**

ವಿವಾಹದ ಯೋಗ್ಯತೆಯು ವ್ಯಕ್ತಿಯ ಜೈವಿಕ–ಸಾಮಾಜಿಕ ಸ್ಥಿತಿಯನ್ನು ಆಧರಿಸಿದೆ. ದೈಹಿಕ–ಮಾನಸಿಕ ಕ್ಷಮತೆಯು ವೈವಾಹಿಕ ಸಾಮರ್ಥ್ಯವನ್ನು ತಿಳಿಸುತ್ತದೆ. ಇದು ಅನೇಕ ಹಂತಗಳ ಮೂಲಕ ಸಾಗುತ್ತದೆ. ಬಾಲ್ಯಹಂತ, ಪ್ರೌಢಹಂತ, ಯೌವನ ಹಂತ, ವೃದ್ಧಾಪ್ಯ ಹಂತಗಳು ತನ್ಮೂಲಕ ವ್ಯಕ್ತಿತ್ವದ ಬೆಳವಣಿಗೆಗೆ ಕಾರಣವಾಗಿರುತ್ತವೆ. ಬಂಜಾರ ಸಮುದಾಯಗಳ ಹೆಚ್ಚು ಸಾಂಪ್ರದಾಯಿಕ ಆಚರಣೆಗಳಿಗೆ ಒಳಪಟ್ಟಿದ್ದು ತಮ್ಮ ಮಕ್ಕಳ ವಿವಾಹದ ಹಂತವನ್ನು ತಿಳಿಸುತ್ತದೆ. ಈ ಹಿನ್ನಲೆಯಲ್ಲಿ ಬಹುಪಾಲು, ಸಮುದಾಯಗಳಲ್ಲಿ ಮಕ್ಕಳ ವಿವಾಹದ ವಯೋಮಾನವು ೧೫ ರಿಂದ ೧೮ ವರ್ಷಗಳು ಸಾಮಾನ್ಯವಾಗಿರುತ್ತದೆ. ೯೨ (ಶೇ.೪೬.೦೦)

ಕುಟುಂಬಗಳ ಆರ್ಥಿಕ-ಧಾರ್ಮಿಕ ಪರಿಸ್ಥಿತಿಗಳನ್ನು ಆಧರಿಸಿ ಕೆಲವೊಮ್ಮೆ ಅನಿವಾರ್ಯವಾಗಿ ಬಾಲ್ಯವಿವಾಹ ನೇರವೇರಿಸಲ್ಪಡುತ್ತದೆ. ಸಮೀಕ್ಷಿಸಿದ ಒಟ್ಟು ಮಾಹಿತಿದಾರರಲ್ಲಿ ೧೨ ರಿಂದ ೧೪ ವಯಸ್ಸಿನಲ್ಲಿ ವಿವಾಹವಾಗಿರುವವರ ಸಂಖ್ಯೆ ೨೮ (ಶೇ.೧೪.೦೦) ಉಳಿದಂತೆ ಕಾಲಾಂತರ ಗಳಲ್ಲಿ ಸಮುದಾಯಗಳಲ್ಲಿ ಶೈಕ್ಷಣಿಕ ಪ್ರಗತಿಯ ಫಲಿತಾಂಶದಿಂದಾಗಿ ೧೮ ರಿಂದ ೨೧ ವಯಸ್ಸಿನಲ್ಲಿ ವಿವಾಹವಾಗುವವರ ಸಂಖ್ಯೆ ೮೦ ಶೇ.೪೦ ಆಗಿರುತ್ತದೆ.

**ಕೋಷ್ಟಕ – VIII ವಿವಾಹದ ವಯಸ್ಸು**

| ಕ್ರ.ಸಂ. | ವಯಸ್ಸಿನ ಅಂತರ | ಸಂಖ್ಯೆ | ಶೇಕಡ |
|---|---|---|---|
| ೧ | ೧೨-೧೪ | ೨೮ | ೧೪.೦೦ |
| ೨ | ೧೫-೧೮ | ೯೨ | ೪೬.೦೦ |
| ೩ | ೧೮-೨೧ | ೮೦ | ೪೦.೦೦ |
| | **ಒಟ್ಟು** | ೨೦೦ | ೧೦೦.೦೦ |

### ೪.೪. ಒಳಾಡಳಿತ ವ್ಯವಸ್ಥೆ

ಕರ್ನಾಟಕದ ಲಂಬಾಣಿಗಳಲ್ಲಿಯ ರಾಜಕೀಯ ಅರಿವು, ಪ್ರಜ್ಞೆ ಹಾಗೂ ಅದರ ವಿಕಾಸದ ಮೇಲೆ ಪ್ರಭಾವ ಬೀರುವ ಅಂಶಗಳು ಅಧ್ಯಯನದ ಕೇಂದ್ರ ವಸ್ತುವಾಗಿದೆ. ಎಲ್ಲಾ ಭಾಗಗಳಲ್ಲಿಯ ಬಂಜಾರಗಳಲ್ಲಿ ಒಂದೇ ರೀತಿಯ ಪಾಲ್ಗೊಳ್ಳುವಿಕೆಯು ಕಂಡುಬರದೆ ಅಲ್ಲಿಯೂ ಸಾಕಷ್ಟು ವೈವಿಧ್ಯತೆಯನ್ನು ಕಾಣಬಹುದಾಗಿದೆ. ಬಂಜಾರ ಸಮುದಾಯಗಳಲ್ಲಿ ಸಾಂಪ್ರದಾಯಿಕ ಸಂಘಟನೆಯ ಅರಿವಿದ್ದು ತಾವು ಯಾವ ಸಂದರ್ಭದಲ್ಲಿ ಯಾವ ರೀತಿ ವರ್ತಿಸಬೇಕು ಎಂಬ ಪ್ರಜ್ಞೆಯು ಜಾಗೃತನಾಗಿರುವುದು ಇಂದಿನ ಅವರಲ್ಲಿರುವ ವ್ಯವಸ್ಥೆ ಸ್ಪಷ್ಟಪಡಿಸುತ್ತದೆ. ಪ್ರಜಾಪ್ರಭುತ್ವ ವ್ಯವಸ್ಥೆಯಿಂದ ಅವರಲ್ಲಿ ಹೊಸದಾಗಿ ಮೂಡಿರುವ ಹಾಗೂ ಇನ್ನೂ ಕೆಲವಡೆ ಮೂಡುತ್ತಿರುವ ರಾಜಕೀಯ ಪ್ರಜ್ಞೆಯ ವಿಕಾಸವನ್ನು ಹಾಗೂ ವಿಸ್ತಾರವನ್ನು ಅಧ್ಯಯನ ಮಾಡುವುದೇ ಸಂಶೋಧನೆಯ ಪ್ರಧಾನ ಉದ್ದೇಶವಾಗಿದೆ.

ಬಂಜಾರರಲ್ಲಿನ ರಾಜಕೀಯ ಅರಿವು ಆ ಸಮುದಾಯಗಳು ರೂಪಿಸಿಕೊಂಡಿರುವ ಗೋರ್ ವ್ಯವಸ್ಥೆ ಪಂಚಾಯಿತಿಗಳ ಸಂಘಟನೆ ಮತ್ತು ಅವುಗಳ ಕಾರ್ಯ ವಿಧಾನಗಳಿಂದ ತಿಳಿದುಕೊಳ್ಳಬಹುದಾಗಿದೆ. ಗೋರ್‌ಪಂಚಾಯ್ತಿ ಬಂಜಾರರ ಅತ್ಯುನ್ನತವಾದ ಒಂದು ಸಾಂಪ್ರದಾಯಿಕ ನ್ಯಾಯಾಲಯವೆಂದೇ ಹೇಳಬಹುದು. ಕಾರಣ ಆರಂಭದ ದಿನಗಳಿಂದಲೂ

ಇತರೆ ಜಾತಿ, ಪಂಗಡದ ಜನರಿಂದ ತಮ್ಮ ತಾಂಡಗಳನ್ನು ರಕ್ಷಿಸಿಕೊಳ್ಳಲು, ತಮ್ಮವರ ಯೋಗಕ್ಷೇಮ ನೋಡಿಕೊಳ್ಳಲು, ಸಂಪ್ರದಾಯ, ಸಂಸ್ಕೃತಿ, ಸಂಸ್ಕಾರಗಳು ಇವುಗಳು ಉಲ್ಲಂಘನೆಯಾಗದಂತೆ ಹಾಗೆಯೇ ಉದ್ಭವವಾಗುವ ಉಲ್ಲಂಘನೆಗಳು ಕುಲದಲ್ಲಿನ ಸಂಘರ್ಷ, ಸಮಸ್ಯೆಗಳನ್ನು ತಮ್ಮ ನ್ಯಾಯ ಸ್ಥಾನವಾದ ಗೋರ್ ಪಂಚಾಯಿತಿ ಸಂಘಟನೆ ಮತ್ತು ಕಾರ್ಯಕಲಾಪಗಳು ಆಧುನಿಕ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಲು ಒಂದು ವಾಡಿಕೆಯಾಗಿದ್ದು, ಸಮಸ್ತ ಬಂಜಾರ ಸಮುದಾಯದ ಸಾಮೂಹಿಕ ಹಿತಾಸಕ್ತಿಗೆ ದಾರಿದೀಪವಾಗಿದೆ. ಡಾ. ಎನ್. ರಾಜುನಾಯ್ಕ ಅವರು ತಮ್ಮ ಅಧ್ಯಯನದ ಲಂಬಾಣಿಗಳಲ್ಲಿ ರಾಜಕೀಯ ಅರಿವು ಒಂದು ಅಧ್ಯಯನ ಕೃತಿಯಲ್ಲಿ ತಿಳಿಸಿರುವಂತೆ ಬಂಜಾರರಲ್ಲಿ ನ್ಯಾಯ ಪಂಚಾಯಿತಿ ಸಭೆಯೇ ಒಂದು ಪವಿತ್ರವಾದ ದೇವಸ್ಥಾನವೆಂದು ಭಾವಿಸುತ್ತಾರೆ. ಇಲ್ಲಿನ ಜನರ ಮುಂದೆ ಯಾರೂ ಸುಳ್ಳು ಹೇಳಲು ಪ್ರಯತ್ನಿಸುವುದಿಲ್ಲ. ಗೋರ್ ಪಂಚಾಯಿತಿಯ ತೀರ್ಮಾನಗಳೆಲ್ಲಾ ಶ್ರೀ ರಾಮನ ಹೆಸರಿನಲ್ಲಿ, ನ್ಯಾಯ ಸಮ್ಮತವು, ನಿಷ್ಪಕ್ಷಪಾತವೂ ಆಗಿರುತ್ತದೆ ಎಂಬುದರ ಎಲ್ಲರ ನಂಬಿಕೆ.

**೪.೫. ನ್ಯಾಯಪಂಚಾಯ್ತಿ – ನ್ಯಾಯ ನಿರ್ಣಯಗಳು**

**ಪಂಚಾಯಿತಿಯ ಮುಖ್ಯ ಕಾರ್ಯಗಳು**

ಗೋರ್ ಅಥವಾ ನ್ಯಾಯ ಪಂಚಾಯತಿಯ ಮುಖ್ಯ ಕಾರ್ಯಗಳು ಈ ಕೆಳಗಿನಂತಿವೆ:

- ತಾಂಡದ ಪರಿಮಿತಿಯಲ್ಲಿಯೇ ಉಂಟಾಗುವ ಗಂಭೀರವಲ್ಲದ ಸಣ್ಣಪುಟ್ಟ ವ್ಯಾಜ್ಯಗಳನ್ನು ಬಗೆಹರಿಸಲು ತಾಂಡಾದ ನ್ಯಾಯ ಮಂಡಳಿಯಾಗಿ ಕಾರ್ಯನಿರ್ವಹಿಸುವುದು.
- ಜನನ, ಮರಣ, ವಿವಾಹ, ಪತಿ–ಪತ್ನಿ ಕಲಹ ಮತ್ತಿತರ ಅಂಶಗಳ ಬಗ್ಗೆ ಚರ್ಚಿಸುವುದು.
- ಕೌಟುಂಬಿಕ ವಿಷಯ, ಇವುಗಳಲ್ಲಿ ಉದ್ಭವಿಸುವ ಕಲಹಗಳ ಬಗ್ಗೆ ಚರ್ಚೆ.
- ಒಳಪಂಗಡ ಅಥವಾ ಜಾತಿಯಲ್ಲಿ ಉಂಟಾಗುವ ಕಲಹಗಳನ್ನು ಪರಿಹರಿಸುತ್ತದೆ.
- ತಾಂಡದಲ್ಲಿ ಉಂಟಾಗುವ ಕಳ್ಳತನ, ಅಪರಾದ ಮತ್ತಿತರ ದಾರಿತಪ್ಪಿದ ವರ್ತನೆಗಳ ಬಗ್ಗೆಯೂ ನಿರ್ಣಯ ಕೈಗೊಳ್ಳುತ್ತದೆ.
- ತಾಂಡಾದ ನೀತಿ, ನಿಯಮಗಳನ್ನು ಮೀರಿದವರಿಗೆ ದಂಡ ವಿಧಿಸುತ್ತದೆ.

## ನ್ಯಾಯತೀರ್ಪು

ಸಭೆಯಲ್ಲಿ ತೀರ್ಪನ್ನು ಕೈಗೊಳ್ಳುವಲ್ಲಿ ಲಂಬಾಣಿಗಳು ಬಹಳ ಸಮರ್ಥರು ಇವರ ಸಮುದಾಯಗಳಲ್ಲಿ ಕಠಿಣವಾದ ಕಟ್ಟಳೆಗಳಿರುತ್ತವೆ. ಪ್ರತಿಯೊಬ್ಬರು ನಿಬಂಧನೆಗಳಿಗೆ ಒಳಗಾಗಿರುವುದರಿಂದ ಪರಸ್ಪರ ಸಹಾಯ-ಸಹಕಾರ ಸಾಧ್ಯವಾಗಿದೆ. ಎಲ್ಲಾ ಪ್ರಮುಖ ನಿರ್ಣಯ, ನಿರ್ಧಾರಗಳು ಮತ್ತಿತರ ಪ್ರಕರಣಗಳಲ್ಲಿ ತಾಂಡದ ನಾಯಕನೇ ಅಪ್ರತಿಮ ಮತ್ತು ಹಿರಿಯ ವ್ಯಕ್ತಿ, ಅಂದರೆ ತಾಂಡದ ಕಿರಿಯರಿಗೆ ಯಾವ ಪ್ರಾಮುಖ್ಯತೆ ಮತ್ತು ಪರಿಗಣಿಸುವುದು ಇಲ್ಲ ಎಂಬ ಅರ್ಥವಲ್ಲ, ಅಪರೂಪಕ್ಕೆ ಸಮಸ್ಯೆ ಕಠಿಣವೆಂದು ತಿಳಿದಾಗ, ತಮ್ಮ ತಾಂಡದ ಅಕ್ಕಪಕ್ಕದ ತಾಂಡಗಳಲ್ಲಿ ಹೆಸರುವಾಸಿಯಾಗಿರುವ ನಾಯಕರು ಗಳನ್ನು ಕರೆಯಿಸಿಕೊಂಡು, ನ್ಯಾಯವನ್ನು ನಿರ್ಣಯಿಸುತ್ತಾರೆ. ಇಂತಹ ವಿಧಾನಕ್ಕೆ 'ಜೋಡಿಬಿಡುವುದು' ಎಂದು ಕರೆಯಲಾಗುತ್ತದೆ. ಸರಿಸುಮಾರು ಐದಾರು ತಾಂಡಗಳ ನಾಯಕರುಗಳಿಗೆ ಆಹ್ವಾನ ನೀಡಿ, ಕಠಿಣ ವಿಷಯವನ್ನು ತಿಳಿಸಿ. ಒಂದು ನಿಗಧಿತ ದಿನವನ್ನು ಸೂಚಿಸಿ ಸಭೆಯನ್ನು ನೆಡೆಸುತ್ತಾರೆ. ಆಹ್ವಾನಿಸಲ್ಪಟ್ಟ ನಾಯಕರುಗಳೊಂದಿಗೆ ಊರ ಪ್ರಮುಖರುಗಳು ಒಂದು ನಿರ್ಧಿಷ್ಟ ಸ್ಥಳದಲ್ಲಿ ಸಭೆ ಸೇರಿ ಸಮಸ್ಯೆಗಳನ್ನು ಚರ್ಚಿಸುತ್ತಾರೆ. ಈ ಸಂದರ್ಭದಲ್ಲಿ ಜನರೆಲ್ಲಾ ಸಭಾ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಯಾವುದೇ ಒಬ್ಬ ವ್ಯಕ್ತಿ ವಿಷಯದ ಬಗ್ಗೆ ಮಾತನಾಡಬಯಸಿದರೆ ಆತನು ಆಸೀನರಾಗಿರುವ ಹಿರಿಯರೆಲ್ಲರನ್ನೂ ಉದ್ದೇಶಿಸಿ ಮೊದಲು ಅಪ್ಪಣೆ ಪಡೆದುಕೊಳ್ಳಬೇಕು. ನಂತರ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸ ಬಹುದು. ಒಬ್ಬನು ಮಾತನಾಡುವ ಮಧ್ಯೆ ಬೇರಾರೂ ಮಾತನಾಡಕೂಡದು. ಹೀಗೆ ಮಾತನಾಡುವಾಗ ವಿಶೇಷ ರೀತಿಯ ತರ್ಕ ಒಗಟುಗಳ ರೂಪದಲ್ಲಿ ಪ್ರಸ್ತುತ ವಿಷಯದ ಮೇಲೆ ಬೆಳಕನ್ನು ಬೀರಲು ಪ್ರಯತ್ನಿಸುತ್ತಾರೆ. ಎಲ್ಲಾ ಹಂತದಲ್ಲಿ ವಿಷಯವನ್ನು ಚರ್ಚಿಸಿದ ನಂತರ ಹಾಲಿ ಕುಳಿತವರಲ್ಲಿ ಹೆಚ್ಚು ಅನುಭವಿಯೂ ಹಿರಿಯನೂ ಆದ ವ್ಯಕ್ತಿ ಕೊನೆಯಲ್ಲಿ ಸೂಕ್ತ ತೀರ್ಮಾನವನ್ನು ಕೂಡುವುದು.

ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿನ ಪಾರ್ವತಿಪುರ ತಾಂಡದ ವ್ಯಾಪ್ತಿಯಲ್ಲಿನ ಹಾಲ ನಾಯಕವಾದ ಶ್ರೀ ಬೊಪ್ಪೇನಾಯ್ಕರವರ ಜೊತೆ ಚರ್ಚೆ ಮಾಡಿದಾಗ ಅವರು ಹೇಳಿದ್ದು 'ಊರಿನ ಪಟೇಲ ಶ್ಯಾನುಭೋಗರಿಗೆ ತಾಂಡಾದ ಜನರು ಸೇವೆಯನ್ನು ಮಾಡ ಬೇಕಾಗಿತ್ತು, ಪ್ರತಿಯೊಂದು ಮನೆಯಿಂದ ಪ್ರತಿವರ್ಷ ಎರಡು ಎತ್ತಿನ ಗಾಡಿಯಷ್ಟು ಗೊಬ್ಬರವನ್ನು ಕೊಡಬೇಕಿತ್ತು. ಅವರ ಹೊಲಗಳನ್ನು ಉಳುಮೆ ಮಾಡುವುದು, ರಸ್ತೆ ಕೆಲಸಬಂದಾಗ ಉಚಿತವಾಗಿ ಮಾಡಿ ಹೋಗುವುದು ಮತ್ತು ಅವರ ಮನೆಗಳಲ್ಲಿ ಜೀತದಾಳುಗಳಾಗಿ

ದುಡಿಯುವುದು ಸಂಪ್ರದಾಯದಂತೆ ಆಗಿತ್ತು.' ಹೀಗೆ ಲಂಬಾಣಿ ತಾಂಡಾದ ಅಕ್ಕಪಕ್ಕದ ಊರಿನ ಜನರು ಹೆಚ್ಚು ಪ್ರಬಲವಾಗಿರುತ್ತಿದ್ದರು. ಯಾವುದೇ ಸಣ್ಣಪುಟ್ಟ ಜಗಳ ಬಂದಾಗ ಈ ಊರಿನ ಪಟೇಲ, ಶ್ಯಾನುಭೋಗರು ಕೊಡುವ ಶಿಕ್ಷೆಯನ್ನು ಒಪ್ಪಿಕೊಂಡು ತಪ್ಪದೆ ಪಾಲಿಸುತ್ತಿದ್ದರು. ಏಕೆಂದರೆ ಅವರು ಎಲ್ಲಾ ರೀತಿಯಲ್ಲಿ ಪ್ರಾಬಲ್ಯವನ್ನು ಹೊಂದಿದ್ದರು. ಆರ್ಥಿಕವಾಗಿ, ರಾಜಕೀಯವಾಗಿ, ಶೈಕ್ಷಣಿಕವಾಗಿ ಮುಂದುವರಿದಿದ್ದರು, ತಾಂಡಗಳಲ್ಲಿ ಅವರು ವಿರೋಧ ಮಾಡಿಕೊಂಡು ಬದುಕುವುದು ಕಷ್ಟವಾಗುತ್ತಿದೆ. ಆದ್ದರಿಂದ ಜಾತಿ ಪಂಚಾಯಿತಿಯು ಕೇವಲ ತಮ್ಮ ಕುಲದ ಆಂತರಿಕ ಸಮಸ್ಯೆಗಳಿಗೆ ಮಾತ್ರವೇ ಸೀಮಿತವಾಗಿತ್ತು ಎಂದು ಹೇಳಬಹುದು.

**ಎಂ. ಚಿದಾನಂದಮೂರ್ತಿ ಅವರು ತಮ್ಮ ಕೃತಿಯಾದ "ಪ್ರಾಚೀನ ಕರ್ನಾಟಕದಲ್ಲಿ ದಿವ್ಯ ಮತ್ತು ಮಂಡಿ":** ಇಲ್ಲಿ ದಿವ್ಯಗಳ ಪದ್ಧತಿಯ ಬಗ್ಗೆ ವಿಶ್ಲೇಷಿಸಲಾಗಿದೆ. ಒಂದು ಕಾಲದಲ್ಲಿ ದಿವ್ಯಗಳ ಪದ್ಧತಿಯು ಬಂಜಾರ್ ಸಮುದಾಯದಲ್ಲಿತ್ತು. ಇಬ್ಬರ ಮಧ್ಯೆ ವಿವಾದವು ಜರುಗಿದರೆ ಆ ವಿವಾದದ ಪರಿಹಾರಕ್ಕೆ ಮಾನವನ ಸಾಕ್ಷಿ ಯಾವುದು ಸಹಾಯಕ್ಕೆ ಬರದಂತಿದ್ದರೆ ಆಗ ದೈವದ ಸಹಾಯವನ್ನು ಪಡೆಯುವುದಕ್ಕೆ ದಿವ್ಯ ಎಂದು ಹೆಸರು. (Trail by order) ಒಬ್ಬ ವ್ಯಕ್ತಿಯ ಮೇಲೆ ಆರೋಪವಿದ್ದರೆ ಅವನು ತಾನು ನಿರ್ದೋಷಿಯೆಂದು ಕಾದ ಕಬ್ಬಿಣವನ್ನು ಕೈಯಲ್ಲಿ ಹಿಡಿಯಬೇಕಿತ್ತು. ಕುದಿಯುವ ಎಣ್ಣೆಯಲ್ಲಿ ಕೈಯನ್ನು ಅದ್ದಬೇಕಾಗಿತ್ತು. ಅದರಿಂದ ಅವನಿಗೆ ಯಾವ ತೊಂದರೆ ಆಗದಿದ್ದರೆ ಅವನು ನಿರ್ದೋಷಿಯೆಂದು ಭಗವಂತನೇ ತೋರಿಸಿಕೊಂಡಿದ್ದಾನೆಂದು ಜನ ನಂಬುತ್ತಿದ್ದರು. ಇತ್ತೀಚೆಗೆ ದಿವ್ಯಗಳ ಪದ್ಧತಿ ಬಂಜಾರ್ ಸಮುದಾಯದಲ್ಲಿ ಸಂಪೂರ್ಣವಾಗಿ ನಿಂತು ಹೋಗಿದೆ ಎಂದು ವಿಶ್ಲೇಷಿಸಿದ್ದಾರೆ.

**ಡಾ. ಪಿ.ಕೆ.ಖಂಡೋಬಾ "ಕರ್ನಾಟಕ ಲಂಬಾಣಿಗಳು ಒಂದು ಸಾಂಸ್ಕೃತಿಕ ಅಧ್ಯಯನ"** ಎಂಬ ಕೃತಿಯಲ್ಲಿ ಪುರುಷ ಪ್ರಧಾನ ಸಮಾಜದ ಬಗ್ಗೆ ವಿಶ್ಲೇಷಿಸಿದ್ದಾರೆ. ಲಂಬಾಣಿ ಸಮಾಜದಲ್ಲಿ ಹೆಚ್ಚಾಗಿ ಪಿತೃಪ್ರಧಾನ ಕುಟುಂಬಗಳಿದ್ದರೂ ಮಾತೃಪ್ರಧಾನ ಸ್ಥಾನಮಾನಗಳು ಗೌರವಯುತವಾಗಿರುತ್ತದೆ. ಇವರಲ್ಲಿ ಸಮಾಜದ ಬಹುಮುಖ್ಯವಾದ ಸ್ಥಾನಗಳಲ್ಲಿ ಪುರುಷನನ್ನೇ ಕಾಣಬಹುದಾಗಿದೆ. ಕುಟುಂಬದ ಪ್ರತಿಯೊಂದು ಆಗುಹೋಗುಗಳನ್ನು ಪುರುಷನೇ ನಿರ್ವಹಿಸುತ್ತಾರೆ. ಹೀಗಾಗಿ ಈ ಸಮಾಜದಲ್ಲಿ ಮಹಿಳೆಯರು ಪುರುಷರಿಗೆ ಅದೀನರಾಗಿ ಬಾಳುತ್ತಾರೆ. ತಂದೆಯ ಆಸ್ತಿಗೆ, ವಂಶದ ಕೀರ್ತಿಗೆ ಕುಟುಂಬದ ಹಿರಿಯ ಮಗನೇ ಹಕ್ಕುದಾರ. ಈ ಬಗೆಯಾದ ಹಕ್ಕು ತಂದೆಯಿಂದ ಮಗನಿಗೆ ಹಸ್ತಾಂತರವಾಗುತ್ತದೆ. ಕುಟುಂಬದಲ್ಲಿ ತಂದೆಯ

ನಂತರ ಹಿರಿಯ ಮಗನಿಗೆ ಹೆಚ್ಚಿನ ಜವಾಬ್ದಾರಿ ಇರುತ್ತದೆ. ತಂದೆಗೆ ವಯಸ್ಸಾದಲ್ಲಿ ಅಥವಾ ಕುಟುಂಬವನ್ನು ನೋಡಿಕೊಳ್ಳುವಲ್ಲಿ ತಂದೆಯು ಅಸಮರ್ಥ ನಾಗಿದ್ದರೆ ಹಿರಿಯ ಮಗನು ಕುಟುಂಬದ ಎಲ್ಲಾ ಆಗುಹೋಗುಗಳನ್ನು ನೋಡಿಕೊಳ್ಳ ಬೇಕಾಗುತ್ತದೆ. ಹೀಗೆ ಪುರುಷನ ಪ್ರಮುಖ ಪಾತ್ರವನ್ನು ವಿಶ್ಲೇಷಿಸಲಾಗಿದೆ.

**ಡಾ. ಕೃಷ್ಣಮೂರ್ತಿ: "ಕ್ರೈಮ್ಸ್ ಅಂಡ್ ಕಸ್ಟಂ ಅಮಾಂಗ್ ದಿ ಲಂಬಾಣೀಸ್ ಇನ್ ಚಿತ್ರದುರ್ಗ ಡಿಸ್ಟ್ರಿಕ್"** ಈ ಪ್ರಬಂಧದಲ್ಲಿ ತಾಂಡಾಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ಆರ್ಥಿಕ ಮುಗ್ಗಟ್ಟು ಕಡು ದಾರಿದ್ರದಿಂದ ಬೆಂದ ಕೆಲವು ಜನ ಅಲ್ಲಲ್ಲಿ ಅಪಾಯಕಾರಿ ಚಟುವಟಿಕೆಗಳಲ್ಲಿ (ಬಟ್ಟೆ ಸೆರೆ) ತೊಡಗಿದ ಸಂದರ್ಭವೂ ಉಂಟು ಅದನ್ನು ಗುರ್ತಿಸಿದ ತಾಂಡಾದ ಹಿರಿಯರು ಅಂತಹವರನ್ನು ಕರೆದು ಚೀಮಾರಿ ಹಾಕಿದ್ದು ಉಂಟೆಂದು ತಿಳಿಯುತ್ತದೆ.ಈ ಸಮುದಾಯದವರು ಅನೇಕ ಅಪವಾದಗಳು ಆಪಾದನೆ ಹೊತ್ತು ಅದರ ಪರಿಣಾಮವಾಗಿ ೧೮೭೧ರಲ್ಲಿ ಬುಡಕಟ್ಟು ಜನಾಂಗಗಳಿಗೆ ಸಂಬಂಧಪಟ್ಟ ಅಪರಾಧಿ ಕಾನೂನು(ಕ್ರಿಮಿನಲ್ ಟ್ರೈಬ್ಸ್ ಆಕ್ಟ್) ಜಾರಿಗೊಂಡಾಗ ಇವರು ಅನೇಕ ಸಂಕಷ್ಟಗಳನ್ನು ಎದುರಿಸಬೇಕಾಗಿತ್ತು. ಬ್ರಿಟೀಷ್ ಸರ್ಕಾರ ಹಾಗೂ ಸಂಸ್ಥಾನ ಸರ್ಕಾರಗಳು ಈ ಕಾನೂನುಗಳನ್ನು ಬಹು ಕಟ್ಟುನಿಟ್ಟಾಗಿ ಜಾರಿಗೆ ತಂದವು. ಒಂದು ಕಾಲಕ್ಕೆ ಶಾಂತ ಸಮಾಜವೆಂದು ಪ್ರಸಿದ್ಧಿಯಾದ ಈ ಸಮಾಜದವರನ್ನು ಅಪರಾಧಿಗಳೆಂದು ಜನ ಕರೆಯುವಂತಾಯಿತು. ಈ ಹೀನಸ್ಥಿತಿಯಿಂದ ಚೇತರಿಸಿಕೊಳ್ಳಲು ಲಂಬಾಣಿಗರಿಗೆ ಬಹುಕಾಲವೇ ಬೇಕಾಯಿತು. ದೇಶದ ಸ್ವತಂತ್ರ್ಯಕ್ಕಾಗಿ ಹೋರಾಡಿ ಮಡಿದ ಅನೇಕ ಜನ ಯುದ್ಧ ವೀರರಲ್ಲಿ ಲಂಬಾಣಿಗರು ಸೇರಿರುತ್ತಾರೆ. ಇಂತಹ ಲಂಬಾಣಿ ಜನಾಂಗವನ್ನು ಬ್ರಿಟೀಷ್ ಸರ್ಕಾರ ಅಪರಾಧಿ ಬುಡಕಟ್ಟಿನವರು ಎಂದು ಪರಿಗಣಿಸಿ ಅಲಕ್ಷಿಸಿತು. ಇದರಿಂದ ಅವರ ಸಾಮಾಜಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿ ಕುಂಠಿತವಾಯಿತು. ಇದರಿಂದ ಅನೇಕ ಲಂಬಾಣಿಗರು ಇತರರಿಂದ ಪ್ರತ್ಯೇಕವಾಗಿ ವಾಸಿಸುತ್ತಾ ಕ್ರಮೇಣವಾಗಿ ತಮ್ಮ ತಾಂಡಾಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ತಾಂಡ್ಯಕ್ಕೆ ಸಾಮಾನ್ಯವಾಗಿ ಪ್ರತ್ಯೇಕವಾದ ಹೆಸರು ಇರುವುದಿಲ್ಲ. ಆ ತಾಂಡದ ಹತ್ತಿರವಿರುವ ಹಳ್ಳಿಯ ಹೆಸರೇ ಆ ತಾಂಡಕ್ಕೂ ಇರುತ್ತದೆ. ರಾಜನಾಳ್ ಹಳ್ಳಿಯ ಸಮೀಪದಲ್ಲಿದ್ದರೆ ಆ ತಾಂಡಕ್ಕೆ ರಾಜನಾಳ್ ತಾಂಡ ಎಂದು ನೀತಿಗೆರೆಯ ಬಳಿ ಇರುವ ತಾಂಡಕ್ಕೆ ನೀತಿಗೆರೆ ತಾಂಡ ಎಂದು ಕರೆಯುತ್ತಾರೆ. ಇನ್ನೂ ಕೆಲವು ಕಡೆ ತಾಂಡಾದ ನಾಯಕನ ಹೆಸರನ್ನೇ ಆ ತಾಂಡಕ್ಕೆ ಇಟ್ಟುಕೊಂಡಿರುತ್ತಾರೆ. ಉದಾ: ಬಾಲನಾಯಕ ತಾಂಡದ ನಾಯಕನಾಗಿರುತ್ತಾನೆ. ಆ ತಾಂಡದ ಹೆಸರೂ ಸಹಾ ಬಾಲನಾಯಕ ತಾಂಡ ಎಂದು ಕರೆಯುತ್ತಾರೆ.

ಬಂಜಾರ ಸಮುದಾಯದಲ್ಲಿ ಚುನಾವಣಾ ಆಸಕ್ತಿ/ಮತದಾನ ಪದ್ಧತಿ, ಸಂವಿಧಾನಬದ್ಧ ಹಕ್ಕುಗಳಲ್ಲಿ ಮತಚಲಾವಣಾ ಹಕ್ಕು ಒಂದು ಪ್ರಮುಖ ಹಕ್ಕಾಗಿದೆ. ಪ್ರತಿ ಭಾರತೀಯ ವಯಸ್ಕನು ಚುನಾವಣಾ ಸಮಯದಲ್ಲಿ ತನ್ನ ಅಮೂಲ್ಯ ಮತವನ್ನು ಚಲಾಯಿಸುವ ಮೂಲಕ ತನ್ನ ಹಕ್ಕನ್ನು ಪ್ರತಿಪಾದಿಸುತ್ತಾನೆ. ಇದೇ ಪ್ರಕ್ರಿಯೆಯನ್ನು ಬಂಜಾರರ ಸಮುದಾಯ ದಲ್ಲೂ ಕಾಣಬಹುದಾಗಿದೆ. ಇವರೂ ಮತದಾನವು ನಮ್ಮ ಹಕ್ಕು ಎಂದು ತಿಳಿದು ಚಲಾಯಿಸುತ್ತಾರೆ. ಈ ಹಿನ್ನಲೆಯಲ್ಲಿ ಸಂದರ್ಶನಕ್ಕೆ ಒಳಪಟ್ಟು ಒಟ್ಟು ೨೦೦ ಮಾಹಿತಿದಾರರಲ್ಲಿ ೧೮ ಜನರನ್ನು ಹೊರತುಪಡಿಸಿ ಉಳಿದೆಲ್ಲರೂ ತಮ್ಮ ಮತವನ್ನು ಚಲಾಯಿಸಿದ್ದಾರೆ. ಈ ೧೮ ಜನರು ಕಳೆದ ಚುನಾವಣೆ ವೇಳೆಗೆ ಅವರಿಗೆ ೧೮ ವರ್ಷ ತುಂಬಿಲ್ಲದಿದ್ದ ಕಾರಣ ಅವರು ಮತಚಲಾಯಿಸಲು ಸಾಧ್ಯವಾಗಿರಲಿಲ್ಲ. ಉಳಿದೆಲ್ಲರೂ ೧೮ ಜನರನ್ನು ಒಳಗೊಂಡಂತೆ ಬಂಜಾರ ಸಮುದಾಯದಲ್ಲಿ ಆಯ್ಕೆ ಮಾಡಿಕೊಂಡಿ ರುವುದೆಲ್ಲದೆ ತಿಳಿದಿರುವುದೇನೆಂದರೆ, ಮತ ಚಲಾಯಿಸುವುದು ನಮ್ಮ ಹಕ್ಕು, ಅದನ್ನು ಎಲ್ಲರಿಗೂ ಕಳೆದುಕೊಳ್ಳಬಾರದು. ನಮ್ಮ ಓಟಿನಿಂದ ಒಬ್ಬ ಒಳ್ಳೆಯ ನಾಯಕನನ್ನು ಆರಿಸಿ ತಮ್ಮ ತಾಂಡಗಳಿಗೆ, ಗ್ರಾಮಗಳಿಗೆ ಉತ್ತಮ ಸೌಲಭ್ಯ ಕಲ್ಪಿಸಿಕೊಳ್ಳುವುದರ ಜೊತೆಗೆ ದೇಶದ ಉನ್ನತಿಯನ್ನು ಕಾಪಾಡಲು ನೆರವಾಗಬೇಕು ಎಂದು ತಿಳಿದ್ದಾರೆ.

ಬಡತನದ ರೇಖೆಗಿಂತ ಕಡಿಮೆ ಇದ್ದ, ಗರಿಷ್ಠ ಅನಕ್ಷರಸ್ಥರಿಂದ ಕೂಡಿರುವ ಬಂಜಾರರು ರಾಜಕೀಯ ಕ್ಷೇತ್ರದಲ್ಲಿ ಇಷ್ಟೊಂದು ಒಳ್ಳೆಯ ರೀತಿಯಲ್ಲಿ ಪರಿವರ್ತನೆಗೊಳ್ಳಲು ಏನು ಕಾರಣವಿರಬಹುದು. ಇತರ ಸಮುದಾಯದಂತೆ ತಾವೂ ಮುಂದುವರಿಯಬೇಕೆಂಬ ಹಂಬಲವೇ, ಬಡತನ ರೇಖೆಯಿಂದ ಮೇಲೆ ಬರುವ ಹಂಬಲವೇ ಇಲ್ಲಾ ರಾಜಕೀಯ ಪ್ರತಿನಿಧಿಗಳು ನೀಡುವ ಹಣ–ವಸ್ತು ಇತ್ಯಾದಿಗಳ ಅಮಿಷವೇ, ಹೀಗೆ ಇತರೆ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮಾಹಿತಿದಾರರನ್ನು ಅಧ್ಯಯನದಲ್ಲಿ ಪ್ರಶ್ನೆ ಮಾಡಲಾಗಿದ್ದು, ಅವರಿಂದ ನಮಗೆ ಬಂದಿರುವ ಉತ್ತರವೇನೆಂದರೆ, ನಾವು ಯಾವ ಬಲವಂತಕ್ಕೂ, ಬಲಿ ಯಾಗದೇ ಯಾವುದೇ ಆಮಿಷಕ್ಕೂ ಒಳಗಾಗದೇ ತಮ್ಮ ಹಕ್ಕನ್ನು ಚಲಾಯಿಸಿ ಚುನಾವಣೆಗಳಲ್ಲಿ ಮತ ಹಾಕುವ ಹಾಗೂ ಒಳ್ಳೆಯ ನಾಯಕನನ್ನು ಆರಿಸಿ ಸಮಾಜಸೇವೆ ಮಾಡುವಂತಹ ಗುರುತರ ಜವಾಬ್ದಾರಿಗೆ ಅವರನ್ನು ಪ್ರೇರೇಪಿಸುವುದೇ ನಮ್ಮ ಮೂಲ ಉದ್ದೇಶ ಎನ್ನುತ್ತಾರೆ.

**ಮತದಾನದಿಂದಾಗುವ ಪ್ರಯೋಜನಗಳು ಮತ್ತು ಸರ್ಕಾರದ ಅವಕಾಶಗಳು**

ಬಂಜಾರ ಸಮುದಾಯಕ್ಕೆ ಚುನಾವಣೆಗಳಿಂದ ಯಾವುದೇ ಅನುಕೂಲ ಇದೆಯೇ ಅಥವಾ ಇಲ್ಲವೋ ಎಂಬುದು ಒಂದು ಗಂಭೀರ ವಿಷಯ. ಈ ಹಿನ್ನಲೆಯಲ್ಲಿ ಮೂರು ಜಿಲ್ಲೆಗಳಲ್ಲಿನ ಸಂದರ್ಶಿಕರು ಹೇಳುವಂತೆ ಚುನಾವಣೆಗಳಿಂದ ಪ್ರಯೋಜನವಿಲ್ಲ ಎಂದು ಬಹುತೇಕ ಮುಖಂಡರು ಜನಸಾಮಾನ್ಯರು ತಿಳಿಸಿದ್ದಾರೆ. ಅಂದರೆ ಒಟ್ಟು ೧೫ ತಾಂಡಗಳ ಮುಖಂಡರುಗಳು ೨೦೦ ಸಂದರ್ಶನಕ್ಕೆ ಆಯ್ಕೆಯಾಗಿರುವವರಲ್ಲಿ ಗಂಡಸರು ೧೨೦(ಶೇ.೬೦) ಹಾಗೂ ಹೆಂಗಸರು ೮೦ (ಶೇ.೪೦) ಇನ್ನೂ ಉಳಿದ ತಾಂಡಾದ ಜನರು, ಸಾಂಪ್ರದಾಯಿಕ ಮುಖಂಡರು ಮತ್ತು ಜನಸಾಮಾನ್ಯರು ಚುನಾವಣೆಗಳಿಂದ ಪ್ರಯೋಜನವಿದೆ ಎಂದು ತಿಳಿಸಿದ್ದಾರೆ. ಚುನಾವಣಾ ಪ್ರಚಾರ ಇಲ್ಲವೆ ಸಭೆಗಳಲ್ಲಿ ಭಾಗವಹಿಸಿರುವುದಾಗಿ ಹೇಳಿರುವ ಮಾಹಿತಿದಾರರಲ್ಲಿ ಗರಿಷ್ಠ ಮಧ್ಯಮ ಗುಂಪಿನ ಜನರು ಒಟ್ಟು ೧೪೦ (ಶೇ. ೭೦) ಇವರಲ್ಲಿ ೯೦ ಜನರು ಪುರುಷರು ೫೦ ಜನ ಮಹಿಳೆಯರು. ಇವರು ತಮ್ಮ ತಾಂಡಗಳಿಗೆ ಮೂಲಭೂತ ಸೌಲಭ್ಯ ಒದಗಿಸುವಂತೆ ಒತ್ತಾಯಿಸಲು ಚುನಾವಣಾ ಪ್ರಚಾರ ಸಭೆಗಳಲ್ಲಿ ಭಾಗವಹಿಸಿರುವುದಾಗಿ ಒಪ್ಪಿಕೊಂಡಿರುತ್ತಾರೆ. ಉಳಿದ ೬೦ ಜನರು ಇವರಲ್ಲಿ ಪುರುಷರು ೩೮ ಸ್ತ್ರೀಯರು ೨೨ ಇವರುಗಳು ಯಾವುದೇ ಪ್ರಚಾರಗಳಿಗೆ ಸಭೆಸಮಾರಂಭಗಳಿಗೆ ಹಾಜರಾಗಲು ಆಸಕ್ತಿ ತೋರುವುದಿಲ್ಲಾ ಮತ್ತು ಸಾಕಷ್ಟು ಜಿಗುಪ್ಸೆ, ನಿರಾಶೆ ಮತ್ತು ಅಧೈರ್ಯ ದಿಂದ ಹಿಂದೆ ಸರಿಯುತ್ತಾರೆ ಎಂಬುದು ತಿಳಿದು ಬರುತ್ತದೆ. ರಾಜಕೀಯ ಕೇವಲ ಗಂಡಸರಿಗೆ ಸೀಮಿತವಾಗಿರದೆ ಮಹಿಳೆಯರು ಸಹ ರಾಜಕೀಯದಲ್ಲಿ ಪಾಲ್ಗೊಳ್ಳಬಹುದು. ಆದರೆ ಬಂಜಾರರ ತಾಂಡಗಳ ಸಾಂಪ್ರದಾಯಿಕ ಮುಖಂಡರು ಮತ್ತು ಜನಸಾಮಾನ್ಯರು ಕೆಲವೆಡೆಗಳಲ್ಲಿ ಅಭಿಪ್ರಾಯಕ್ಕೆ ವಿರುದ್ಧವಾಗಿರುತ್ತಾರೆ.

**ಗೋರ್ ಪಂಚಾಯಿತಿ ನೀಡುವ ಶಿಕ್ಷೆಗಳು**

ಗೋರ್ ಪಂಚಾಯಿತಿಗಳು ತಪಿಸ್ಥರ ಮೇಲೆ ಅವರು ಮಾಡಿದ ತಪ್ಪುಗಳ ಸ್ವರೂಪವನ್ನು ಆಧಿರಿಸಿ ನಾಲ್ಕು ರೀತಿಯಲ್ಲಿ ಶಿಕ್ಷೆಯ ರೀತಿಯಲ್ಲಿ ದಂಡವನ್ನು ವಿಧಿಸಲಾಗುತ್ತಿದೆ. ಅವುಗಳೆಂದರೆ,

- ಹಣದ ರೂಪದ ದಂಡ
- ಪಂಚಾಯಿತಿದಾರರ ಮುಂದೆ ಕ್ಷಮೆ ಕೇಳುವುದು
- ದೇವರ ಮುಂದೆ ಪ್ರಮಾಣ ಮಾಡಿಸುವುದು
- ಸಾಮಾಜಿಕ ಬಹಿಷ್ಕಾರ

ಮೇಲಿನ ಜೊತೆಗೆ ಘೋರವಾದ ತಪ್ಪು ಮಾಡಿದವರಿಗೆ ಕಠೋರವಾದ ಶಿಕ್ಷೆ ನೀಡುತ್ತಾರೆ. ಇಡೀ ತಾಂಡದಿಂದ ಹೊರಹಾಕುವುದು. ಈ ರೀತಿ ಹೊರಹಾಕಿದವರಿಗೆ ತಾಂಡಾದಲ್ಲಿ ಯಾರೂ ಬೆಂಕಿ, ನೀರು ಕೊಡುವುದಿಲ್ಲ. ಅವರೊಂದಿಗೆ ಯಾರು ವ್ಯವಹರಿಸುವುದಿಲ್ಲ. ಅಲ್ಲದೆ ಯಾವುದೇ ಮದುವೆ, ಸಭೆ–ಸಮಾರಂಭ ಇತ್ಯಾದಿ ಕಾರ್ಯಕ್ರಮಗಳಿಗೆ ಪ್ರವೇಶ ಇರುವುದಿಲ್ಲ. ಆದ್ದರಿಂದ ಈ ತಾಂಡದ ಪ್ರತಿಯೊಬ್ಬರೂ ನ್ಯಾಯಕ್ಕೆ ತಲೆಬಾಗಿ ನಡೆದು ಕೊಳ್ಳುತ್ತಾರೆ. ಕಾಲಾಂತರದಲ್ಲಿ ಬಂಜಾರ ಸಮುದಾಯಗಳು ಗೋರ್ ಪಂಚಾಯತಿ ಲೆಕ್ಕಿಸದೆ ಪಟ್ಟಣಗಳಲ್ಲಿನ ಕೋರ್ಟ್, ಕಛೇರಿ, ಪೋಲೀಸ್ ಠಾಣೆ ಕಡೆ ಹೋಗಿ ರಾಜಿ ಮಾಡಿಸಿಕೊಂಡು ಹಾಕಿರುವ ಕೇಸನ್ನು ವಾಪಾಸ್ಸು ಪಡೆಯುತ್ತಾರೆ.

❖ ❖ ❖

ಅಧ್ಯಾಯ ಐದು

# ಭಾಷೆ, ಸಾಹಿತ್ಯ ಮತ್ತು ಕಲೆಗಳು

೫.೧. ಬಂಜಾರ ಸಮುದಾಯದ ಭಾಷೆ

೫.೨. ಬಂಜಾರ ಸಾಹಿತ್ಯ ಮತ್ತು ಜಾನಪದ ಕಲೆಗಳು

## ಅಧ್ಯಾಯ ಐದು

# ಭಾಷೆ, ಸಾಹಿತ್ಯ ಮತ್ತು ಕಲೆಗಳು

ಶತಮಾನಗಳವರೆಗೂ ಬುಡಕಟ್ಟು ಜನಾಂಗಗಳು ಬಾಹ್ಯ ಜಗತ್ತಿನ ಸಂಪರ್ಕವಿಲ್ಲದೆ ತಮ್ಮದೇ ಆದ ಪ್ರತ್ಯೇಕ ಪ್ರಪಂಚದಲ್ಲಿಯೇ ವಾಸಿಸುತ್ತಿದ್ದರು. ಕಾಲ ಸರಿದಂತೆ ಜಗತ್ತಿನ ಎಲ್ಲೆಡೆಗಳಲ್ಲೂ ಬುಡಕಟ್ಟುಗಳು ತಮಗೆ ಅವಶ್ಯಕತೆಯಿರಲಿ, ಇಲ್ಲದಿರಲಿ ಆಧುನಿಕ ಜಗತ್ತಿನತ್ತ ನೋಡುವುದು, ನಾಗರಿಕತೆಯತ್ತ ಸಾಗುತ್ತಿರುವುದು ಅನಿವಾರ್ಯವಾಯಿತು. ಡಿ.ಎನ್. ಮಜುಂದಾರ್[೧] ಅವರ ಅಭಿಪ್ರಾಯದಂತೆ ನಾಗರೀಕ ಸಮಾಜಗಳ ಮುಖವನ್ನೇ ನೋಡದೆ ಮತ್ತು ನಾಗರೀಕರ ಅಡ್ಡಿ–ಆತಂಕಗಳಿಂದ ಬಾಧಿತರಾಗದೆ ಬುಡಕಟ್ಟುಗಳು ಓಡಾಡಿಕೊಂಡಿರ ಬಹುದಾದ ಕಾಲವೊಂದಿತ್ತು. ರಕ್ಷಿತವಾದ ಆಶ್ರಯಧಾಮಗಳಂತಿದ್ದ ಗುಡ್ಡ–ಗಾಡುಗಳಲ್ಲಿ, ಕಾಡು–ಮೇಡುಗಳಲ್ಲಿ ಓಡಾಡಿಕೊಂಡು, ಹಣ್ಣು–ಹಂಪಲುಗಳನ್ನು ತಿಂದುಕೊಂಡು, ತಮ್ಮ ಸೊಂಟದ ಸುತ್ತ ಸೊಪ್ಪಿನ ಮಾಲೆ ಸುತ್ತಿಕೊಂಡು ಕುಣಿದಾಡುತ್ತಿದ್ದ ಹಲವಾರು ಬುಡಕಟ್ಟು ಸಮೂಹಗಳು ಭಾರತದಲ್ಲಿದ್ದವು. ಆದರೆ ಇಂದು ಬಹುತೇಕ ಸಮುದಾಯಗಳು ನಾಗರಿಕ ಸಮುದಾಯಗಳ ಸಂಪರ್ಕಕ್ಕೆ ಬಂದಿವೆ. ಅಂತಹ ನೆರೆಹೊರೆ ಸಮುದಾಯದ ಜನರ ನಡತೆಯ ಲಕ್ಷಣಗಳನ್ನು ಕಲಿತುಕೊಂಡಿವೆ, ಅಂತಹ ಕೆಲವು ಸಮೂಹಗಳಂತೂ ಇನ್ನಿತರ

---

೧. ಡಿ.ಎನ್.ಮಜುಂದಾರ್,

ಪ್ರದೇಶಗಳಲ್ಲಿ ಶತಮಾನದಷ್ಟು ಸಮಯದಲ್ಲಿ ಉಂಟಾಗಬಹು ದಾದಂತಹ ಪ್ರಗತಿಯನ್ನ ಕೆಲವೇ ವರ್ಷಗಳಲ್ಲಿ ಸಾಧಿಸಿವೆ ಇಂತಹ ಬುಡಕಟ್ಟು ಸಮುದಾಯಗಳಲ್ಲಿ ಒಂದಾದ ಬಂಜಾರ ಬುಡಕಟ್ಟಿನಲ್ಲಿರುವಂತಹ ಸಂಪದ್ಭರಿತ ಭಾಷೆ, ಸಾಹಿತ್ಯ ಮತ್ತು ಕಲೆಗಳನ್ನು ಕುರಿತು ಇಲ್ಲಿ ಅಧ್ಯಯನ ನಡೆಸಲಾಗಿದೆ.

ಡಾ. ಡಿ.ಬಿ.ನಾಯಕ್[೨] ಅವರು ಲಂಬಾಣಿಗಳ ಜಾನಪದ ಸಾಹಿತ್ಯ ಎಂಬ ಕೃತಿಯಲ್ಲಿ ಲಂಬಾಣಿ ಭಾಷೆಯ ಬಗ್ಗೆ ವಿವರಣೆಯನ್ನು ನೀಡಿದ್ದಾರೆ. ಭಾಷೆಯ ಮಾನವನಿಗೆ ಲಭ್ಯ ವಾಗಿರುವ ಅತ್ಯಮೂಲ್ಯವಾದ ಸಂಪತ್ತು ಧ್ವನಿ ಸಂಕೇತಗಳ ವ್ಯವಸ್ಥೆಯಿಂದ ರೂಪುಗೊಂಡಿರುವ ಅದು ಸಮಾಜ ಜೀವಿಯಾಗಿರುವ ಮಾನವನಿಗೆ ಅನಿವಾರ್ಯವಾದ ವ್ಯವಹಾರ ಸಂಪರ್ಕ ಸಾಧನೆ. ಇಂದು ಜಗತ್ತಿನಲ್ಲಿ ಸುಮಾರು ೪೦೦೦ಕ್ಕೆ ಹೆಚ್ಚಿನ ಭಾಷೆಗಳಿವೆ. ಆದರೆ ಎಲ್ಲಾ ಭಾಷೆಗಳಿಗೂ ಲಿಪಿ ವ್ಯವಸ್ಥೆ ಸಾಧ್ಯವಾಗಿಲ್ಲ. ಲಿಪಿಯಿಲ್ಲದ ಅನೇಕ ಬುಡಕಟ್ಟಿನ ಭಾಷೆಗಳು ಆಯಾ ಭಾಷಿಕರೊಡನೆ ಶತಮಾನದವರೆಗೂ ಬೆಳೆದುಕೊಂಡು ಬಂದಿವೆ.

### ೫.೧. ಬಂಜಾರ ಸಮುದಾಯದ ಭಾಷೆ

ಲಂಬಾಣಿ ಭಾಷೆಗೆ ಯಾವುದೇ ಸ್ವತಂತ್ರವಾದ ಇತಿಹಾಸವಿಲ್ಲ; ಇದು ಆಡುಭಾಷೆಯಾಗಿದೆ. ಲಂಬಾಣಿ ಸಮಾಜವು ಮೂಲತಃ ಸಂಚಾರಿ ಸಮುದಾಯವಾಗಿದ್ದರಿಂದ ಇವರು ಬಹಳ ಹಿಂದುಳಿದವರಾಗಿದ್ದಾರೆ. ಹೀಗಾಗಿ ಈ ಜನರು ಆಡುವ ಬಂಜಾರಿ ಭಾಷೆಗೆ ನಿರ್ದಿಷ್ಟವಾದ ಲಿಪಿಮಾಧ್ಯಮವಿಲ್ಲ. ಅದು ಕೇವಲ ವ್ಯಾವಹಾರಿಕ ಭಾಷೆಯಾಗಿ ಉಳಿದಿದೆ. ಲಂಬಾಣಿಗರ ಈ ಭಾಷೆಯ ಯಾವ ಭಾಷೆಯಿಂದ ಪ್ರಭಾವಿತವಾಗಿದೆ ಎಂದು ಹೇಳುವುದು ಕಷ್ಟ.ಬಹುಶಃ ಉತ್ತರ ಭಾರತದಿಂದ ದಕ್ಷಿಣಕ್ಕೆ ವಲಸೆ ಬಂದುದರಿಂದ ಲಂಬಾಣಿಗರ ಭಾಷೆಯಲ್ಲಿ ಉತ್ತರದ ಭಾಷೆಗಳೂ ಸೇರಿಕೊಂಡಿವೆ. ನಿಸ್ಸಂದೇಹವಾಗಿಯೂ ಇದೊಂದು ಹಿಂದಿ ಭಾಷೆಯಿಂದ ಪ್ರಭಾವಿತವಾದ ಭಾಷೆಯಾಗಿದೆ. ಸಮಸ್ತ ಭಾರತದಲ್ಲಿ ಸುಮಾರು ೨ ಕೋಟಿಗೂ ಹೆಚ್ಚು ಜನರಾಡುವ ಈ ಬಂಜಾರಿ ಭಾಷೆಗೆ ಲಿಪಿಯಿಲ್ಲದಿದ್ದರೂ ಆಯಾ ಪ್ರಾಂತೀಯ ಭಾಷೆಗಳ ಲಿಪಿಯಲ್ಲಿಯೇ ಅದರ ಸಾಹಿತ್ಯ ನಿರ್ಮಾಣವು ಮಂದಗತಿಯಲ್ಲಿ ನಿರ್ಮಾಣಗೊಳ್ಳುತ್ತಲಿದೆ. "ಒಂದು ವೇಳೆ ಈ ಆಡುನುಡಿಯ ಎಲ್ಲ ಸಾರ್ಥಕ ಧ್ವನಿಗಳನ್ನು ಅಳವಡಿಸಿಕೊಂಡಿರುವ ಯಾವುದಾದರೂ ಭಾಷೆಯ ಒಂದು ಸಾಮಾನ್ಯ ಲಿಪಿಯನ್ನು ಉಪಯೋಗಿಸಿಕೊಂಡಿದ್ದೇ ಆದರೆ ಸ್ವಲ್ಪ ಶ್ರಮದಲ್ಲಿಯೇ ಇವರ ಸಾಹಿತ್ಯ ನಿರ್ಮಾಣಗೊಳಿಸ

---

೨. ಡಿ.ಬಿ.ನಾಯಕ್, ಲಂಬಾಣಿ ಜಾನಪದ ಸಾಹಿತ್ಯ, ಗುಲ್ಬರ್ಗಾ, ೨೦೦೦.

ಬಹುದಾಗಿದೆ. ನಿಸ್ಸಂದೇಹವಾಗಿಯೂ 'ದೇವನಾಗರಿ' ಲಿಪಿಯೇ ಈ ಆಡುನುಡಿಗೆ ಸಿದ್ಧ ಲಿಪಿಯಾಗುತ್ತದೆ"(ಲಮಾಣಿ ೧೯೭೬:೫). ಡಾ. ಅಮರಸಿಂಗ ರಾಠೋಡ ಅವರೂ ತಮ್ಮ ಸಂಶೋಧನ ಮಹಾ ಪ್ರಬಂಧದಲ್ಲಿ "ಲಮಾಣಿ ಭಾಷೆಯ ಯಾವ ಲಿಖಿತ ಸಾಹಿತ್ಯವೂ ಇಲ್ಲ. ಭಾಷಾಶಾಸ್ತ್ರದ ಅಧ್ಯಯನದ ದೃಷ್ಟಿಯಿಂದ ಜನಪದ ಗೀತೆ, ಜನಪದ ಕಥೆ ಹಾಗೂ ಜನರ ವ್ಯಾವಹಾರಿಕ ಭಾಷಾರೂಪದಿಂದ ಇವನ್ನು ಆಧರಿಸಬೇಕಾಗುತ್ತದೆ. ಇದು ನಾಗರಿಲಿಪಿ ಯನ್ನು ಹೊಂದಿದೆ" ಎನ್ನುತ್ತಾರೆ(೧೯೭೧:೨೬೬). ಭಾಷಾ ಸಂವರ್ಧನೆಯ ದೃಷ್ಟಿಯಿಂದ ಈ ಮಾತುಗಳು ತುಂಬಾ ಯೋಗ್ಯವೆನಿಸುತ್ತವೆ.

ಸಮಸ್ತ ಭರತಖಂಡದಲ್ಲಿ ನೆಲೆಸಿರುವ ಲಂಬಾಣಿಗಳು ಒಂದೇ ಬಗೆಯ ಭಾಷೆ ಯನ್ನಾಡುತ್ತಾರೆ. ಆಯಾ ಪ್ರಾದೇಶಿಕ ಭಾಷೆಗಳ ಪ್ರಭಾವ ಅದರ ಮೇಲಾಗಿರುವುದು ಸ್ವಾಭಾವಿಕವಾಗಿದೆ ಆದರೂ ಲಂಬಾಣಿ ಭಾಷೆಯು ತನ್ನ ಮೌಲಿಕ ರೂಪವನ್ನು ಬಿಡಲಾರದು. ಡಾ. ಗ್ರಿಯರ್‌ಸನ್ ಹೇಳುವ ಹಾಗೆ – "As for their language, in many of the Country they have lost their dialect and use the local languages of the non-Lamani majority population in the areas of their settlement. But in the areas of their concentration, the Lamani have successfully retained in their language Banjari" (1968:255)

ಈ ಜನರಲ್ಲಿ ಪ್ರಚಲಿತವಿರುವ ಕೆಲವು ರೂಪಗಳನ್ನು ನೋಡಲಾಗಿ, ಇದೊಂದು ಸ್ವತಂತ್ರವಾದ ಆಡುಭಾಷೆಯಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅಲೆಮಾರಿಗಳಾದ ಲಂಬಾಣಿಗಳು ಆಯಾ ಪ್ರಾಂತಗಳಲ್ಲಿ ವಿಭಿನ್ನ ಹೆಸರುಗಳಿಂದ ಕರೆಯಲ್ಪಡುತ್ತಿದ್ದರೂ ಅವರೆಲ್ಲ ಒಂದೇ ಕುಟುಂಬದ ಭಾಷಾಜಾತಿಗೆ ಸೇರಿದವರಾಗಿದ್ದಾರೆ. ಪ್ರಾಂತೀಯ ಭಾಷೆಗಳ ಪ್ರಭಾವದಿಂದಾಗಿ ಇವರಾಡುವ ಭಾಷೆಯಲ್ಲಿ ಸ್ವಲ್ಪ ವ್ಯತ್ಯಾಸ ಉಂಟಾಗುವುದು ಸಹಜ. ಲಿಪಿಯ ಒಂದು ವ್ಯವಸ್ಥೆ ಇವರಲ್ಲಿ ಇದ್ದಿದ್ದರೆ ಈ ಒಂದು ಭಾಷೆಯ ಗೊಂದಲವೇ ಆಗುತ್ತಿರಲಿಲ್ಲ.

ಲಂಬಾಣಿಜನರು ಕನ್ನಡಿಗರ ಮಧ್ಯೆ ಸುಮಾರು ಮುನ್ನೂರು ವರ್ಷಗಳಿಂದ ಗುಂಪು ಗುಂಪಾಗಿ ಬದುಕುತ್ತಿದ್ದಾರೆ. ಅವರು ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಕನ್ನಡಿಗರು ಅವರಿಗಿಂತ ಬಹುವಾಗಿ ಮುಂದುವರಿದಿದ್ದಾರೆ. ಇದರಿಂದ ಕನ್ನಡ ಭಾಷೆ ಮೇಲು ಭಾಷೆ ಯಾಗಿಯೂ ಲಂಬಾಣಿಭಾಷೆ ಕೆಳ ಭಾಷೆಯಾಗಿಯೂ ಕಂಡುಬರುತ್ತದೆ. ಲಂಬಾಣಿಗರು ತಮ್ಮ ಭಾಷೆಗೆ 'ಗೋರಬೋಲಿ' ಎಂದು ಕರೆಯುತ್ತಾರೆ. ಈ ಭಾಷೆಗೆ ಲಿಪಿಯಿಲ್ಲ. ಹಾಗೂ ತನ್ನದೇ ಆದ ಸ್ವತಂತ್ರ ಇತಿಹಾಸವೂ ಇಲ್ಲ. ಆಯಾ ಪ್ರಾಂತೀಯ ಭಾಷೆಗಳ ಪ್ರಭಾವಕ್ಕೆ

ಒಳಗಾಗಿ ಇದೊಂದು ಮಿಶ್ರಭಾಷೆಯಂತೆ ತೇರುತ್ತದೆ. ಪ್ರಪಂಚದಾದ್ಯಂತ ಅಲಲ್ಲಿ ವಾಸಿಸಿರುವ ಲಂಬಾಣಿಗರನ್ನು ಬಂಧಿಸುವ ಏಕಮೇವ ಸೂತ್ರ ಅವರಾಡುವ ಭಾಷೆಯಾಗಿದೆ.

ಲಂಬಾಣಿ ಭಾಷೆ ಇಂಡೋ-ಆರ್ಯನ್ ವರ್ಗಕ್ಕೆ ಸೇರಿದ ಭಾಷೆ. ಅದರ ನಿತ್ಯೋಪ ಯೋಗಿ ಪದಗಳೆಲ್ಲವೂ ಇಂಡೋ-ಆರ್ಯನ್ ಪದಗಳು. ಉದಾಹರಣೆ ಪೂಲ್(ಹೂವು), ಪಾನ್(ಎಲೆ), ಝಾಡ್(ಮರ), ಕುತ್ರ(ನಾಯಿ), ಸಾಪ್(ಹಾವು), ಏಕ್(ಒಂದು), ದೀ(ಎರಡು), ಪಾಚ್(ಐದು), ಸೋ(ನೂರು), ಆಕಿ(ಕಣ್ಣು), ಬಾಯಿ(ಅಕ್ಕ), ಭಿಯ(ಅಣ್ಣ), ಬೇನ್(ತಂಗಿ), ರಾತ್(ರಾತ್ರಿ) ಇತ್ಯಾದಿಗಳು.

ಲಂಬಾಣಿ ಭಾಷೆಯೂ ಕನ್ನಡದಿಂದ ತೆಗೆದುಕೊಂಡಿರುವ ಪದಗಳನ್ನು ಗಮನಿಸಿದರೆ ಅವರು ಕರ್ನಾಟಕಕ್ಕೆ ಬಂದಾಗ ಅವರಿಗೆ ವ್ಯವಸಾಯ ಗೊತ್ತಿರಲಿಲ್ಲವೆಂದೂ ಅಲೆಯುವ ಸ್ವಭಾವದ ಅವರು ಇಲ್ಲಿ ನೆಲೆಯಾಗಿ ನಿಂತು ವ್ಯವಸಾಯವನ್ನು ಕಲಿತರೆಂದೂ ಊಹಿಸ ಬಹುದು. ಅವರು ಇಲ್ಲಿಗೆ ಬಂದಾಗ ಅವರಲ್ಲಿ ಓದು-ಬರಹ ಬಲ್ಲವರು ಇದ್ದದ್ದು ಅಸಂಭವ. ವಿದ್ಯೆಗೆ ಸಂಬಂಧಿಸಿದ ಪದಗಳೆಲ್ಲವೂ ಕನ್ನಡದಿಂದ ಹೋಗಿವೆ. ಲಂಬಾಣಿ ಜನರಿಗೆ ಹೊರ ಜಗತ್ತಿನ ಪರಿಚಯವಾಗುತ್ತಿರುವುದು, ಸಂಪರ್ಕ ಬೆಳೆಯುತ್ತಿರುವುದು ಕನ್ನಡ ಭಾಷೆಯ ಮೂಲಕ ಎಂಬುದು ತೀರಾ ಸ್ಪಷ್ಟವಾಗಿದೆ.

೧೯೨೧ರ ಜನಗಣತಿಯ ಆಧಾರದ ಮೇಲೆ ಭಾರತೀಯ ಭಾಷೆಗಳ ಸಮೀಕ್ಷೆಯನ್ನು ಮಾಡಿರುವ ಡಾ. ಗ್ರಿಯರ್ಸನ್ ಅವರು ಭಾರತದಲ್ಲಿ ೧೭೯ ಭಾಷೆಗಳನ್ನು ಹಾಗೂ ೫೪೪ ಆಡುನುಡಿಗಳನ್ನು ಗುರುತಿಸಿದ್ದು, ಗುಡ್ಡಗಾಡು ಜನಾಂಗದ ಭಾಷೆಯನ್ನು ಕುರಿತು ಚರ್ಚಿಸುವಾಗ ಅವರು ಹೇಳಿರುವಂತೆ ಲಂಬಾಣಿ ಭಾಷೆಯು ಪ್ರಾದೇಶೀಕ ಭಾಷಾ ಪ್ರಭಾವಕ್ಕೆ ಒಳಗಾಗಿರುವ ಅಂಶವನ್ನು ಎತ್ತಿತೋರಿಸುವುದು ಎಂಬ ಗಮನಾರ್ಹವಾದ ಅಂಶ ಹೇಳಿದ್ದಾರೆ.

ಗ್ರಿಯರ್‌ಸನ್ ತಮ್ಮ "ಲಿಂಗ್ವಿಷ್ಟಿಕ್ ಸರ್ವೆ ಆಫ್ ಇಂಡಿಯಾ"[೩] ಎಂಬ ಕೃತಿಯಲ್ಲಿ ಲಂಬಾಣಿಗರ ಭಾಷೆಯನ್ನು ವಿಶದವಾಗಿ ನಿರೂಪಿಸಿ ಹಾಡುಗಳನ್ನು ಆಂಗ್ಲ ಭಾಷೆಗೆ ತರ್ಜುಮೆ ಮಾಡಿರುವುದು ಉಚ್ಚಾರಣೆಗೆ ಹತ್ತಿರವಾಗಿದೆ. ಭಾಷಿಕ ಅಂಶಗಳಿಗೆ ಇವರು ವಿಶೇಷ ಮಹತ್ವ ನೀಡಿ ನಾಸಿಕ್, ಬೆಳಗಾಂ, ಕಂಕೇರ್, ಸಹರಾಂಪುರ, ಕೇರಿ, ಝಾನ್ಸಿ, ಪಂಜಾಬ್ ಲಾಹೋರ್, ಗುಜರಾತ್ ಮುಂತಾದ ಜಿಲ್ಲೆಗಳಲ್ಲಿನ ಲಂಬಾಣಿ ಜನರ ಭಾಷೆಯ ಕೆಲವು

---

೩. ಗ್ರಿಯರ್‌ಸನ್ ಲಿಂಗ್ವಿಷ್ಟಿಕ್ ಸರ್ವೆ ಆಫ್ ಇಂಡಿಯಾ,

ತುಣುಕುಗಳನ್ನು ಆಂಗ್ಲ ಭಾಷೆಯಲ್ಲಿ ತರ್ಜುಮೆ ಮಾಡಿ, ಬಿಹಾರಿನ ಲಂಬಾಣಿ, ಪಂಜಾಬಿನ ಲಂಬಾಣಿ ಭಾಷೆಯಲ್ಲಿನ ವ್ಯತ್ಯಾಸವನ್ನು ಗುರ್ತಿಸುತ್ತಾ ಅವುಗಳಿಗೆ ಅರ್ಥವನ್ನು ಆಂಗ್ಲ ಭಾಷೆಯಲ್ಲಿ ಕೊಟ್ಟಿದ್ದಾರೆ.

ಹೆಚ್.ವಿ. ನಂಜುಂಡಯ್ಯ[೪] ಮತ್ತು ಎಲ್.ಕೆ. ಅಯ್ಯರ್ ಅವರು ಲಂಬಾಣಿಗರ ವಿವಾಹದ ಹಾಡುಗಳನ್ನು ಲಂಬಾಣಿ ಭಾಷೆಯಲ್ಲಿ ಒದಗಿಸಿ ಆಂಗ್ಲ ಭಾಷೆಗೆ ತುರ್ಜುಮೆ ಮಾಡಿರುವುದು ಒಂದು ವಿಶೇಷವಾಗಿದೆ.

ಎಡ್ಗರ್ ಥರ್ಸ್ಟನ್ ಮತ್ತು ಕೆ.ರಂಗಾಚಾರಿಯವರು ಕಡೂರು ತಾಲ್ಲೂಕಿನ ಲಂಬಾಣಿಗರ ಮದುವೆ ಸಂಪ್ರದಾಯದಲ್ಲಿ ಬರುವ ಸಪ್ತಪದಿ ತುಳಿಯುವಾಗ, ಸ್ವಸ್ತಿಕ್ ಚಿನ್ಹೆ ಬರೆಯುವಾಗ ವಧುವು ಗಂಡನ ಮನೆಗೆ ತೆರಳುವಾಗ ಹಾಡುವ ಪದಗಳನ್ನು ಆಂಗ್ಲ ಭಾಷೆಗೆ ತುರ್ಜುಮೆ ಮಾಡಿರುವುದು ಗಮನಾರ್ಹ.

ಮೋಹನ್ ನಾಯಕ್‌ರವರು ಲಂಬಾಣಿಗರ ಪೂಜಾವಿಧಾನಕ್ಕೆ ಸಂಬಂಧಿಸಿದ ಹಾಡುಗಳನ್ನು ಹಾಡುತ್ತಿದ್ದು ಸಂದರ್ಭದೊಂದಿಗಿನ ವಿಶ್ಲೇಷಣೆಯನ್ನು ಮರಾಠಿ ಭಾಷೆಯಲ್ಲಿ ಕೃತಿ ರಚಿಸಿ ತಿಳಿಸಿದ್ದಾರೆ. ಲಂಬಾಣಿಗರ ಹಬ್ಬಗಳಾದ ದಸರಾ, ದೀಪಾವಳಿ, ಹೋಳಿ ಹಬ್ಬದ ವಿವರಗಳೊಂದಿಗೆ ಹಾಡುಗಳಿವೆ. ಕಥೆ ಗಾಯನ ವೃತ್ತಿಗೆ ಸಂಬಂಧಿಸಿದ ಮಾಹಿತಿ ಹಾಗೂ ಲಂಬಾಣಿಗರ ಮದುವೆಯ ಕೆಲವು ಹಾಡುಗಳನ್ನು ಮೂಲ ಮರಾಠಿ ಭಾಷೆಯಲ್ಲಿ ದಾಖಲಿಸಿದ್ದು, ಜಾನಪದೀಯ ನೆಲೆಯಲ್ಲಿ ಅಧ್ಯಯನ ಮಾಡಿದ್ದಾರೆ.

ಸಾಮಾನ್ಯವಾಗಿ ಈ ಭಾಷೆಯು ಯಾವ ಭಾಷೆಯ ಪ್ರಭಾವಕ್ಕೆ ಒಳಗಾಗಿದೆ ಎಂಬುದನ್ನು ನಿಖರವಾಗಿ ಗುರುತಿಸುವುದು ಕಷ್ಟಕರವಾಗಿದೆ. ಉತ್ತರ ಭಾರತದಿಂದ ದಕ್ಷಿಣಕ್ಕೆ ಈ ಜನರು ವಲಸೆ ಬಂದಿರುವುದರಿಂದ ಇವರ ಭಾಷೆಯ ಮೇಲೆ ಉತ್ತರ ಭಾರತದ ಭಾಷೆಗಳ ಪ್ರಭಾವವಾಗಿರುವಂತೆ ಕಂಡುಬರುತ್ತದೆ.[೫] ಉಳಿದೆಲ್ಲ ಭಾಷೆಗಳಿಗಿಂತಲೂ ಹಿಂದಿ ಭಾಷೆಯ ಪ್ರಭಾವ ಹೆಚ್ಚಿನ ರೂಪದಲ್ಲಿ ತೋರಿ ಬರುತ್ತದೆ. ಶತಮಾನಗಳಿಂದ ಮೌಖಿಕ ವಾಗಿಯೇ ಉಳಿದುಕೊಂಡು ಬಂದಿರುವ ಈ ಭಾಷೆಯು ಇಂಡೋ ಆರ್ಯನ್ ಭಾಷಾ

---

೪. ನಂಜುಂಡಯ್ಯ ಮತ್ತು ಐಯ್ಯರ್, ಎಥಿನೋಗ್ರಾಫಿಕ್ ಸರ್ವೆ ಆಫ್ ಮೈಸೂರು, ಮೈಸೂರು. ೧೯೦೬.

೫. ಡಾ.ಚಿದಾನಂದಮೂರ್ತಿ, ಪ್ರಧಾನ ಸಂಪಾದಕರು, ಡಾ॥ ಜಿ.ಎಸ್.ಶಿವರುದ್ರಪ್ಪ, 'ಲಂಬಾಣಿ ಮತ್ತು ಅವರ ಭಾಷೆ', ೧೯೭೦, ಪು.ಸಂ.೧-೧೭

ವರ್ಗಕ್ಕೆ ಸೇರಿದುದಾಗಿದೆ. "ಈ ಭಾಷೆಗೆ ಲಿಪಿಯಿಲ್ಲದಿದ್ದರೂ ಆಯಾ ಪ್ರಾಂತೀಯ ಭಾಷೆಗಳ ಲಿಪಿಯಲ್ಲಿಯೇ ಅವರ ಸಾಹಿತ್ಯ ಮಂದಗತಿಯಲ್ಲಿ ನಿರ್ಮಾಣಗೊಳ್ಳುತ್ತಲಿದೆ. ಆದರೆ ಒಂದು ವೇಳೆ ಈ ಆಡುನುಡಿಯು ಎಲ್ಲಾ ಸಾರ್ಥಕ ಧ್ವನಿಮಾರ್ಗಳನ್ನು ಅಳವಡಿಸಿಕೊಂಡಿದ್ದೆ ಆದರೆ ಸ್ವಲ್ಪ ಸಮಯದಲ್ಲಿಯೇ ಇವರ ಸಾಹಿತ್ಯ ನಿರ್ಮಾಣಗೊಳಿಸ ಬಹುದಾಗಿದೆ. ನಿಸ್ಸಂದೇಹವಾಗಿಯೂ **'ದೇವನಾಗರಿ'** ಲಿಪಿಯೇ ಈ ಆಡು ನುಡಿಗೆ ಸಿದ್ಧಿ ಲಿಪಿಯಾಗುತ್ತದೆ."(ಲಮಾಣಿ ೧೯೭೬:೫) ಲಂಬಾಣಿ ಸಂಶೋಧಕರಲ್ಲೊಬ್ಬರಾದ ಶ್ರೀ ವೈ.ರೂಪ್ಲಾನಾಯಕ ಅವರು "Devanagari script is the most scientific, beautiful and easiest script to follow and most suitable to Banjari accent and pronunciation. Hence Devanagari script may be adopted to the Banjari dialect (1988:5) ಎಂದು ಇದೇ ಅಭಿಪ್ರಾಯವನ್ನು ಸಮರ್ಥಿಸಿರುವುದು ಸೂಕ್ತವಾಗಿದೆ.

ಥರ್ಸ್ಟನ್ ಅವರು ಉತ್ತರ ಕನ್ನಡದ ಲಂಬಾಣಿ ಭಾಷೆಯನ್ನು ಸಮೀಕ್ಷಿಸಿ "In the district of North Kanranataka the Lamani have still retained their dialect, but it contains many Marwari, Urdu, Gujarathi and a few Marathi and Kannada words, most of them are bilingual or multi lingual (1909:208) ಎಂದು ಹೇಳಿರುವ ಮಾತುಗಳು ಕರ್ನಾಟಕದ ಅಷ್ಟೇ ಅಲ್ಲ ಭಾರತದ ಯಾವುದೇ ಪ್ರಾಂತದ, ಯಾವುದೇ ಪ್ರದೇಶದ ಲಂಬಾಣಿಗರ ಭಾಷಾ ಸ್ವರೂಪಕ್ಕೆ ಅನ್ವಯಿಸುವ ಮಾತುಗಳಾಗಿವೆ. ಯಾವುದೇ ಅಲ್ಪಸಂಖ್ಯಾತರ ಭಾಷೆಯಲ್ಲಿ ಈ ರೀತಿಯ ಪ್ರಭಾವ ಸಾಮಾನ್ಯವಾಗಿದೆ.

ಲಂಬಾಣಿ ಭಾಷೆಯು ಖಚಿತವಾಗಿ ಇಂಡೋ ಆರ್ಯನ್ ಭಾಷಾ ವರ್ಗಕ್ಕೆ ಸೇರುವ ಭಾಷೆಯಾಗಿದೆ.ಈ ಭಾಷೆಯು ಇಂಡೋ ಆರ್ಯನ್ ಭಾಷಾ ವರ್ಗದ ಭಾಷೆಗಳ ಹಾಗೂ ಅನ್ಯ ಭಾಷೆಗಳ ಪ್ರಭಾವಕ್ಕೆ ಎಷ್ಟೇ ಒಳಗಾಗಿದ್ದರೂ ತನ್ನದೇ ಆದ ಕೆಲವು ವಿಶಿಷ್ಟ ಶಬ್ದ ಸಂಪತ್ತನ್ನು ಹಾಗೂ ವ್ಯಾಕರಣ ಪ್ರಕ್ರಿಯೆಗಳನ್ನು ಉಳಿಸಿಕೊಂಡು ಬಂದಿದೆ. ಹೀಗಾಗಿ ಈ ಭಾಷೆಯ ಮೂಲ ಕಂಡುಕೊಳ್ಳುವುದು ವಿದ್ವಾಂಸರಿಗೆ ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಅಂತೆಯೇ ಅನೇಕ ಜನ ವಿದ್ವಾಂಸರು ಈ ಭಾಷೆಯ ಕುತೂಹಲಕರವಾದ ಅಧ್ಯಯನವನ್ನು ಕೈಕೊಂಡು ವಿವೇಚಿಸಿದ್ದಾರೆ. ಆದರೂ ಭಾಷೆಯ ದೃಷ್ಟಿಯಿಂದ ಅಧ್ಯಯನದ ಅವಶ್ಯಕತೆ ಕಂಡುಬರುತ್ತದೆ.

ಶ್ರೀ ಗೋವರ್ಧನ ಶರ್ಮಾ ಅವರು ಈ ಭಾಷೆಯನ್ನು ಕುರಿತು "ಬಂಜಾರಿ ಇದು ರಾಜಸ್ಥಾನದ ಹೊರಗಡೆ ವಾಸಿಸುವ ಬಂಜಾರಾಗಳ ಭಾಷೆಯಾಗಿದ್ದು ಪ್ರಾದೇಶಿಕತೆಗನು

ಸಾರವಾಗಿ ಇದರಲ್ಲಿ ಅನೇಕ ಪ್ರಭೇಧಗಳಿವೆ. ಬಂಜಾರಾಗಳು ರಾಜಸ್ಥಾನದ ಮೂಲ ನಿವಾಸಿಗಳಾಗಿದ್ದು ವ್ಯಾಪಾರದ ದೆಸೆಯಿಂದಾಗಿ ಖಾದ್ಯಪದಾರ್ಥಗಳನ್ನು ಹೇರಿಕೊಂಡು ದೂರದೂರದ ಪ್ರದೇಶಗಳಿಗೆ ಪಸರಿಸಿದರು" ಎಂದು ಅಭಿಪ್ರಾಯಪಡುತ್ತಾರೆ.

ಆರ್ಯ ಪರಿವಾರದ ಹಿಂದಿ ಭಾಷೆಯ ಉಪಭಾಷೆಗಳಾದ 'ಮಾರವಾಡಿ' ಹಾಗೂ 'ಮಾಲವಿ' ಭಾಷೆಗಳೊಂದಿಗೆ ಈ ಭಾಷೆಯ ನಿಕಟ ಸಂಬಂಧ ಕಂಡುಬರುತ್ತದೆ. ಧ್ವನಿತತ್ವ, ಉಚ್ಚಾರಣೆ ಹಾಗೂ ವ್ಯಾಕರಣಗಳ ದೃಷ್ಟಿಯಿಂದ ಇದು ಆರ್ಯ ಪರಿವಾರದ ಭಾಷೆಗಳಾದ ಸಂಸ್ಕೃತ, ಪ್ರಾಕೃತ ಭಾಷೆಗಳ ಪ್ರಭಾವಕ್ಕೆ ಒಳಗಾಗಿದೆ. ಇವುಗಳ ಜೊತೆಗೆ ಮರಾಠಿ, ಗುಜರಾತಿ, ಕನ್ನಡ, ತೆಲುಗು, ಅರಬ್ಬಿ, ಫಾರ್ಸಿ ಮುಂತಾದ ಭಾಷೆಗಳ ಅನೇಕ ರೂಪಗಳು ಈ ಭಾಷೆಯಲ್ಲಿ ಕಂಡುಬರುತ್ತವೆ.

ಲಂಬಾಣಿಗರು ತಮ್ಮ ಮೂಲಸ್ಥಾನ ರಾಜಸ್ಥಾನವನ್ನು ಯಾವುದೋ ಕಾರಣದಿಂದ ತೊರೆದು 'ಮಾಳವಾ' ಮುಖಾಂತರವಾಗಿ 'ನಿಮಾಡ' ಪ್ರದೇಶದಲ್ಲಿ ಬಂದು ಕೆಲಕಾಲ ವಾಸಿಸಿರುವಂತೆ ತೋರುತ್ತದೆ. ಇದರಿಂದಾಗಿ 'ನಿಮಾಡ'ದ ಆಡುನುಡಿ 'ನಿಮಾಡಿ'ಯ ಪ್ರಭಾವ ಈ ಜನರ ನುಡಿಯ ಮೇಲಾಗಿರುವುದು ಸಹಜವೇ ಆಗಿದೆ. 'ನಿಮಾಡಿ' ಇದು ರಾಜಸ್ಥಾನದ ಮುಖ್ಯ ಉಪಭಾಷೆಗಳಲ್ಲಿ ಒಂದಾಗಿದೆ. ರಾಜಸ್ಥಾನದ ಮುಖ್ಯ ಉಪಭಾಷೆಗಳು ಹೀಗಿವೆ. ಮಾರವಾಡಿ, ಮಧ್ಯಪೂರ್ವೀಯ ಅಥವಾ ಜಯಪುರಿ, ಹಾಡೌತಿ, ಪೂರ್ವೋತ್ತರಿಯ ಅಥವಾ ಮೇವಾತಿಯಾ ಅಥವಾ ಅಹಿರವಾಟಿ, ಮಾಲವಿ, ನಿಮಾಡಿ, ಲಮಾನಿ, ಕಕೇರಿ ಮತ್ತು ಬಹುರೂಪಿಯಾ.

ಈ ಭಾಷೆಯು ಎಷ್ಟೇ ಪ್ರಾದೇಶಿಕ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೂ ಅದು ತನ್ನ ಸ್ವತಂತ್ರವಾದ ಅಸ್ತಿತ್ವವನ್ನು ಕಳೆದುಕೊಂಡಿಲ್ಲ. ಭಾರತದ ಯಾವ ಮೂಲೆಯಲ್ಲಿಯೇ ವಾಸಿಸುವ ಲಂಬಾಣಿಗಳು ಪರಸ್ಪರ ಮಾತನಾಡುವಾಗ ಸುಲಭವಾಗಿ ಅರ್ಥೈಸಿಕೊಳ್ಳಬಲ್ಲರು.ನಮ್ಮ ದೇಶದ ಸಂವಿಧಾನದಲ್ಲಿ ಮಾನ್ಯತೆ ಪಡೆದಿರುವ ೧೪ ಭಾಷೆಗಳ ಯಾವ ಶಬ್ದಕೋಶಗಳಲ್ಲಿಯೂ ಕಂಡು ಬರದ ಅನೇಕ ಶಬ್ದಗಳು ಲಂಬಾಣಿ ಭಾಷೆಯೊಂದರಲ್ಲಿ ಮಾತ್ರ ದೊರಕುತ್ತವೆ. ಇವು ಹಿಂದೂಸ್ಥಾನದ ಸಮಸ್ತ ಲಂಬಾಣಿಗರಲ್ಲಿ ಯಾವ ವ್ಯತ್ಯಾಸಗಳಿಲ್ಲದೆ ಬಳಕೆಯಾಗುವುದು ಕಂಡುಬರುತ್ತದೆ. ಉದಾಹರಣೆಗೆ ಇಲ್ಲಿ ಕೆಲವು ಶಬ್ದ ಹಾಗೂ ವ್ಯಾಕರಣ ಪ್ರಕ್ರಿಯೆಗಳನ್ನು ಗಮನಿಸಬಹುದು.

ನವಲೇರಿ(ಮದುಮಗಳು), ತಾಂಗಡಿ(ಮದುವೆ ಊಡುಗೆರೆಯ ಪೆಟ್ಟಿಗೆ) ಹಾಂಸಲೋ (ಕೊರಳಹಾರ), ತಾಂಡ್ರೋ(ಪುರುಷ, ಗಂಡ), ಗೋರಣಿ(ಲಂಬಾಣಿಸ್ತ್ರೀ, ಹೆಂಡತಿ),

ಲೇರಿಯಾ(ಮದುಮಗನ ಸಹಾಯಕ) ಜಾಂಗ(ತೊಡೆ); ಭೋರಾ(ಲಂಬಾಣಿ ಹುಡುಗ), ಭೋರಿ(ಲಂಬಾಣಿ ಹುಡುಗಿ), ಕೋರ(ಲಂಬಾಣಿಗರನಲ್ಲದವ), ಗೋರ(ಲಂಬಾಣಿಗರು), ದೇಜು(ಲಗ್ನದ ಕರಾರು) ಮುಂತಾದವುಗಳು. ಲಂಬಾಣಿ ಭಾಷೆಯು ಭಾರತೀಯ ಯಾವ ಭಾಷೆಗಳಲ್ಲಿಯೂ ಕಂಡುಬರುವ ವಿಶೇಷವಾದ ಕೆಲವು ವ್ಯಾಕರಣ ಪ್ರಕ್ರಿಯೆ ಗಳನ್ನು ಹೊಂದಿದೆ.

ಈ ಎಲ್ಲಾ ಅಂಶಗಳು ಲಂಬಾಣಿ ಭಾಷೆಯ ಸ್ವತಂತ್ರವಾದ ಅಸ್ತಿತ್ವಕ್ಕೆ ಆಧಾರವನ್ನು ನೀಡುತ್ತವೆ. ಇಂಡೋ ಆರ್ಯನ್ ಭಾಷಾ ವರ್ಗಕ್ಕೆ ಸೇರಿದ ಈ ಭಾಷೆಯು ತನ್ನ ವರ್ಗದ ಭಾಷೆಗಳ ಜೊತೆಗೆ ದ್ರಾವಿಡ ಭಾಷೆಗಳ ಪ್ರಭಾವಕ್ಕೂ ಒಳಗಾಗಿದೆ. ಎಷ್ಟೇ ಅನ್ಯಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೂ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡು, ಬೆಳೆಯುತ್ತಾ ಸಾಗಿದೆ. ರಾಜಸ್ಥಾನಿಯ ಪ್ರಮುಖ ಭಾಷೆಯ ಗುಂಪಿಗೆ ಸೇರುವ ಈ ಭಾಷೆಯ ಮೂಲವನ್ನು ಕಂಡುಕೊಳ್ಳಲು ಇನ್ನೂ ಸಾಕಷ್ಟು ಸಂಶೋಧನೆಯ ಅವಶ್ಯಕತೆಯಿದೆ. ಸುಮಾರು ಮೂರು ಕೋಟಿ ಜನರ ವ್ಯಾವಹಾರಿಕ ಭಾಷೆಯಾಗಿರುವ ಇದಕ್ಕೆ ಲಿಪಿ ಸೌಕರ್ಯ ಇಲ್ಲದೆ ಇರುವುದು ದೊಡ್ಡ ಕೊರತೆಯಾಗಿದೆ. ಈ ದಿಶೆಯಲ್ಲಿ ಭಾರತದ ಘನ ಸರಕಾರ ಹಾಗೂ ಭಾಷಾ ಶಾಸ್ತ್ರಜ್ಞರು ತೀವ್ರ ದೃಷ್ಟಿ ಹರಿಸಬೇಕಾದ ಅವಶ್ಯಕತೆಯಿದೆ.

**ಇತರ ಭಾಷೆಗಳ ಪ್ರಭಾವ**

ಯಾವುದೇ ಜನಾಂಗ ತಮ್ಮ ಮೂಲ ಸ್ಥಾನವನ್ನು ತ್ಯಜಿಸಿ ಬೇರೆ ಪ್ರದೇಶಗಳಲ್ಲಿ ಹೋಗಿ ಸ್ಥಿರವಾಗಿ ವಾಸಿಸುವುದರಿಂದ ಹಾಗೂ ಆ ಮೂಲಸ್ಥಾನದ ಸಂಪರ್ಕವನ್ನು ಕಡಿದುಕೊಳ್ಳುವುದರಿಂದ ಆ ಜನಾಂಗದ ಮೇಲೆ ಸ್ಥಾನೀಯ ಸಂಸ್ಕೃತಿ ಹಾಗೂ ನಾಗರಿಕತೆಯ ಪ್ರಭಾವ ಸ್ವಾಭಾವಿಕವಾಗಿದೆ. ಅಲ್ಲದೆ ಪ್ರಾದೇಶಿಕ ಭಾಷೆಯ ಪ್ರಭಾವ ಉಂಟಾಗುವುದು ಅನಿವಾರ್ಯವಾಗಿದೆ. ಲಂಬಾಣಿಗರು ಯಾವ ಕಾರಣಕ್ಕೂ ತಮ್ಮ ಮೂಲಸ್ಥಾನ ರಾಜಸ್ಥಾನ ವನ್ನು ಬಿಟ್ಟು ಅಲೆಮಾರಿಗಳಾಗಿ ವ್ಯಾಪಾರ ಮಾಡುತ್ತ ತಂಡೋಪತಂಡವಾಗಿ ಭಾರತದುದ್ದ ಗಲಕ್ಕೂ ಹರಡಿಕೊಂಡು ನೆಲೆನಿಂತಿದ್ದಾರೆ. ದೈನಂದಿನ ವ್ಯವಹಾರ ಹಾಗೂ ನಿರಂತರ ಸಂಪರ್ಕಗಳಿಂದಾಗಿ ಆಯಾ ಪ್ರದೇಶಗಳಲ್ಲಿ ನೆಲೆಯಾಗಿರುವ ಲಂಬಾಣಿಗರ ಮೇಲೆ ಅಲ್ಲಲ್ಲಿಯ ಪ್ರಭಾವ ವಿಶೇಷವಾಗಿ ಕಂಡುಬರುತ್ತದೆ. ಬಹುಶಃ ಉತ್ತರ ಭಾರತದಿಂದ ದಕ್ಷಿಣಕ್ಕೆ ವಲಸೆ ಬಂದ ಲಂಬಾಣಿಗರ ಭಾಷೆಯಲ್ಲಿ ಉತ್ತರದ ಭಾಷೆಗಳೂ ಸೇರಿಕೊಂಡಿರಲು ಸಾಕು. ಲಂಬಾಣಿ ಭಾಷೆಯ ಮೇಲೆ ಪ್ರಾದೇಶಿಕವಾಗಿ ಪ್ರಭಾವ ಬೀರಿರುವ ಕೆಲವು ಪ್ರಮುಖ ಭಾಷೆಯ ಸಾಮ್ಯ ವೈಷಮ್ಯವನ್ನು ಇಲ್ಲಿ ನೋಡಬಹುದು.

**ಕನ್ನಡದ ಪ್ರಭಾವ**

ಲಂಬಾಣಿಗರು ಸುಮಾರು ೩೦೦ ವರ್ಷಗಳಿಂದಲೂ ಕನ್ನಡಿಗರ ಜೊತೆಯಲ್ಲಿ ಬದುಕಿದ್ದಾರೆ. ದೈನಂದಿನ ವ್ಯವಹಾರ ಹಾಗೂ ನಿತ್ಯ ಸಂಪರ್ಕಗಳಿಂದ ಲಂಬಾಣಿಗರ ಮೇಲೆ ಕನ್ನಡಿಗರ ಪ್ರಭಾವ ವಿಶೇಷವಾಗಿ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ಕನ್ನಡವೇ ತಮ್ಮ ಮಾತೃಭಾಷೆ ಎನ್ನುವಷ್ಟು ಪ್ರಭಾವಿತರಾಗಿದ್ದಾರೆ. ಒಟ್ಟಿನಲ್ಲಿ ಲಂಬಾಣಿಗರ ದೈನಂದಿನ ಕಾರ್ಯ-ವ್ಯವಹಾರಗಳು ಕನ್ನಡ ಭಾಷಿಕ ಜನರೊಡನೆಯೇ ಸಾಗುವುದರಿಂದ ಕನ್ನಡದ ಪ್ರಭಾವ ಈ ಭಾಷೆಯ ಮೇಲಾಗಿರುವುದು ಸಹಜ.

ಲಂಬಾಣಿ ಜನರಿಗೆ ಕನ್ನಡ ಭಾಷೆಯು ಅವರ ಹೊಸ ನಾಗರಿಕತೆಗೆ ಹೊಸ್ತಿಲಾಗಿ ಪರಿಣಮಿಸಿದೆ. ದೈನಂದಿನ ಬಳಕೆಯಲ್ಲಿ ಕನ್ನಡ ಭಾಷೆಯು ಅನ್ಯಭಾಷೆಗಳಿಂದ ಯಾವ ಯಾವ ಪದಗಳನ್ನು ಸ್ವೀಕರಿಸುತ್ತದೆಯೋ ಅವೆಲ್ಲ ಪದಗಳನ್ನು ಲಂಬಾಣಿ ಭಾಷೆಯು ಯಾಂತ್ರಿಕವಾಗಿ ಸ್ವೀಕರಿಸಿ ಬಿಡುತ್ತದೆ. ಈ ಜನರು ಕನ್ನಡಿಗರೊಂದಿಗೆ ಇಟ್ಟುಕೊಂಡಿರುವ ನಿಕಟ ಸಂಪರ್ಕವೇ ಇದಕ್ಕೆ ಕಾರಣವಾಗಿದೆ. ಯಾವುದಕ್ಕೂ ಕನ್ನಡದಿಂದಲೇ ಅವರಿಗೆ ಮುಂದಿನ ಮಾರ್ಗ. ಅನ್ಯಭಾಷೆಯ ಪದಗಳನ್ನು ಕನ್ನಡವು ಸ್ವಲ್ಪ ವ್ಯತ್ಯಾಸಪಡಿಸಿಕೊಂಡು ಸ್ವೀಕರಣ ಮಾಡಿಕೊಂಡರೆ ಆ ಪದಗಳನ್ನು ಕನ್ನಡದಿಂದ ನೇರವಾಗಿ ಲಂಬಾಣಿ ಭಾಷೆಯು ತನ್ನ ಸ್ವತ್ತನ್ನಾಗಿ ಮಾಡಿಕೊಳ್ಳುತ್ತದೆ.

ಉದಾ: ಆಸ್ಪತ್ರೆ, ರೈಲು, ಸ್ಟೇಷನ್, ಕಾಲೇಜು, ರೇಡಿಯೋ, ಮೈಲು, ಬ್ಯಾಗು, ಬೂಟು, ಪಂಪು ಇತ್ಯಾದಿ.

ಕರ್ನಾಟಕದ ಪ್ರಮುಖ ಉದ್ಯೋಗ ಒಕ್ಕಲುತನವಾಗಿರುವಂತೆ ಇಲ್ಲಿಯ ಲಂಬಾಣಿಗರದೂ ಒಕ್ಕಲುತನವೇ ಪ್ರಮುಖ ಉದ್ಯೋಗ ಆಗಿದೆ. ಪ್ರಮುಖವಾಗಿ ವ್ಯಾಪಾರಿಗಳಾದ ಈ ಜನ ಕರ್ನಾಟಕಕ್ಕೆ ಬಂದು ನೆಲೆಸಿದ ಮೇಲೆ ಕಾಲಾಂತರದಲ್ಲಿ ಇವರ ವ್ಯಾಪಾರ ನಿಂತು ಹೋಗಿರುವುದು ಕಂಡುಬರುತ್ತದೆ. ಹೀಗಾಗಿ ಕರ್ನಾಟಕದ ಪ್ರಮುಖ ಉದ್ಯೋಗವನ್ನೇ ತಮ್ಮ ಉದ್ಯೋಗವನ್ನಾಗಿ ಮಾಡಿಕೊಂಡಿರುವುದು ಸ್ವಾಭಾವಿಕ. ಒಕ್ಕಲುತನಕ್ಕೆ ಸಂಬಂಧಿಸಿದ ಅನೇಕ ಪದಗಳು ಲಂಬಾಣಿಗರಲ್ಲಿ ಕನ್ನಡದಿಂದ ಸ್ವೀಕೃತವಾಗಿವೆ.

**ವ್ಯವಸಾಯ ಸಂಬಂಧಿ ಪದಗಳು:** ಹರಗು, ಕುಂಟೆ, ಖೀಲ, ಕುಡಾ, ಎಡೆಕುಂಟೆ, ಬಾರಕೋಲ, ಮಿಣಿ, ನಗ್ಗಾ(ನೊಗ), ಉಳಿ, ಬಾಚಿ, ಸುತಕಿ, ಕುಲ್ಮಿ, ತಿದಿ, ಗುದ್ದಲಿ, ಪಿಕಾಸಿ, ಹಾರಿ, ಗಾಲಿ, ಬಂಡಿ(ಚಕ್ಕಡಿ), ಬಣಮಿ, ಸುಗ್ಗಿ, ರಾಸ್(ರಾಶಿ), ಬೀಜಾ,

ಕೂರಗಿ, ಪೀಕ್(ಬೆಳೆ), ಸೇರ್(ಸೇರು), ಕಸ, ಹಳಾ, ಇರಸ್, ಡಂಬರಕಿ, ತೋಳು ಇತ್ಯಾದಿ.

ಲಂಬಾಣಿ ಭಾಷೆಯು ಈ ಮೇಲಿನ ಅನೇಕ ಪದಗಳನ್ನು ಕನ್ನಡದಿಂದ ನೇರವಾಗಿ ತೆಗೆದುಕೊಂಡಿರುವುದನ್ನು ನೋಡಿದರೆ ಅವರು ಕರ್ನಾಟಕಕ್ಕೆ ಕಾಲಿಟ್ಟಾಗ ಅವರಿಗೆ ವ್ಯವಸಾಯ ಪದ್ಧತಿ ಬಹುಶಃ ಗೊತ್ತಿರಲಿಲ್ಲವೆಂದೂ ಸಂಚಾರಿ ಜನಾಂಗದವರಾದ ಅವರು ವ್ಯಾಪಾರ ಹೇತುವಿನಿಂದ ಇಲ್ಲಿಗೆ ಬಂದು ಸ್ಥಿರವಾಗಿ ನೆಲೆನಿಂತು ವ್ಯವಸಾಯವನ್ನು ಕಲಿತುಕೊಂಡಿರಬಹುದೆಂದು ಊಹಿಸಬಹುದಾಗಿದೆ.

**ವಿದ್ಯಾಭ್ಯಾಸ ಸಂಬಂಧಿ ಪದಗಳು:** ಪೆನ್, ಪುಸ್ತಕ, ಶಾಲೆ, ಕಾಲೇಜ, ಕಾಗದ, ಓದ್, ಬೋರ್ಡ್, ಮಗ್ಗಿ, ಲೆಕ್ಕ, ಭಾಗ್ಸ್, ಮಾಸ್ತರ, ಘಂಟಿ, ಪಾಟಿ(ಪ್ಲೇಟ್) ತಿದ್ದು, ಕಾಟ್‌ಮಾರ್ (ಕಾಟುಹೊಡೆ), ಮಸಿ, ಕಂಪಾಸ್, ಗಣಿತ, ವಿಜ್ಞಾನ, ಕಥಿ–ಕಾದಂಬರಿ, ಪಾಟಿಚೀಲ ಇತ್ಯಾದಿ ಕನ್ನಡದಲ್ಲ ಬಳಕೆಯಾದ ಪದಗಳನ್ನು ನೇರವಾಗಿ ಲಂಬಾಣಿಯು ಸ್ವೀಕರಿಸಿದೆ.

ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಪದಗಳೆಲ್ಲವೂ ಲಂಬಾಣಿಗರಲ್ಲಿ ಕನ್ನಡದ ಮುಖಾಂತರವೇ ಬಂದಿವೆ. ಬಹುಶಃ ಅವರು ಇಲ್ಲಿಗೆ ಬಂದಾಗ ಓದು–ಬರಹ ಬಲ್ಲವರು ಅಸಂಭವವೆಂದು ತೋರುತ್ತದೆ.ವ್ಯಾಪಾರಿಗಳಾದ ಅವರು ಸಂಚರಿಸುವುದರಲ್ಲಿ ಸಮಯವನ್ನು ಕಳೆದಿದ್ದು, ಓದು–ಬರಹಗಳ ಕಡೆಗೆ ಲಕ್ಷ್ಯವಹಿಸಿದಂತಿಲ್ಲ. ಹೀಗಾಗಿ ಕಾಲಾಂತರದಲ್ಲಿ ವಿದ್ಯಾಭ್ಯಾಸವನ್ನು ಪ್ರಾರಂಭಿಸಿದ ಅವರು ಕನ್ನಡದ ಪದಗಳನ್ನೇ ನೇರವಾಗಿ ಸ್ವೀಕರಿಸಿರುವುದು ಸ್ವಾಭಾವಿಕವಾಗಿದೆ.

**ವ್ಯಾಪಾರ ಸಂಬಂಧಿ ಪದಗಳು:** ಸಾಲಾ, ಅಸಲ್, ಬಡ್ಡಿ, ಕಂತ್, ತಕ್ಕಡಿ, ಸೇರ್, ಪಾವ್, ಚಟಾಕ್, ನವಟಾಕ್, ಬಾಕಿ, ಅಂಗಡಿ, ಧಾರಣಿ, ದಲಾಲಿ, ಸವಾಲ್, ಕಾಟಾ, ಮಾಪ್ ಇತ್ಯಾದಿ ಪದಗಲು ಅಚ್ಚಗನ್ನಡ ಪದಗಳಾಗಿರದಿದ್ದರೂ ಕನ್ನಡೀಕರಣಗೊಂಡ ಈ ಪದಗಳನ್ನು ಲಂಬಾಣಿಗಳು ಕನ್ನಡದಿಂದ ಸ್ವೀಕರಿಸಿರುವುದು ಗಮನಾರ್ಹ. ಇವು ಲಂಬಾಣಿಗರಿಗೆ ಇಲ್ಲಿಗೆ ಬಂದಾಗ ಅತ್ಯವಶ್ಯಕ ಪದಗಳಾಗಿದ್ದವು. ಕಾರಣ ಅವರು ವ್ಯಾಪಾರಕ್ಕಾಗಿ ಅಲ್ಲಲ್ಲಿ ಸಂಚರಿಸಬೇಕಾಗುತ್ತಿತ್ತು.

**ಕೆಲವು ನಿತ್ಯೋಪಯೋಗಿ ಪದಗಳು:** ಬಾಗಲಾ, ಖದಾ, ಚಿಲಕಾ, ಕೀಲಿ, ಮಾಳಿಗೆ, ಗೋಡೆ, ಬೆಳಕಿಂಡಿ, ಜಂತಿ, ಹಿತ್ತಲಾ, ಕಿಡಕಿ, ಹೆಂಚು, ತಾಟು, ಚಮಚೆ, ಹೋಳಗಿ, ಕಡಬು, ಚಾವಳ, ಇಡ್ಲಿ, ದೋಸಿ, ಹಪ್ಪಳ. ಹಬ್ಬಾ, ಹುಣ್ಣಿಮೆ, ತೇರು, ಬಂಡಿ, ಟೋಪಿ, ಹುಲಿ, ಚಿರ್ಚ, ಹಂದಿ, ಕಿರ್ಬಾ, ಹೊಟ್ಟೆಕಿಚ್ಚು, ಮೆರವಣಿಗೆ, ಜಾತ್ರೆ, ಬಚ್ಚಲು, ಚಾಡಿ, ಚಾಕು ಇತ್ಯಾದಿ.

ಇಂತಹ ಅನೇಕ ನಿತ್ಯೋಪಯೋಗಿ ಪದಗಳು ಲಂಬಾಣಿಗರಲ್ಲಿ ಸಮ್ಮಿಳಿತಗೊಂಡಿರುವುದನ್ನು ಕಾಣಬಹುದಾಗಿದೆ. "ಲಂಬಾಣಿ ಭಾಷೆಯ ಮೇಲೆ ಕನ್ನಡದ ಪ್ರಭಾವ ಎಷ್ಟಾಗಿದೆಯೆಂದರೆ ಅಲ್ಲಿಯ ಕೋಶಕ್ಕೆ ಕನ್ನಡದಿಂದ ಅನೇಕ ನಿತ್ಯೋಪಯೋಗಿ ಪದಗಳೂ ಹೋಗಿ ಸೇರಿಕೊಂಡಿವೆ. ಒಂದು ಭಾಷೆ ಸಾಮಾನ್ಯವಾಗಿ ಇನ್ನೊಂದು ಭಾಷೆಯಿಂದ ಸಾಂಸ್ಕೃತಿಕ ಪದಗಳನ್ನು (Cultural Words) ಸ್ವೀಕರಿಸುವುದೇ ಹೊರತು, ನಿತ್ಯೋಪಯೋಗಿ ಪದಗಳನ್ನು ಸ್ವೀಕರಿಸುವುದಿಲ್ಲ. ಆದರೆ ಒಂದು ಭಾಷೆಯ ಮೇಲೆ ಇನ್ನೊಂದು ಭಾಷೆಯ ಪ್ರಭಾವ ಅತಿಯಾದಾಗ ಹೀಗಾಗುವುದುಂಟು"(ಚಿದಾನಂದಮೂರ್ತಿ:೧೯೭೦:೧೫)

ಹೀಗೆ ಕನ್ನಡವು ಲಂಬಾಣಿಗರ ಜೀವನದ ಭಾಷೆಯ ಜೊತೆಗೆ ಸಂಸ್ಕೃತಿಯ ಪ್ರಭಾವವನ್ನು ಅತ್ಯಧಿಕವಾಗಿ ಬೀರಿರುವುದು ಕಂಡುಬರುತ್ತದೆ. ಒಟ್ಟಿನಲ್ಲಿ ಕರ್ನಾಟಕದ ಲಂಬಾಣಿ ಜನತೆಗೆ ಹೊರ ಜಗತ್ತಿನ ಪರಿಚಯ ಹಾಗೂ ಸಂಪರ್ಕ ಬೆಳೆಯುತ್ತಿರುವುದು ಕನ್ನಡದ ಮೂಲಕವೇ ಎನ್ನುವುದರಲ್ಲಿ ಯಾವ ಸಂದೇಹವಿಲ್ಲ.

**೫.೨. ಬಂಜಾರ ಸಾಹಿತ್ಯ ಮತ್ತು ಜಾನಪದ ಕಲೆಗಳು**

ಜನಪದ ಸಾಹಿತ್ಯವೆನ್ನುವುದು ಆಯಾ ಜನಾಂಗಗಳಲ್ಲಿ ಕಂಠಸ್ಥ ಸಂಪ್ರದಾಯದಲ್ಲಿಯೇ ಉಳಿದುಕೊಂಡು ಬಂದಿರುವ ಸಾಹಿತ್ಯ. ತಮ್ಮ ಪಾಡನ್ನೇ ಹಾಡಾಗಿ ನೀಡಿದ, ಬಾಳಿನ ನೋವು–ನಲಿವುಗಳನ್ನೇ ಸಾಹಿತ್ಯವನ್ನಾಗಿಸಿಕೊಂಡ ಒಂದು ಅಪೂರ್ವ ಪ್ರಕಾರವಾಗಿದೆ. ತಲೆತಲಾಂತರದಿಂದ ಬಾಯಿಂದ ಬಾಯಿಗೆ ಬೆಳೆದುಬಂದಿರುವ "ಇದು ಸಾಮಾನ್ಯ ಜನತೆಯ ವೇದ, ಗ್ರಾಮ ಸಂಸ್ಕೃತಿಯ ದರ್ಪಣ. ಹಳ್ಳಿಯ ಸರಳಜೀವನದ ವಿವಿಧ ಮುಖಗಳು ಅದರಲ್ಲಿ ಮಾರ್ಪೊಳೆಯುತ್ತವೆ. ಸಂಸಾರದ ಕಷ್ಟ–ಕ್ಲೇಶಗಳು, ಸುಖ–ಸಂತೋಷಗಳು, ಬಂಧು–ಮಿತ್ರರ ವಿವಿಧ ಸಂಬಂಧಗಳು, ಜಾತಿಮತ, ಹಬ್ಬ–ಹರಿದಿನ, ರೂಢಿ–ಸಂಪ್ರದಾಯಗಳು, ಒಟ್ಟಿನಲ್ಲಿ ಅವರ ಜೀವನವನ್ನು ರೂಪಿಸುವ ಸ್ಫೂರ್ತಿ ವಿಶೇಷಗಳು ಜಾನಪದ ವಾಙ್ಮಯದಲ್ಲಿ ವಿಪುಲವಾಗಿ ದೋರಕುತ್ತವೆ.[೬]

ಯಾವುದೇ ಜನಾಂಗದ ಸಂಸ್ಕೃತಿಯನ್ನರಿಯಲು ಅದರ ಜನಪದ ಸಂಪತ್ತನ್ನು ಕೂಲಂಕುಷವಾಗಿ ಅಭ್ಯಸಿಸಬೇಕಾದುದು ಅಗತ್ಯ.ಕಾರಣ ಇವುಗಳು ಆಯಾ ಸಮಾಜದ ಮಾನಸಿಕ ಚೈತನ್ಯದ ಪ್ರತಿಬಿಂಬಗಳಾಗಿವೆ. ಅವು ಸಾಹಿತ್ಯ ಮುಖೇನವೂ ವ್ಯಕ್ತವಾಗುತ್ತದೆ. ಬಂಜಾರ ಸಮುದಾಯದ ಜನಪದ ಸಾಹಿತ್ಯ ಯಾರೂ ಕೃಷಿ ಮಾಡದ ಕನ್ನೆನೆಲ. "ಜನಪದದ ಕಣಜವೇ" ಆ ಜನಾಂಗದ ಆಚಾರ–ವಿಚಾರ, ನಡೆ–ನುಡಿಗಳಲ್ಲಿ ಅಡಗಿದೆ.

---

೬. ದೆ.ಜವರೇಗೌಡ, ಜನಪದ ಸೌಂದರ್ಯ, ಸಹ್ಯಾದ್ರಿ ಪ್ರಕಾಶನ, ಮೈಸೂರು ೧೯೭೮.

ಹಾಡು, ಕುಣಿತ, ವೇಷ-ಭೂಷಣ, ಮದುವೆ-ಮುಂಜಿವೆ, ಜನನ-ಮರಣ, ಹಬ್ಬ-ಹರಿದಿನಗಳು ಹಾಗೂ ವಿಶಿಷ್ಟ ಸಂಸ್ಕಾರಾದಿಗಳು ಅವರ ಸಮಾಜ ಮತ್ತು ಸಂಸ್ಕೃತಿಯನ್ನು ಎತ್ತಿಹಿಡಿಯಬಲ್ಲ ಕುರುಹುಗಳಾಗಿವೆ. ತಮ್ಮದೇ ಆದ ಸಮಾಜ ಸಂಪ್ರದಾಯದ ಜೊತೆಗೆ ಸಂಸ್ಕೃತಿಯನ್ನು ಪೋಷಿಸಿಕೊಂಡು ಹೋಗುವ ಮನೋಭಾವನೆಯೂ ಇದೆ.

ಬಂಜಾರ ಸಮುದಾಯದ ಜನಪದ ಸಾಹಿತ್ಯ ಪ್ರಕಾರಗಳನ್ನು ಪ್ರಮುಖವಾಗಿ ನಾಲ್ಕು ರೀತಿಯಿಂದ ವಿಂಗಡಿಸಬಹುದು: ೧) ಗೀತೆ ೨) ಕಥೆ ೩) ಗಾದೆ-ನುಡಿಗಟ್ಟುಗಳು ಹಾಗೂ ೪) ಒಗಟುಗಳು. ಇವುಗಳನ್ನು ಒಂದೊಂದಾಗಿ ಕೂಲಂಕುಷವಾಗಿ ವಿವೇಚಿಸಿದಲ್ಲಿ ಅವರ ಸಂಸ್ಕೃತಿಯ ಸ್ವರೂಪವನ್ನರಿಯಲು ಸಾಧ್ಯವಾಗುತ್ತದೆ. ದೈನಂದಿನ ಕಷ್ಟ, ಸುಖ, ಸಮಸ್ಯೆಯ ಜೀವಂತ ದರ್ಶನ ಇವುಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಬದುಕಿನ ನೈಜ ಚಿತ್ರಣವನ್ನು, ಜೀವನಾನುಭವವನ್ನು ಈ ಜನಪದ ಸಾಹಿತ್ಯ ಪ್ರಕಾರಗಳು ಚಿತ್ರಿಸುತ್ತವೆ.

ಬುಡಕಟ್ಟಿನ ವಿಶಿಷ್ಟ ಗುಣಲಕ್ಷಣಗಳನ್ನು ಇಂದಿಗೂ ಜೀವಂತವಾಗಿರಿಸಿಕೊಂಡು ಬಂದಿರುವ ಸಮುದಾಯಗಳಲ್ಲಿ ಲಂಬಾಣಿ ಸಮುದಾಯ ಒಂದು. ಜಾತಿ ಸಂಸ್ಕೃತಿಯ, ನವನಾಗರಿಕತೆಯ ಗಾಳಿ ಎಷ್ಟೇ ಬೀಸಿದರೂ ಈ ಸಮುದಾಯವು ಹಲವಾರು ಅಂಶಗಳಲ್ಲಿ ತನ್ನತನವನ್ನು ಉಳಿಸಿಕೊಂಡು ಬಂದಿರುವುದು ಸೋಜಿಗವೆನಿಸಿದರೂ ಅಷ್ಟೇ ಸತ್ಯವಾದುದು ಕೂಡ. ವಾಸಸ್ಥಳ, ಭಾಷೆ, ಉಡುಗೆ-ತೊಡುಗೆ, ಆಹಾರ ಪದ್ಧತಿ, ವೃತ್ತಿ ಆರಾಧನಾ ಸಂಪ್ರದಾಯಗಳು, ವಾರ್ಷಿಕ ಆವರ್ತನ ಆಚರಣೆಗಳು, ಜೀವನಾವರ್ತನ ಆಚರಣೆಗಳು ಹೀಗೆ ಒಟ್ಟು ಜೀವನಕ್ರಮದಲ್ಲೇ ವಿಶಿಷ್ಟತೆಯನ್ನು ಉಳಿಸಿಕೊಂಡು ಬಂದಿರುವ ಸಮುದಾಯ ವಿದು. ರಾಜಾಸ್ಥಾನದ ಕಡೆಯಿಂದ ಅಲೆಮಾರಿಗಳಾಗಿ ಬಂದಿರುವ ಲಂಬಾಣಿಗಳು ಮೂಲತಃ ಸರಕು ಸಾಗಾಣಿಕೆ ವೃತ್ತಿಯನ್ನು ಅವಲಂಬಿಸಿಕೊಂಡಿದ್ದರೆಂಬುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ತಾಂಡಗಳೆಂಬ ಪ್ರತ್ಯೇಕ ವಸತಿ ಪ್ರದೇಶಗಳನ್ನು ನಿರ್ಮಿಸಿ ಕೊಂಡು, ನೆಲೆಯೂರಿರುವ ಇವರ ಬಗ್ಗೆ ಕನ್ನಡದಲ್ಲಿ ಈಗಾಗಲೇ ಸಾಕಷ್ಟು ಗಮನಾರ್ಹವಾದ ಅಧ್ಯಯನಗಳು ನಡೆದಿವೆ.

ಸಾಹಿತ್ಯಿಕವಾಗಿ ಹೇಳುವುದಾದರೆ ಮೊದಲಿಗೆ ಸುಮಂಗಲಾ ಬಾದರದಿನ್ನಿಯವರ ಲೇಖನವನ್ನು ನೋಡಬೇಕು. ಲಿಪಿಯಿಲ್ಲದ ಲಂಬಾಣಿ ಭಾಷೆಯ ಮೇಲೆ ರಾಜಾಸ್ಥಾನಿ, ಮಾರವಾಡಿ, ಗುಜರಾತ್, ಮರಾಠಿ ಹಾಗೂ ತೆಲುಗು ಭಾಷೆಗಳು ಪ್ರಭಾವ ಬೀರಿದ್ದು, ಲಂಬಾಣಿ ಭಾಷೆಯಲ್ಲಿ ಈ ಎಲ್ಲ ಭಾಷೆಗಳ ಅನೇಕ ಪದಗಳಿವೆ. ಆಯಾ ಪ್ರಾದೇಶಿಕ

ಭಾಷೆಯ ಪ್ರಭಾವ ಸಾಕಷ್ಟಿದ್ದರೂ ತನ್ನ ಮೂಲ ಸತ್ವವನ್ನು ಬಿಡದೆ ಇನ್ನೂ ಆಡುಭಾಷೆಯಾಗಿ ಉಳಿದು ಬಂದಿರುವುದು ಕುತೂಹಲದ ವಿಷಯ ಎಂದಿದ್ದಾರೆ.[೭] ಭಾಷೆಯ ಬಗೆಗೆ ಉಪಯುಕ್ತ ಮಾಹಿತಿಯನ್ನು ಹೊಂದಿರುವ ಎಂ.ಚಿದಾನಂದಮೂರ್ತಿ[೮] ಅವರ ಲೇಖನದಲ್ಲಿ ವಿದ್ವಾಂಸರು ಲಂಬಾಣಿ ಭಾಷೆ ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಭಾಷೆ ಎಂಬುದನ್ನು ವಿವರಿಸುತ್ತ ಅವರ ನಿತ್ಯೋಪಯೋಗಿ ಪದಗಳೆಲ್ಲವೂ ಇಂಡೋ ಆರ್ಯನ್ ಪದಗಳು ಎಂಬ ಅಂಶಕ್ಕೆ ಒತ್ತುಕೊಟ್ಟು ಉದಾಹರಣೆ ಸಹಿತ ವಿವರಿಸಿರುವುದು ಅಧ್ಯಯನ ಯೋಗ್ಯವಾಗಿದೆ. ಎನ್.ಬಸವರಾಜ್[೯] ಅವರು ಲಂಬಾಣಿ ಭಾಷೆ ಹಾಗೂ ಗೀತೆಗಳಿಗೆ ಸಂಬಂಧಿಸಿದಂತೆ ಕೆಲವು ಪ್ರಾಥಮಿಕ ವಿವರಗಳನ್ನು ನೀಡಿದ್ದಾರೆ. ಮತ್ತೊಬ್ಬ ವಿದ್ವಾಂಸ ಡಿ.ಬಿ.ನಾಯಕ[೧೦] ಅವರು ಲಂಬಾಣಿಗರ 'ಗೋರ್‌ಬೋಲಿ ಭಾಷೆ' ಇಂಡೋ ಆರ್ಯನ್ ಭಾಷೆಗೆ ಸೇರಿದ್ದು ಎನ್ನುತ್ತಾರೆ. ಜೊತೆಗೆ ಲಂಬಾಣಿಗರ ಹಾಡು, ಕಥೆ, ಗಾದೆ, ಒಗಟುಗಳನ್ನು ಸಂಕ್ಷಿಪ್ತವಾಗಿ ಇವರು ವಿಶ್ಲೇಷಣೆಗೆ ಒಳಪಡಿಸಿರುವ ರೀತಿ ಗಮನಾರ್ಹವಾದುದು. ಈ ಭಾಷೆಗೆ ಲಿಪಿ ಹಾಗೂ ಸ್ವತಂತ್ರ ಇತಿಹಾಸವಿಲ್ಲ ಎಂದಿರುವ ನಾಯಕ ಅವರು ಆಯಾ ಪ್ರಾಂತೀಯ ಭಾಷೆಗಳ ಲಿಪಿಯಲ್ಲಿಯೇ ಅವರ ಸಾಹಿತ್ಯ ಮಂದಗತಿಯಲ್ಲಿ ನಿರ್ಮಾಣ ಗೊಳ್ಳುತ್ತಲಿದೆ ಎಂದಿದ್ದಾರೆ.

ಶ್ರೀ ಅಮರಸಿಂಗ್ ರಾಠೋಡ್ ಅವರ ಸಂಶೋಧನಾ ಪ್ರಬಂಧವು[೧೧] ಪ್ರಮುಖವಾಗಿ ವ್ಯಾಕರಣ ಅಂಶಗಳಿಂದ ಕೂಡಿದ್ದು, ಸಾಂಸ್ಕೃತಿಕ ದೃಷ್ಟಿಕೋನದ ಹಿನ್ನಲೆಯಲ್ಲಿ ಅಧ್ಯಯನ ನಡೆದಿದೆ. ಲಂಬಾಣಿಗರ ಸ್ಥೂಲ ಪರಿಚಯದ ಜೊತೆಗೆ ಲಂಬಾಣಿ ಮತ್ತು ರಜಪೂತರ ಸಾಮ್ಯತೆಯನ್ನು ತೋರಿಸುವ ಈ ಮಹಾಪ್ರಬಂಧ ಆರ್ಯ ಮೂಲದ ಭಾಷೆಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡುವವರಿಗೆ ಹಾಗೂ ಲಂಬಾಣಿ ಭಾಷೆಯನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವವರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದೆ. ವಿ.ಎಚ್.

---

೭. ಸುಮಂಗಲಾ ಬಾದರದಿನ್ನಿ, ಲಂಬಾಣಿಗರು: ವರ್ಣರಂಜಿತ ಬದುಕು ಬವಣೆ, ತರಂಗ, ೨೨ನೇ ನವೆಂಬರ್ ೨೦೦೧, ಪು. ೨೩.

೮. ಎಂ. ಚಿದಾನಂದಮೂರ್ತಿ, ಸಂಶೋಧನ ತರಂಗ, ೧೯೭೦, ಪು. ೧೦-೧೯.

೯. ಎನ್. ಬಸವರಾಜ್, ಲಂಬಾಣಿಗರು ಮತ್ತು ಬಗ್ಗರು, ೧೯೭೭.

೧೦. ಡಿ.ಬಿ. ನಾಯಕ, ಲಂಬಾಣಿ ಸಂಸ್ಕೃತಿ, ೧೯೯೪, ಪು. ೩೨-೩೭.

೧೧. ಶ್ರೀ ಅಮರಸಿಂಗ್ ರಾಠೋಡ, Lambani Language, Its Grammer and relation with Rajasthani and Hindi, (ಮರಾಠಿ ಪ್ರಬಂಧ, ಕ.ವಿ.ವಿ.) ೧೯೭೧.

ಬಾರಿಕೇರಿ ಅವರ ಮಹಾಪ್ರಬಂಧವು[೧೨] ಭಾಷಿಕ ವಿಷಯಗಳಿಗೆ ವಿಶೇಷ ಮಹತ್ವ ಕೊಡುವುದರಿಂದ ಭಾಷಾವಿಜ್ಞಾನಿಗಳಿಗಿದು ಹೆಚ್ಚು ಉಪಯುಕ್ತವಾಗಿದೆ. ಲಂಬಾಣಿ ಭಾಷೆಯ ವರ್ಣನಾತ್ಮಕ ಅಧ್ಯಯನ ನಿರೂಪಣೆ ಇಲ್ಲಿಯ ಉದ್ದೇಶವಾಗಿದ್ದು, ಲಂಬಾಣಿ ಭಾಷೆಯ ಬಗ್ಗೆ ಅಧ್ಯಯನ ಮಾಡುವವರಿಗೆ ತುಂಬಾ ಸಹಕಾರಿಯಾಗಿದೆ. ಒಟ್ಟಿನಲ್ಲಿ ಈ ಮಹಾಪ್ರಬಂಧ ಭಾಷಾದೃಷ್ಟಿಯಿಂದ ಹೆಚ್ಚಿನ ಮಹತ್ವವನ್ನು ಪಡೆಯುತ್ತದೆ.

ಪಿ.ಕೆ.ಖಂಡೋಬಾ ಅವರು ತಮ್ಮ ಮಹಾಪ್ರಬಂಧದಲ್ಲಿ[೧೩] ಲಂಬಾಣಿ ಭಾಷೆಯು ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಭಾಷೆ ಎನ್ನುತ್ತಾರೆ. ಅವರಾಡುವ ದಿನನಿತ್ಯದ ಬಳಕೆಯ ಪದಗಳೆಲ್ಲ ಇಂಡೋ ಆರ್ಯನ್ ಪದಗಳೇ ಆಗಿದ್ದು, ಇಂಡೋ ಆರ್ಯನ್ ವರ್ಗಕ್ಕೆ ಸೇರಿದ ಹಿಂದಿ, ಸಂಸ್ಕೃತ ಭಾಷೆಗಳೇ ಇವಕ್ಕೆ ಪ್ರೇರಕಗಳಾಗಿವೆ. ಅಂದರೆ ಲಂಬಾಣಿ ಭಾಷೆಯಲ್ಲಿನ ಹಲವಾರು ನಿತ್ಯೋಪಯೋಗಿ ಪದಗಳು ಹಿಂದಿ ಇಲ್ಲವೆ ಸಂಸ್ಕೃತ ಮೂಲದಿಂದ ಬಂದ ಪದವೆಂಬುದನ್ನು ನಿದರ್ಶನಗಳ ಮೂಲಕ ವಿವರಿಸಿದ್ದಾರೆ. ಜೊತೆಗೆ ಲಂಬಾಣಿ ಭಾಷೆಗೆ ಕನ್ನಡ, ರಾಜಸ್ಥಾನಿ, ಮಾರವಾಡಿ, ಗುಜರಾತಿ, ಮರಾಠಿ, ತೆಲುಗು ಭಾಷೆಗಳ ಪ್ರಭಾವ ಆಗಿದೆ ಎಂಬುದನ್ನು ಕೂಡ ಉಲ್ಲೇಖಿಸಿರುವುದು ಸ್ವಾಗತಾರ್ಹ ಪ್ರಯತ್ನವಾಗಿದೆ.

ಹಿಂದಿಯ ಉಪಭಾಷೆಯಂತಿರುವ ಲಂಬಾಣಿ ಭಾಷೆಯನ್ನು ಮಾತನಾಡುವ ಲಂಬಾಣಿ ಜನ ಕರ್ನಾಟಕದ ಕಡೂರು – ಶಿವಮೊಗ್ಗ ಜಿಲ್ಲೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ವಾಸಿಸುತ್ತಿದ್ದರೆಂಬ ಮಾಹಿತಿಯನ್ನು ಲೂಯಿಸ್ ರೈಸ್[೧೪] ಅವರು ನೀಡುತ್ತಾರೆ.

ಗೊ.ರು. ಚೆನ್ನಬಸಪ್ಪ[೧೫] ಅವರು ತಮ್ಮ ಲೇಖನದಲ್ಲಿ ಲಂಬಾಣಿ ಮಹಿಳೆಯರು ಹಾಡುತ್ತ ಯಾವ್ಯಾವ ರೀತಿಯ ಹಾವಭಾವಗಳಿಂದ ನರ್ತಿಸುತ್ತಾರೆಂಬುದನ್ನು ವಿವರಿಸುತ್ತ ಲಂಬಾಣಿ ಕುಣಿತದ ಬಗೆಗೆ ಮಾಹಿತಿ ಮಾಡಿಕೊಡುತ್ತಾರೆ. ಅವರು ಕುಣಿಯುವ

---

೧೨. ವಿ.ಎಚ್. ಬಾರಿಕೇರಿ, ವಿಜಾಪುರ ಜಿಲ್ಲೆಯ ಲಂಬಾಣಿ ಆಡುಭಾಷೆಯ ವರ್ಣನಾತ್ಮಕ ವಿಶ್ಲೇಷಣೆ, ಕರ್ನಾಟಕ ವಿ.ವಿ., ೧೯೮೨.

೧೩. ಪಿ.ಕೆ. ಖಂಡೋಬಾ, ಕರ್ನಾಟಕದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ, ೧೯೯೧, ಪು. ೨೫೨–೨೬೫.

೧೪. Lewis Rice, Report on the Mysore Census of 1881, P.69.

೧೫. ಗೊ.ರು.ಚೆನ್ನಬಸಪ್ಪ, ಕರ್ನಾಟಕ ಜನಪದ ಕಲೆಗಳು, ೧೯೭೭೮, ಪು.೧೫೪–೧೫೬.

ಸಂದರ್ಭ, ಲಯ, ಕುಣಿತದ ಗತಿ ಮುಂತಾದ ವಿಷಯಗಳನ್ನು ಆಕರ್ಷಕವಾಗಿ ವಿವರಿಸುತ್ತಾರೆ.

ಹರಿಲಾಲ ಪವಾರ ಮತ್ತು ಪಂಡಿತ ಕೆ.ರಾಠೋಡ ಅವರು ತಮ್ಮ ಕೃತಿ[೧೬]ಯ ಅನುಬಂಧದಲ್ಲಿ ಲಂಬಾಣಿಗರ ಹೋಳಿಗೀತೆಗಳನ್ನು ಸಂಗ್ರಹಿಸಿ ಕೊಟ್ಟಿರುವುದು ಸಂಗ್ರಹ ಯೋಗ್ಯವಾಗಿದೆ.

ಪವಾರ ಜಗನ್ನಾಥ ಅವರ ಕೃತಿಯಲ್ಲಿ ಲಂಬಾಣಿ ಜನಪದಗೀತೆಗಳ ಪಕ್ಷಿನೋಟವಿದೆ. ಲಂಬಾಣಿ ಜನಪದ ಸಾಹಿತ್ಯ ಪ್ರಕಾರವಾದ ಗೀತೆಗೆ ಸಂಬಂಧಿಸಿದಂತೆ ಮೊದಲ ಕೃತಿಯಾದ ಇದು ಲಂಬಾಣಿ ಜಾನಪದ ಅಧ್ಯಯನಕ್ಕೆ ಚಾಲನೆ ಒದಗಿಸುತ್ತದೆ.[೧೭] ಲಂಬಾಣಿಗರಲ್ಲಿ ರೂಢಿಯಲ್ಲಿರುವ ಬಂಧುತ್ವ ಪದ್ಧತಿ, ಪ್ರೀತಿ, ವಿಶ್ವಾಸ, ಹಾಸ್ಯ, ನೀತಿ ಇತ್ಯಾದಿ ವಿಚಾರಗಳಿಗೆ ಸಂಬಂಧಿಸಿದ ಹಾಡುಗಳು ಬೆನಕನಹಳ್ಳಿ ಜಿ.ನಾಯಕ್ ಅವರ ಕೃತಿಯಲ್ಲಿದೆ.[೧೮] ಈ ಕೃತಿ ಲಂಬಾಣಿ ಗೀತೆಗಳ ಪಕ್ಷಿನೋಟವಾಗಿದೆಯೇ ಹೊರತು ಲಂಬಾಣಿಗರ ಗೀತಸಾಹಿತ್ಯವನ್ನು ನಿರೂಪಿಸುವ ಪ್ರಯತ್ನವಾಗಿಲ್ಲ.

ಡಿ.ಬಿ.ನಾಯಕ[೧೯] ಅವರು 'ಲಂಬಾಣಿ ಢಾಡಿ: ವೃತ್ತಿಗಾಯಕ' ಎಂಬ ಲೇಖನದಲ್ಲಿ ಢಾಡಿಗಳು ಯಾವ್ಯಾವ ರೀತಿಯ ಕಾವ್ಯಗಳನ್ನು ಹಾಡುತ್ತಾರೆಂಬ ವಿಷಯದ ಮೇಲೆ ಬೆಳಕು ಚೆಲ್ಲುತ್ತಾರೆ. ಅಲ್ಲದೆ ಢಾಡಿ ಎಂದರೆ ಯಾರು. ಅವರ ವೃತ್ತಿ ಯಾವುದು ಎಂಬುದನ್ನು ಪರಿಚಯಿಸುವುದು ಇಲ್ಲಿನ ಮುಖ್ಯ ಉದ್ದೇಶವಾಗಿದೆ. ಢಾಡಿಯರನ್ನು ಕುರಿತಂತೆ 'ಢಾಡಿ–ಒಂದು ಸಂಚಾರಿ ಗಾಯಕ ಜನಾಂಗ' ಎಂಬ ಲೇಖನದಲ್ಲಿ ಹರಿಲಾಲ ಪವಾರ ಅವರು ಢಾಡಿಯರನ್ನು 'ಸಂಚಾರಿ ನಿಘಂಟು'ಗಳೆಂದು ಕರೆದಿದ್ದಾರೆ.[೨೦]

---

೧೬. ಹರಿಲಾಲ ಪವಾರ ಮತ್ತು ಪಂಡಿತ ಕೆ.ರಾಠೋಡ, ಲಂಬಾಣಿಗರಲ್ಲಿ ಹೋಳಿಹಬ್ಬ, ೧೯೯೭, ಪು. ೨೮–೪೪.

೧೭. ಪವಾರ ಜಗನ್ನಾಥ, ಗೋರೂರ್ ಗೀದ್, ೧೯೬೯.

೧೮. ಬೆನಕನಹಳ್ಳಿ ಜಿ.ನಾಯಕ್, ಲಂಬಾಣಿಗರ ಜನಪದ ಗೀತೆಗಳು, ೧೯೮೧.

೧೯. ವೀರಣ್ಣದಂಡೆ (ಸಂ.), ಜಾನಪದ – ೧೯೯೨, ಪು. ೨೪೪–೨೫೦.

೨೦. ಎಚ್.ವಿ.ನಾಗೇಶ (ಪ್ರಸಂ.) ಬರಹಬಾಗಿನ – ಹಂಪನಾ ಷಷ್ಟ್ಯಬ್ಧ ಗ್ರಂಥ, ೧೯೯೬, ಪು. ೫೦೮–೫೧೫.

ಎಚ್.ಡಿ. ಲಮಾಣಿಯವರು ತಮ್ಮ ಮಹಾಪ್ರಬಂಧದಲ್ಲಿ ಲಂಬಾಣಿ ಜನಪದ ಗೀತ ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಸ್ತುನಿಷ್ಠವಾದ ಸಾಧಾರವಾದ ಪ್ರತಿಪಾದನೆಯನ್ನು ಮಾಡಿರುವುದು ಮುಖ್ಯವಾಗುತ್ತದೆ.[೨೧] ಒಟ್ಟಾರೆ ಲಂಬಾಣಿ ಜನಪದಗೀತೆಗಳಿಗೆ ಸಂಬಂಧಿಸಿ ದಂತೆ ಪುಷ್ಪಲತಾ ರಾಂಪುರೆಯವರ 'ಬಂಜಾರ ಲೋಕ ಗೀತೋಂಕಾ ಸಮೂಹ' ಮಹಾಪ್ರಬಂಧ ಮೊದಲ ಅಧ್ಯಯನವಾದರೆ, ಇದು ಎರಡನೆಯ ಅಧ್ಯಯನವಾಗಿದೆ.

ಡಿ.ಬಿ.ನಾಯಕ ಅವರ 'ಲಂಬಾಣಿ ಜನಪದ ಸಾಹಿತ್ಯ' ಕೃತಿ[೨೨] ಹೆಸರೇ ಸೂಚಿಸುವಂತೆ ವಿವಿಧ ಪ್ರಕಾರಗಳಲ್ಲಿ ಕಾಣಸಿಗುವ ಲಂಬಾಣಿ ಜನಪದ ಸಾಹಿತ್ಯ ಅಧ್ಯಯನದ ಮೂಲಕ ಆ ಸಮುದಾಯದ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತಿಗತಿಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡುತ್ತದೆ. ಇದು ಮುಖ್ಯವಾಗಿ ಕರ್ನಾಟಕದ ಲಂಬಾಣಿಗರ ಜನಪದ ಸಾಹಿತ್ಯದ ಅಧ್ಯಯನ ಹಾಗೂ ಅದರದ್ದೇ ಆದ ವಿಶಿಷ್ಟತೆಯನ್ನು ಗುರುತಿಸುವುದರ ಜೊತೆಗೆ ಕನ್ನಡ ಜನಪದ ಸಾಹಿತ್ಯದೊಂದಿಗಿನ ಸಮಾಂತರತೆಯನ್ನು ಸಾಂದರ್ಭಿಕವಾಗಿ ಪ್ರಸ್ತಾಪಿಸುತ್ತದೆ. ಲಂಬಾಣಿ ಸಮುದಾಯಕ್ಕಷ್ಟೇ ವಿಶಿಷ್ಟವಾದುದೆಂದು ಲೇಖಕರು ಗುರುತಿಸುವ ಹಾಡುಗಳಂತೂ ಅವುಗಳ ಸಾಂಸ್ಕೃತಿಕ ಅನನ್ಯತೆಯಿಂದಾಗಿ ಗಮನ ಸೆಳೆಯುತ್ತವೆ. ಒಟ್ಟಿನಲ್ಲಿ ಲಂಬಾಣಿ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಅನಾವರಣಗೊಳಿಸುವುದರ ಜೊತೆಗೆ ಆ ಭಾಷೆಯಲ್ಲಿರುವ ಜನಪದ ಸಾಹಿತ್ಯವನ್ನು ಕನ್ನಡಿಗರಿಗೆ ಪರಿಚಯಿಸುವ ಕೆಲಸವನ್ನು ಈ ಕೃತಿಯು ಸಮರ್ಥವಾಗಿ ನಿರ್ವಹಿಸಿದೆ.

ಸಣ್ಣರಾಮ ಅವರ ಕೃತಿಯಲ್ಲಿ ಲಂಬಾಣಿಗರ ಜನಪದ ಸಾಹಿತ್ಯವನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಲಾಗಿದೆ.[೨೩] ಕತೆ, ಗೀತೆ, ಗಾದೆ, ಒಗಟು, ಲಾವಣಿಗಳನ್ನು ವಿವರವಾಗಿ ವಿವರಿಸಿ ವಿಶ್ಲೇಷಿಸಿದ ರೀತಿ ಬಹಳ ಮುಖ್ಯವಾದುದಾಗಿದೆ.

ಹರಿಲಾಲ ಪವಾರ ಅವರು ತಮ್ಮ ಕೃತಿಯಲ್ಲಿ ಸತಿಪದ್ಧತಿಯ ಉಗಮ ವಿಕಾಸ ಮತ್ತು ಕಾರಣಗಳ ಹಿನ್ನೆಲೆಯೊಂದಿಗೆ ಲಂಬಾಣಿ ಬುಡಕಟ್ಟಿನಲ್ಲಿ ಪ್ರಚಲಿತವಿದ್ದ ಸತಿ ಪದ್ಧತಿ ಆಚರಣೆಯ ಸ್ವರೂಪ, ಪ್ರೇರಣೆ ಮುಂತಾದ ಅಂಶಗಳನ್ನು ಸಾಕಷ್ಟು ಆಳವಾಗಿ

---

೨೧. ಎಚ್.ಡಿ.ಲಮಾಣಿ, ಕರ್ನಾಟಕ ಕೆ ಲಮಾಣಿ ಲೋಕ ಗೀತೋಂಕಾ ಸಾಹಿತ್ಯಕ ಅಧ್ಯಯನ್ (ಅಪ್ರಕಟಿತ ಹಿಂದಿ ಮಹಾಪ್ರಬಂಧ), ಕರ್ನಾಟಕ ವಿಶ್ವವಿದ್ಯಾಲಯ, ೧೯೮೬.

೨೨. ಡಿ.ಬಿ.ನಾಯಕ, ಲಂಬಾಣಿ ಜನಪದ ಸಾಹಿತ್ಯ ೨೦೦೦.

೨೩. ಸಣ್ಣರಾಮ, ಲಂಬಾಣಿ–ಸಂಸ್ಕೃತಿ, ೧೯೯೯.

ವಿವೇಚಿಸಿ ಆಧಾರಸಮೇತ ನಿರೂಪಿಸಿದ್ದಾರೆ.[೨೪] ಈ ಬರಹ ವಿವರಣಾತ್ಮಕವೂ, ವಿವೇಚನಾತ್ಮಕವೂ, ಸಂಶೋಧನಾತ್ಮಕವೂ ಆಗಿದ್ದು, ನೇರ ಸರಳ ನಿರೂಪಣೆ, ಸಾಧಾರಣ ವಿಷಯ ಪ್ರತಿಪಾದನೆ, ನಿರಲಂಕೃತ ಭಾಷಾ ಬಳಕೆ ಕೃತಿಯ ವೈಶಿಷ್ಟ್ಯವೆನಿಸಿದೆ. ಈ ದೃಷ್ಟಿಯಿಂದ ಇದೊಂದು ಮಹತ್ವದ ಅಧ್ಯಯನವಾಗಿದೆ.

ಲಂಬಾಣಿಗಳ ಆಚಾರ–ವಿಚಾರ, ನ್ಯಾಯ–ನೀತಿ ಧೋರಣೆ, ಸಂಪ್ರದಾಯ ಮೊದಲಾದವುಗಳಿಗೆ ಸಂಬಂಧಿಸಿದಂತೆ ೨೨೫ ಗಾದೆಗಳನ್ನು ಆಕಾರಾದಿಯಾಗಿ ಸಂಗ್ರಹಿಸಿ ಸಂಪಾದಿಸಿ ಅವುಗಳಿಗೆ ಕನ್ನಡ ಅನುವಾದವನ್ನು ಸಣ್ಣರಾಮ ಅವರು ಒದಗಿಸಿರುತ್ತಾರೆ.[೨೫] ಅಲ್ಲದೆ ಲಂಬಾಣಿ–ಕನ್ನಡ ಅರ್ಥಕೋಶವನ್ನು ಕೊಟಿರುವುದು ಅರ್ಥವತ್ತಾಗಿದೆ. ಲಿಪಿರಹಿತ ಗಾದೆಗಳನ್ನು ಕನ್ನಡ ಲಿಪಿಯಲ್ಲಿ ಸಂಗ್ರಹಿಸಿಕೊಟ್ಟ ಮತ್ತೊಬ್ಬ ವಿದ್ವಾಂಸ ಪಿ.ಕೆ.ಖಂಡೋಬಾ[೨೬] ಅವರು. ಡಿ.ಬಿ.ನಾಯಕ ಎಂಬ ವಿದ್ವಾಂಸರು ಗಾದೆಯ ಹುಟ್ಟು, ಬೆಳವಣಿಗೆ, ಲಕ್ಷಣಗಳು, ಲಂಬಾಣಿ ಗಾದೆಗಳು ಪ್ರಯೋಗವಾಗುವ ಸಂದರ್ಭ, ಅದರ ಕಾರ್ಯಗಳು, ವರ್ಗೀಕರಣ ಹಾಗೂ ಗಾದೆಗಳಲ್ಲಿ ಲಂಬಾಣಿ ಸಂಸ್ಕೃತಿ ವ್ಯಕ್ತವಾಗುವ ರೀತಿಯನ್ನು ಹೇಳುವುದರ ಜೊತೆಗೆ ಲಂಬಾಣಿ ಗಾದೆಗಳ ವೈಶಿಷ್ಟ್ಯವನ್ನು ನಿರೂಪಿಸಿರುವುದು ಸ್ತುತ್ಯಾರ್ಹ ಪ್ರಯತ್ನ ಎನ್ನಬಹುದು.[೨೭]

ಲಂಬಾಣಿ ಜನಪದ ಸಾಹಿತ್ಯದ ಮತ್ತೊಂದು ಪ್ರಕಾರವಾದ ಲಂಬಾಣಿ ಒಗಟುಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಅರಿಯಲು ಪಿ.ಕೆ.ಖಂಡೋಬಾ ಅವರ ಕೃತಿ ಉಪಯುಕ್ತ ಆಕರವಾಗಿದೆ.[೨೮] ಕನ್ನಡದಲ್ಲಿ ಪ್ರಥಮಬಾರಿಗೆ ಲಂಬಾಣಿ ಸಮುದಾಯದ ೨೨೦ ಒಗಟುಗಳನ್ನು ಸಂಪಾದಿಸಿರುವ ಇವರು ಇದರಲ್ಲಿ ಪ್ರಾಣಿ, ಸಸ್ಯ, ಕೃಷಿ, ದಿನಬಳಕೆಯ ವಸ್ತು ಮತ್ತು ಆ ಸಮಾಜದ ವಿಶಿಷ್ಟ ಸಂಸ್ಕೃತಿ ಸಂಪ್ರದಾಯಗಳಿಗೆ ಸಂಬಂಧಿಸಿದ ಒಗಟುಗಳನ್ನು ಗಮನಿಸಿದ್ದಾರೆ. ಇದೇ ಪ್ರಕಾರಕ್ಕೆ ಸಂಬಂಧಿಸಿದಂತೆ ಮತ್ತೊಂದು ಅತ್ಯುತ್ತಮ ಸಂಗ್ರಹ ಸಣ್ಣರಾಮ[೨೯] ಅವರದು. ಈ ಕೃತಿಯಲ್ಲಿ ಒಗಟುಗಳನ್ನು ಸಂಗ್ರಹಿಸಿ, ಸಂಪಾದಿಸಿ,

---

೨೪. ಹರಿಲಾಲ ಪವಾರ, ಬೆಂಕಿಯಲ್ಲಿ ಕಮರಿದ ಹೂವು ಹೂನಾಸತಿ, ೨೦೦೩.

೨೫. ಸಣ್ಣರಾಮ, ಲಂಬಾಣಿ ಗಾದೆಗಳು, ೧೯೮೨.

೨೬. ಪಿ.ಕೆ.ಖಂಡೋಬಾ, ಲಂಬಾಣಿ ಗಾದೆಗಳು, ೧೯೮೮.

೨೭. ಡಿ.ಬಿ.ನಾಯಕ, ಬುಡಕಟ್ಟಿನ ಲಂಬಾಣಿ ಗಾದೆಗಳು, ೨೦೦೧.

೨೮. ಪಿ.ಕೆ.ಖಂಡೋಬಾ, ಲಂಬಾಣಿ ಒಗಟುಗಳು, ೧೯೮೮.

೨೯. ಸಣ್ಣರಾಮ, ಲಂಬಾಣಿ ಒಗಟುಲೋಕ, ೧೯೯೭.

ವಿಂಗಡಿಸಿ ಎಲ್ಲ ಒಗಟುಗಳಿಗೂ ಕನ್ನಡಾನುವಾದ ಕೊಟ್ಟಿದ್ದಾರೆ. ಮುಖ್ಯವಾಗಿ ಕನ್ನಡ ಮತ್ತು ಲಂಬಾಣಿ ಭಾಷೆಯ ಒಗಟುಗಳ ತೌಲನಿಕ ಅಧ್ಯಯನಕ್ಕೆ ಈ ಕೃತಿ ಪ್ರಮುಖ ಆಕರವಾಗುತ್ತದೆ.

ಭಾಷಿಕ ಅಧ್ಯಯನಕ್ಕೆ ಮಾಹಿತಿ ದೊರಕಿಸಿಕೊಳ್ಳಬಹುದಾದ ಸೋಮಣ್ಣ ಅವರ ಕೃತಿಯಲ್ಲಿ ಒಟ್ಟು ೨೦ ಲಂಬಾಣಿ ಕಥೆಗಳಿದ್ದು, ಆ ಕಥೆಗಳಲ್ಲಿ ಮನಶ್ಶಾಸ್ತ್ರೀಯ ಅಂಶ ಗಳನ್ನು ಗುರುತಿಸಬಹುದು.[೩೦] ಈ ಕಥೆಗಳನ್ನು ಮಂಡ್ಯಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕು ಹೊಸಳ್ಳಿ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಲಂಬಾಣಿ ಜನರಿಂದ ಸಂಗ್ರಹಿಸಲಾಗಿದ್ದು ಇದೊಂದು ಉತ್ತಮ ಕಥಾಸಂಕಲನವಾಗಿದೆ.

ಸಣ್ಣರಾಮ ಅವರ ಕಥಾಸಂಕಲನ[೩೧] ಮೇಲ್ನೋಟಕ್ಕೆ ಲಂಬಾಣಿ ಸಮುದಾಯದ ಅನುಭವಲೋಕಕ್ಕೆ ಸೀಮಿತವಾದ ಕಥೆಗಳಂತೆ ಕಂಡರೂ, ಎಲ್ಲ ಅಮಾಯಕ ಶೋಷಿತ ವರ್ಗದ ಪ್ರತಿನಿಧಿಗಳಾಗಿವೆ. ಜಮೀನ್ದಾರಿ ಹಾಗೂ ಅಧಿಕಾರಶಾಹಿ ವ್ಯವಸ್ಥೆ ನಡೆಸುವ ದೌರ್ಜನ್ಯಗಳು ಇಲ್ಲಿನ ಬಹುತೇಕ ಕಥೆಗಳ ವಸ್ತುವಾಗಿವೆ. ಶಿಕ್ಷಣ ಮತ್ತು ಹೋರಾಟ ಸಮೂಹದ ಬದುಕಿನಲ್ಲಿ ಎಷ್ಟು ಮುಖ್ಯ ಎಂಬುದನ್ನು ಒಳ ಆಶಯವಾಗಿ ಕಥೆಗಳಲ್ಲಿ ಪರಿಭಾವಿಸಲಾಗಿದೆ. ವಿಶಿಷ್ಟ ಜೀವನವಿಧಾನವೊಂದು ಜಮೀನ್ದಾರಿ, ಊಳಿಗಮಾನ್ಯ ಹಾಗೂ ಅಧಿಕಾರಶಾಹಿ ದಬ್ಬಾಳಿಕೆಯಲ್ಲಿ ನಲುಗಿ ಹೋಗುವ ದುರಂತವನ್ನು ವಿಷಾದದ ನೆಲೆಯಲ್ಲಿ ಇಲ್ಲಿನ ಕಥೆಗಳು ದಾಖಲಿಸುತ್ತವೆ. ಅಲ್ಲದೆ ಅಲೆಮಾರಿ ಸಂಸ್ಕೃತಿಯೊಂದು ಗ್ರಾಮ ಸಂಸ್ಕೃತಿಗೆ ಮುಖಾಮುಖಿಯಾದಾಗ ಅದರ ಆಂತರ್ಯದಲ್ಲಿ ನಡೆಯುವ ತವಕ–ತಲ್ಲಣ, ತಳಮಳ–ಹತಾಶೆ ಈ ಕಥಾಸಂಕಲನದ ಒಳದನಿಯಾಗಿದೆ.

ಸಂಪ್ರದಾಯಬದ್ಧ ಲಂಬಾಣಿ ಸಮಾಜದ ಒಳಗೇ ಅಂತರ್ಗತವಾಗಿರುವ ಹೆಣ್ಣಿನ ಶೋಷಣೆ, ಗಂಡಿನ ದಬ್ಬಾಳಿಕೆ, ಅಲ್ಲಿನ ಬಡತನ, ನಿರಾಶದಾಯಕ ಬದುಕು ಹಾಗೂ ಮುಕ್ತತೆಯ ಕಡೆಗೆ ಹೆಣ್ಣಿನ ತುಡಿತ – ಇವುಗಳ ಮೇಲೆ ಬಿ.ಟಿ. ಲಲಿತಾನಾಯಕ್ ಅವರು ಬೆಳಕು ಚೆಲ್ಲಿದ್ದಾರೆ.[೩೨] ಸಮಷ್ಟಿ ನೆಲೆಯಲ್ಲೇ ತಮ್ಮ ವೈಯಕ್ತಿಕ ನೋವು ಬಯಕೆಗಳನ್ನು ಹಂಚಿಕೊಳ್ಳುವ ಲೇಖಕಿ ಇಂತಹ ಮಹಿಳಾಪರ ಚಿಂತನೆಗಳಿರುವ ಕಥೆಗಳ ಮೂಲಕ ಶೋಷಿತ ವರ್ಗದ ಸ್ಥಿತಿಗತಿಯ ಅರಿವು ಮೂಡಿಸುವುದನ್ನು ಕಾಣುತ್ತೇವೆ.

---

೩೦. ಸೋಮಣ್ಣ ಹೊಂಗಳ್ಳಿ, ಲಂಬಾಣಿ ಜನಪದ ಕಥೆಗಳು, ೧೯೯೪.

೩೧. ಸಣ್ಣರಾಮ, ಕೆಮ್ಮಾವು (ಕಥಾ ಸಂಕಲನ), ೨೦೦೨.

೩೨. ಬಿ.ಟಿ.ಲಲಿತಾನಾಯಕ್, ಹಬ್ಬ ಮತ್ತು ಬಲಿ (ಕಥಾಸಂಕಲನ), ೧೯೮೯.

ಬಿ.ಟಿ. ಲಲಿತಾನಾಯಕ್ ಅವರು ತಮ್ಮ 'ನೆಲೆಬೆಲೆ' ಕಾದಂಬರಿ[೩೩]ಯಲ್ಲಿ ದಲಿತ ಸಮುದಾಯದ ನೋವನ್ನು ಅವರ ಬದುಕಿನ ದುರಂತವನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಶೋಷಕ ಮತ್ತು ಶೋಷಿತ ಲಂಬಾಣಿ ಜನರ ನಡುವಿನ ತಿಕ್ಕಾಟವನ್ನು ಮನಮುಟ್ಟುವಂತೆ ಚಿತ್ರಿಸುವ ಕಾದಂಬರಿಕಾರ್ತಿ, ಈ ತಾರತಮ್ಯಗಳನ್ನು ಹೋಗಲಾಡಿಸಲು ಅಲ್ಲಲ್ಲಿ ಪರಿಹಾರ ಸೂಚಿಸಿರುವುದನ್ನು ಕಾಣುತ್ತೇವೆ. ಈ ಕಾದಂಬರಿ ನೇರವಾಗಿ ಲಂಬಾಣಿ ಸಮಾಜಕ್ಕೆ ಸಂಬಂಧಪಟ್ಟರೂ, ಇತರ ಶೋಷಿತ ದಲಿತ ಸಮುದಾಯದ ಸ್ಥಿತಿಗತಿಗಳನ್ನು ಧ್ವನಿಸುವಲ್ಲಿ ಯಶಸ್ವಿಯಾಗಿದೆ. ಇದೇ ಲೇಖಕಿಯರು ತಮ್ಮ 'ಗತಿ' ಎಂಬ ಮತ್ತೊಂದು ಕಾದಂಬರಿ[೩೪]ಯಲ್ಲಿ ಲಂಬಾಣಿ ಜನ ಹಾಗೂ ಅವರ ಜೀವನವಿಧಾನವನ್ನು ಪರಿಚಯ ಮಾಡಿಕೊಡುತ್ತಾರೆ. ಲಂಬಾಣಿ ಸಮುದಾಯದಲ್ಲಿ ಹುಟ್ಟಿದ ಸೋನುಬಾಯಿ, ಗಂಡ ಮತ್ತು ಮಾವನ ದೌರ್ಜನ್ಯಕ್ಕೆ ಒಳಗಾಗಿ ನರಳಾಡುವುದೇ ಇದರ ಕೇಂದ್ರವಸ್ತುವಾಗಿದೆ. ಮಹಿಳೆಯರ ನೋವು, ದುಃಖ-ದುಮ್ಮಾನಗಳನ್ನು ಗ್ರಹಿಸುವ ಸಂದರ್ಭದಲ್ಲಿ ಲೇಖಕಿ ತಮ್ಮ ಲಂಬಾಣಿ ಸಮುದಾಯವನ್ನೇ ಆಯ್ಕೆ ಮಾಡಿಕೊಂಡಿರುವುದು ಸಮರ್ಥನೀಯವಾಗಿದೆ. ಒಟ್ಟಾರೆ ಇಲ್ಲಿ ವಿದ್ಯಾವಂತ ಸಮಾಜವು ಮಾನವನ ದೌರ್ಬಲ್ಯವನ್ನು ಕಳೆಯಬಹುದೆಂಬ ಆಶಯ ಇದೆ. ಅಂತೆಯೇ ಇಲ್ಲಿ ಹಳ್ಳಿಯ ಮೌಲ್ಯಗಳು ಅವನತಿಯ ಹಾದಿ ಹಿಡಿದಿರುವುದನ್ನು ಚಿತ್ರಿಸಲಾಗಿದೆ. ಒಟ್ಟಿನಲ್ಲಿ ಈ ಕಾದಂಬರಿಯು ಸಮಾಜದ ಒಳ-ಹೊರಗಳನ್ನು ಚಿತ್ರಿಸುವುದರ ಮೂಲಕ ಅಲ್ಲಿನ ದೌರ್ಬಲ್ಯಗಳಿಗೆ ಪರಿಹಾರವನ್ನು ಸೂಚಿಸಿ, ನ್ಯೂನತೆಗಳನ್ನು ಸರಿಪಡಿಸಲು ಪ್ರೇರಣೆ ಯನ್ನು ನೀಡುತ್ತದೆ.

ಬಡತನ, ಸ್ತ್ರೀಶೋಷಣೆ ಮತ್ತು ಪುರುಷಪ್ರಧಾನ ಸಮಾಜದ ನಡವಳಿಕೆಗಳ ಬಗೆಗಿನ ಚಿತ್ರಣಗಳನ್ನು ಶ್ರೀಮತಿ ಬಿ.ಟಿ. ಲಲಿತಾನಾಯಕ್ ಅವರ ಕವನಸಂಕಲನದಲ್ಲಿ ಕಾಣಬಹುದು.[೩೫] ಲಂಬಾಣಿ ಮಹಿಳೆಯರು ಮತ್ತು ಪುರುಷರು ಅನ್ಯಾಯಕ್ಕೆ ಒಳಗಾಗುವ ಪರಿಯನ್ನು ಬೆಳಕಿಗೆ ತರುವ ಕವಯತ್ರಿಯ ಪ್ರಯತ್ನ ಇಲ್ಲಿ ಸಫಲವಾಗಿದೆ. ಪುರುಷ ಮತ್ತು ಮಹಿಳೆ, ಬಡವ ಹಾಗೂ ಶ್ರೀಮಂತರುಗಳ ನಡುವಿನ ವೈರುಧ್ಯಗಳನ್ನು ಬಿಚ್ಚಿಡುವ ಇಲ್ಲಿನ ಕವನಗಳ ಕಲಾತ್ಮಕತೆ ಕಾವ್ಯ ಕ್ಷೇತ್ರದಲ್ಲಿನ ಹೊಸ ಪ್ರಯೋಗವೆನಿಸುತ್ತದೆ. ಲಂಬಾಣಿ ಬುಡಕಟ್ಟು

---

೩೩. ಬಿ.ಟಿ.ಲಲಿತಾನಾಯಕ್, ನೆಲೆಬೆಲೆ (ಕಾದಂಬರಿ) ೧೯೮೨.

೩೪. ಬಿ.ಟಿ.ಲಲಿತಾನಾಯಕ್, ಗತಿ (ಕಾದಂಬರಿ) ೧೯೮೬.

೩೫. ಬಿ.ಟಿ.ಲಲಿತಾನಾಯಕ್, ನಂರೂಪ್ಲಿ (ಕವನ ಸಂಕಲನ) ೧೯೮೩.

ಎಂಬ ಶೋಷಿತ ವರ್ಗದಿಂದ ಬಂದಿರುವ ಇದೇ ಲೇಖಕರ ಮತ್ತೊಂದು ಕವನಸಂಕಲನ[೩೬] ದಲ್ಲಿ ಕಾವ್ಯದುದ್ದಕ್ಕೂ ಶೋಷಣೆಯ ವಿರುದ್ಧ ದನಿ ಎತ್ತಿದರೂ ಅಲ್ಲಲ್ಲಿ ಇತರ ಅಂಶಗಳು ಗೋಚರಿಸುತ್ತವೆ. ಇಲ್ಲಿ ಬಡತನ, ಅಸಮಾನತೆ, ಸ್ತ್ರೀ ಶೋಷಣೆ ಹಾಗೂ ಧಾರ್ಮಿಕ ವಿಡಂಬನೆಯ ಚಿತ್ರಣವಿದೆ. ಇಲ್ಲಿನ ಕವಿತೆಗಳಲ್ಲಿ ಭಾವುಕತೆ ಇದ್ದರೂ ಈ ಸಮಾಜದ ಸೋಗುಗಳನ್ನು ಮುಖವಾಡಗಳನ್ನು ವಿಡಂಬನಾತ್ಮಕವಾಗಿ ನಿರೂಪಿಸಿರುವುದನ್ನು ಕಾಣಬಹುದು. ಒಟ್ಟಾರೆ ಈ ಸಂಕಲನ ದಲಿತವರ್ಗದ ಬಗೆಗೆ ಚಿಂತಿಸಿದರೂ ನೇರವಾಗಿ ಲಂಬಾಣಿ ಸಮುದಾಯದ ಸ್ಥಿತಿಗತಿಯನ್ನು ಬಿಂಬಿಸುತ್ತದೆ.

**ಬಂಜಾರರಲ್ಲಿ ಜಾನಪದ ಕಲೆಗಳು**

ನಿಸರ್ಗ ಜೀವಿಗಳಾದ ಬಂಜಾರರಲ್ಲಿ ಸಾಹಿತ್ಯ ಕಲೆಗಳಿಗೆ ಕೊರತೆಯಿಲ್ಲ. ಜನಪದ ಸಾಹಿತ್ಯ ಹಾಗೂ ಕಲೆಗಳ ಉಗ್ರಾಣವೇ ಅವರಲ್ಲಿ ಸೂರೆಗೊಂಡಿದೆ. ಜನಪದ ಕಲಾ ಪ್ರಪಂಚದಲ್ಲಿ ಬಂಜಾರ ಕಲೆಗೆ ವಿಶಿಷ್ಟವಾದ ಸ್ಥಾನವಿದೆ. ಕಸೂತಿ ಕಲೆ, ರಂಗೋಲಿ ಕಲೆ ಹಾಗೂ ಬಯಲಾಟಗಳು ಅವರ ಜನಪದ ಕಲೆಗಳಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ನರ್ತನ, ಗೀತೆಗಳು ಬಂಜಾರರ ಜೀವನದ ಉಸಿರಾಗಿವೆ. ಕಷ್ಟಪಟ್ಟು ದುಡಿದ ಜೀವಕ್ಕೆ ಮುದ ನೀಡುವ ಸಾದನಗಳಾಗಿವೆ. ಅವರ ಗೀತ–ನರ್ತನಗಳು ಕಲಾತ್ಮಕವಾಗಿದ್ದು ಅವರದೇ ಆದ ವೈಶಿಷ್ಟ್ಯಗಳನ್ನು ಒಳಗೊಂಡಿದೆ.

ಬಂಜಾರರು ತಮ್ಮ ಬಿಡುವಿನ ವೇಳೆಯಗಳಲ್ಲಿ ಕೆಲವು ಮನರಂಜನಾ ಆಟಗಳನ್ನು ಆಡುತ್ತಾರೆ. ಯಾವಾಗಲೂ ಹೊಟ್ಟೆಪಾಡಿಗಾಗಿ ಕೆಲಸಕಾರ್ಯಗಳಲ್ಲಿ ನಿರತರಾಗಿರುವ ಈ ಕಡುಬಡವರಿಗೆ ಅವಕಾಶಗಳು ಕಡಿಮೆ. ಸುಗ್ಗಿಯ ಕಾಲ ಮುಗಿದ ಮೇಲೆ ಹಬ್ಬ ಹರಿದಿನ, ಧಾರ್ಮಿಕ ಪೂಜಾಕಾರ್ಯಗಳು, ಜಾತ್ರೆ–ಉತ್ಸವಗಳ ಕಾಲದಲ್ಲಿ ಆಟಗಳನ್ನು ಆಡುವ ರೂಢಿ ಇವರಲ್ಲಿದೆ. ಇದರಿಂದ ದೇಹ ಉಲ್ಲಸಿತವೂ, ಆರೋಗ್ಯದಾಯಕವೂ ಆಗುವುದಲ್ಲದೆ ಬದುಕಿನ ಹೋರಾಟದಲ್ಲಿ ಹೊಸ ಬದಲಾವಣೆಯೂ ಸಿಕ್ಕಂತಾಗುತ್ತದೆ. ಮಕ್ಕಳಿಗಂತೂ ಆಟದಷ್ಟು ಸಂತೋಷ ತರುವುದು ಮತ್ತಾವುದೂ ಅಲ್ಲ.

ಜನಪದ ಪ್ರದರ್ಶನ ಕಲೆಗಳಲ್ಲಿ ಆಟಗಳು ಪ್ರಮುಖವಾಗಿವೆ. ಹಿಂದೆ ಅಲೆಮಾರಿಗಳಾಗಿದ್ದು ಇಂದು ಒಂದೆಡೆ ನೆಲೆಯಾಗಿರುವ ಬಂಜಾರರು ನಿಸರ್ಗಕ್ಕೆ ಅತಿ ಹತ್ತಿರವಾಗಿ ಸರಳ

---

೩೬. ಬಿ.ಟಿ.ಲಲಿತಾನಾಯಕ್, ಇದೇ ಕೂಗು ಮತ್ತೆ ಮತ್ತೆ (ಕವನ ಸಂಕಲನ), ೧೯೮೬.

ಸುಂದರವಾಗಿ ಬದುಕನ್ನು ಸಾಗಿಸುತ್ತಾರೆ. ದೈನಂದಿನ ಬದುಕು ನಿರ್ವಹಣೆಗಾಗಿ ದಿನವಿಡೀ ಹೋರಾಡುವ ಅವರಲ್ಲಿ ಆಟಗಳ ಬಗೆಗೆ ಹೆಚ್ಚಿನ ಆಸಕ್ತಿ ಕಂಡುಬರುವುದಿಲ್ಲ. ಅವರಿಗೆ ಆಟಕ್ಕಿಂತ ಹೊಟ್ಟೆ-ಬಟ್ಟೆಯ ಚಿಂತೆಯೇ ಪ್ರಮುಖವಾಗಿದೆ. ಈ ಆಟ, ವಿನೋದಗಳಿಗಾಗಿ ಹಣ, ಸಮಯ ಖರ್ಚು ಮಾಡುವ ವ್ಯವಧಾನ ಅವರಲ್ಲಿಲ್ಲವಾದರೂ ಈ ಆಟಗಳನ್ನು ಅವರು ಸಂಪೂರ್ಣವಾಗಿ ಕಡೆಗಣಿಸಿಲ್ಲ. ತಮ್ಮ ದೈನಂದಿನ ಕಷ್ಟ ದುಃಖಗಳನ್ನು ಹಾಗೂ ಹಲವು ಸಮಸ್ಯೆಗಳನ್ನು ಈ ಜನ ಆಟಮನರಂಜನೆ ಮೂಲಕ ಮರೆಯಲು ಪ್ರಯತ್ನಿಸುತ್ತಾರೆ.

ಬಂಜಾರರಲ್ಲಿ ಪ್ರಾದೇಶಿಕ ಸಂಸ್ಕೃತಿಗಳ ಪ್ರಭಾವದಿಂದಾಗಿ ಅನೇಕ ಆಟಗಳು ಅನುಕರಣೆಯ ಮೂಲಕ ಈ ಜನರಲ್ಲಿ ಕಾಣಿಸಿಕೊಂಡಿವೆ. ಮಣ್ಣಾಟ, ಹರಳಾಟ, ಹುಡುಕುವ ಆಟ, ಚಿಪ್ಪಿನಾಟ, ಕುಂಟಾಟ, ಕಣ್ಣುಮುಚ್ಚಾಲೆಯಾಟ ಮುಂತಾದವುಗಳ ಜೊತೆ ಸುರ್‌ಸುರ್‌ಬತ್ತಿಯಾಟ, ಅಪಡಿಕಿ ತಿಪಡಿ ಆಟ, ತೇಲ ಫಲೇಂಗ ಆಟ, ಚೂರಿ ಮಸೆದು ಸವತೆ ಕೊಯ್ಯುವ ಆಟ ಮುಂತಾದ ಆಟಗಳಿವೆ. ಈ ಆಟಗಳಷ್ಟೇ ಅಲ್ಲದೆ ಭಾರ ಎತ್ತುವ ಶಕ್ತಿ ಪ್ರದರ್ಶನದ ಆಟಗಳು ಮತ್ತು ಮನರಂಜನೆಯ ಪ್ರಸಂಗಗಳು ಅವರಲ್ಲಿದೆ.

ಬಂಜಾರ ಜನಪದ ಆಟಗಳನ್ನು ಸ್ಥೂಲವಾಗಿ ಈ ರೀತಿ ವಿಂಗಡಿಸಿಕೊಳ್ಳಬಹುದು.

ಇದು ವಯೋಮಾನದ ಆಧಾರವಾಗಿದ್ದು ವಯಸ್ಕ ಮಹಿಳೆ ಮತ್ತು ಪುರುಷಗಳು ಪ್ರತ್ಯೇಕ ಕಲಾ ವಿಧಾನಗಳನ್ನು ಪ್ರದರ್ಶಿಸುತ್ತಾರೆ. ಇವುಗಳೇ ಗಂಡಸರಾಟ ಮತ್ತು ಹೆಂಗಸರಾಟ.

ಬಾಲ್ಯಾವಸ್ಥೆಯಿಂದ, ಯೌವನಾವಸ್ಥೆಯವರೆವಿಗೂ ಮುಂದುವರೆಯುವ ಮತ್ತು ಕ್ರಿಯಾಶೀಲರಾಗುವ ಬಾಲಕ-ಬಾಲಕಿಯರಿಗೆಂದೇ ಇರುವ ಆಟಗಳೇ ಮಕ್ಕಳಾಟ ಇದರಲ್ಲಿ ಮೂರು ವಿಧಾನಗಳಿದ್ದು, ಬಾಲಕರಾಡುವ ಆಟ, ಬಾಲಕಿಯಾರಾಡುವ ಮತ್ತು ಬಾಲಕ-ಬಾಲಕಿಯರು ಕೂಡಿಯಾಡುವ ಆಟಗಳೇ ಆಗಿವೆ.

**ದೊಡ್ಡವರಾಡುವ ಆಟ**

**i) ಗಂಡಸರಾಡುವ ಆಟ:** ಬಂಜಾರರು ಆರ್ಥಿಕವಾಗಿ ಹಿಂದುಳಿದವರಾದರೂ ದೈಹಿಕವಾಗಿ ದೃಢಕಾಯರು ಸುಂದರರೂ ಆಗಿದ್ದಾರೆ. ದೈಹಿಕ ಪರಿಶ್ರಮದ ದುಡಿಮೆಯನ್ನೇ ನಂಬಿ ಬದುಕುವ ಜನ ಇವರು. ಆದುದರಿಂದ ಆಟಪಾಠ, ವಿನೋದ – ಮನರಂಜನೆಗಾಗಿ ಬಿಡುವು ಸಿಗುವುದು ಅಪರೂಪವಾದರೂ ಸಮಯ ಸಂದರ್ಭ ಸಿಕ್ಕಾಗ ಆಟ, ವಿನೋಧಗಳಲ್ಲಿ ತೊಡಗಿ, ದಣಿದ ತನುಮನಕ್ಕೆ ನೆಮ್ಮದಿಯನ್ನು ತಂದುಕೊಳ್ಳುತ್ತಾರೆ. ಗಂಡಸರ ಕೆಲವು ಆಟಗಳನ್ನು ಇಲ್ಲಿ ಅವಲೋಕಿಸಬಹುದು.

**ಕೋಳಿಕಾಳಗ:** ಧಾರ್ಮಿಕ ಹಿನ್ನಲೆಯನ್ನೊಳಗೊಂಡ ಮನರಂಜನೆಯನ್ನು ಒದಗಿಸುವ ವಿಶಿಷ್ಟವಾದ ಆಟ. ಹಿರಿ-ಕಿರಿಯರೆಲ್ಲರೂ ಇದರಲ್ಲಿ ಭಾಗ ತೆಗೆದುಕೊಳ್ಳುತ್ತಾರೆ. ವರ್ಷಕ್ಕೊಮ್ಮೆ ನಿರ್ದಿಷ್ಟವಾದ 'ಸೀತಲಾಹಬ್ಬ'ದಲ್ಲಿ ಮಾತ್ರ ಈ ಕೋಳಿಕಾಳಗದ ಆಟ ಪ್ರಚಲಿತವಿದೆ. ಸಾಮಾನ್ಯವಾಗಿ ಲಂಬಾಣಿಗರು ತಮಗೆ, ತಮ್ಮ ಮಕ್ಕಳಿಗೆ ಕಣ್ಣುಬೇನೆ, ಗೊಬ್ಬರ ಗಣಜಲಿ ಬರದಿರಲೆಂದು ಪ್ರತಿಯೊಬ್ಬರೂ ವರ್ಷಕ್ಕೊಮ್ಮೆ 'ಸೀತಲಾ ಮಾತಾ'ಳಿಗೆ ಕೋಳಿ(ಹುಂಜ) ಬಲಿಯನ್ನರ್ಪಿಸುತ್ತಾರೆ. ಇದಕ್ಕೆ ಕೋಳಿ ಹಬ್ಬ ಎಂದೇ ಕರೆಯುತ್ತಾರೆ. ಸೀತಲಾ ಮಾತಾಳ ಹಬ್ಬ ಇನ್ನು ೧೫-೨೦ ದಿನಗಳಿರುವಾಗಲೆ ಬಂಜಾರರು ಬಲಿಷ್ಟವಾದ ಹುಂಜವನ್ನು ಆಯ್ಕೆ ಮಾಡಿ ಕಾದಾಟಕ್ಕಾಗಿ ತರಬೇತಿಗೊಳಿಸುತ್ತಾರೆ. ಕಾದಾಡಲು ಸಮರ್ಥವಿರುವ ವಿಶೇಷ ತಳಿಯ ಹುಂಜವನ್ನೇ ಸಾಮಾನ್ಯವಾಗಿ ಆಯ್ಕೆ ಮಾಡುತ್ತಾರೆ(ಖಂಡೋಬಾ: ೧೯೯೧:೧೯೧).

ಸಾಮಾನ್ಯವಾಗಿ ಬಂಜಾರರು ಮನರಂಜನೆಗಾಗಿ ಕೋಳಿಕಾಳಗವನ್ನು ಏರ್ಪಡಿಸುತ್ತಾರೆ. ಕೆಲವೊಮ್ಮೆ ಈ ಕಾಳಗದಲ್ಲಿ ಕೋಳಿಯ ಒಡೆಯರಲ್ಲಿ ಪಣಕಟ್ಟಿ ಆಡುವ ಪದ್ಧತಿಯೂ ಇದೆ. ಇದಕ್ಕಾಗಿ ಕೋಳಿ ಒಡೆಯರ ಎರಡು ಗುಂಪುಗಳು ಉದ್ಭವಗೊಳ್ಳುತ್ತವೆ. ಕೆಲವು ಸಲ ಹೊರಗಿನವರೂ ಈ ಜಿದ್ದಿನಲ್ಲಿ ಪಾಲ್ಗೊಳ್ಳುತ್ತಾರೆ. ಹುಂಜವು ಆಕ್ರಮಣ ಮಾಡಲು ಸುಲಭವಾಗುವಂತೆ ಕಾಳಗಕ್ಕೆ ಮೊದಲು ಅದರ ಜುಟ್ಟು, ಕುತ್ತಿಗೆಯ ಮೇಲಿನ ಉದ್ಧಗರಿ, ಬಾಲ ಮೊದಲಾದವುಗಳನ್ನು ಅಚ್ಚುಕಟ್ಟಾಗಿ ಕತ್ತರಿಸುತ್ತಾರೆ. ಹುಂಜದ ಕಾಲಿಗೆ ಹರಿತವಾದ ಆಯುಧವನ್ನು ಕಟ್ಟುತ್ತಾರೆ.ಕಾಳಗದ ಆರಂಭಕ್ಕೆ ಮೊದಲು ಅವುಗಳಲ್ಲಿ ಹುರುಪು ಉತ್ಸಾಹ ತುಂಬಲು ಅವುಗಳಿಗೆ ಸಾರಾಯಿಯನ್ನು ಕುಡಿಸುತ್ತಾರೆ.

ಕಾಳಗಕ್ಕಾಗಿ ಸಿದ್ಧವಾದ ಎರಡು ಹುಂಜಗಳನ್ನು ಮುಖಾಮುಖಿಯಾಗಿ ಎದುರಿಸುವಂತೆ ಬಿಡುತ್ತಾರೆ. ಹೋರಾಟದ ಏಳು-ಬೀಳುಗಳನ್ನು ನೋಡಲು ಜನರು ಸುತ್ತುವರಿಯುತ್ತಾರೆ. ಆಕ್ರಮಣ ಪ್ರಾರಂಭವಾಗುತ್ತಿದ್ದಂತೆಯೇ ಜನರು ಉತ್ತೇಜಿತರಾಗಿ ಕೇಕೆ, ಕೂಗಾಟ, ಚೀರಾಟ, ಚಪ್ಪಾಳೆ ಹಾಕುವುದರ ಮೂಲಕ ಕೋಳಿಗಳನ್ನು ಹುರಿದುಂಬಿಸುತ್ತಾರೆ. ಕಾದಾಟದಲ್ಲಿ ಒಂದು ಹುಂಜ ನಿಶ್ಶಕ್ತಿಹೊಂದಿ ಹಿಂದೆ ಸರಿದರೆ ಇನ್ನೊಂದು ಬಲಿಷ್ಠವಾದ ಹುಂಜವನ್ನು ಬಿಟ್ಟು ಹೋರಾಟ ಮಾಡಿಸುವರು. ಹೀಗೆ ಅನೇಕ ಹುಂಜಗಳ ಜೊತೆಯಲ್ಲಿ ಈ ಹೋರಾಟ ಏಕಕಾಲದಲ್ಲಿ ನಡೆಯುತ್ತದೆ. ಹುಂಜ ಸಾಕಷ್ಟು ಗಾಯಗೊಂಡರೂ ಇನ್ನಷ್ಟು ಈರ್ಷೆಯಿಂದ ಪ್ರಾಣ ಹೋಗುವವರೆಗೆ ಕಾದಾಡುವುದನ್ನು ಕಾಣಬಹುದು.

ಈ ಕೋಳಿ ಕಾಳಗದಲ್ಲಿ ಮೊದಲೇ ನಿರ್ಧರಿಸಿದಂತೆ ಗೆದ್ದವರು ಸೋತವರ ಹುಂಜವನ್ನಾಗಲಿ, ಇಲ್ಲವೆ ಪಣಕ್ಕೆ ಕಟ್ಟಿದ ವಸ್ತುವಾಗಲಿ, ಹಣವಾಗಲಿ ಪಡೆದುಕೊಳ್ಳಬಹುದು. ಪಣದಲ್ಲಿ ಸೋತವನು ಕೋಳಿಕೊಟ್ಟು ಹೋದಮೇಲೆ ಸೀತಲಾ ಮಾತಾಳಿಗಾಗಿ ಮತ್ತೊಂದು ಹುಂಜವನ್ನು ಖರೀದಿಸಿ ಬಲಿಯನ್ನು ಅರ್ಪಿಸಬೇಕಾಗುತ್ತದೆ. ಗೆದ್ದವನು ಆ ಹುಂಜದ ಅಡಿಗೆ ಮಾಡಿಸಿ ತನ್ನ ಸ್ನೇಹಿತರೊಂದಿಗೆ ಅದನ್ನು ತಿನ್ನುತ್ತಾನೆ(ಖಂಡೋಬಾ: ೧೯೯೧: ೧೯೧-೧೯೨).

ಸಂಶೋಧನಾ ಅಧ್ಯಯನದಲ್ಲಿ ಆಯ್ಕೆಯಾಗಿರುವ ತಾಂಡಗಳಲ್ಲಿ ಕೋಳಿಕಾಳಗ ಆಟಗಳು ಪ್ರಾರಂಭದಿಂದ ನಿರಂತರವಾಗಿ ಬಂದವುಗಳಾಗಿದ್ದರೂ, ಹೊಸದುರ್ಗ ತಾಲ್ಲೂಕಿನ ತಾಂಡಗಳಲ್ಲಿ ಈ ರೀತಿಯ ಆಟಗಳು ಗಣನೀಯವಾಗಿ ಕಣ್ಮರೆಯಾಗುತ್ತಿದೆ. ಕಾರಣ ಅವರಲ್ಲಿನ ಶಿಕ್ಷಣ, ಉದ್ಯೋಗ ಮತ್ತು ವಲಸೆ ಪ್ರಕ್ರಿಯೆಗಳು ವಿಶೇಷ ಪರಿಣಾಮ ಬೀರುವಂತವುಗಳಾಗಿದ್ದರೆ, ಇತರೆ ಹಳ್ಳಿಗರು, ನಾಗರೀಕರು, ಇಂತಹ ಸಂದರ್ಭಗಳಲ್ಲಿ ಹೆಚ್ಚಾಗಿ ಪಾಲ್ಗೊಂಡು ಹಣದ ವ್ಯವಹಾರವನ್ನಾಗಿಸಿಕೊಂಡು, ಮೋಜು ಮಸ್ತಿಯಾಗಿ ಸ್ಪರ್ಧಾರೂಪದ ಆಟವಾಗಿ ಪರಿವರ್ತನೆಯಾಗುತ್ತಿರುವುದು ಕಾರಣ. ಹಾಗೂ ಪೋಲೀಸ್‌ರ ಅತಿಕ್ರಮಣ ಅಥವಾ ನಿಯಮಗಳ ಒತ್ತಡಗಳಿಂದಾಗಿ ಕೋಳಿಕಾಳಗದ ಆಟ ತನ್ನ ಮೂಲ ರೂಪವನ್ನು ಕಳೆದುಕೊಳ್ಳುತ್ತಿದೆ.

ಚಿಕ್ಕಮಗಳೂರು ಜಿಲ್ಲೆಯ ಕಡೂರು ತಾಲ್ಲೂಕಿನ ತಾಂಡಗಳಲ್ಲಿ ಅಪರೂಪಕ್ಕಷ್ಟೆ ನಡೆಯುವ ಅಥವಾ ನಡೆಯದೇ ಇರುವ ಆಟವಾಗಿದೆ. ಕೆಲವು ಭಾಗಗಳಲ್ಲಿ ಗೌಪ್ಯವಾಗಿ ಹೆಚ್ಚು ಪ್ರಚಾರ ಮಾಡದೇ ಶೀಘ್ರಗತಿಯಲ್ಲಿ ನಡೆದು ಹೋಗುವ ಆಟವಾಗಿದೆ.

ಚಿಕ್ಕಬಳ್ಳಾಪುರ ಜಿಲ್ಲೆ ಬಾಗೇಪಳ್ಳಿ ತಾಲ್ಲೂಕಿನ ತಾಂಡಗಳಲ್ಲಿ ಇದಕ್ಕೆ ಬೇರೆ ಮೆರಗು ನೀಡಲಾಗಿದೆ. ಕಾರಣ ಈ ತಾಂಡಗಳು ಗಡಿನಾಡಿನ ಆಂಧ್ರಪ್ರದೇಶದ ಸಂಪರ್ಕಕ್ಕೆ ಒಳಗಾಗಿದ್ದು, ಅತಿಬಡತನ, ನಿರುದ್ಯೋಗ ಮತ್ತು ಅಲೆಮಾರಿ ವಲಸೆಯಿಂದಾಗಿ ಈ ಕೋಳಿಕಾಳಗವನ್ನು ಒಂದು ವ್ಯಾಪಾರ ವೃತ್ತಿಯನ್ನಾಗಿಸಿಕೊಂಡು ಜೀವನ ನಡೆಸುತ್ತಿರುವ ಪ್ರಸಂಗವನ್ನು ಕಾಣಬಹುದಾಗಿದೆ. ಅಲ್ಲದೆ ಅಪರೂಪಕ್ಕಾಗಿ ಇರುವ ಈ ಆಟವನ್ನು ನಾಗರೀಕರ ಸಮಾಜ ಬಂಜಾರ ಸಮಾಜದ ಸಂಪರ್ಕಕ್ಕೆ ಬಂದು ಆ ಸಮುದಾಯದಲ್ಲಿನ ಯುವಕರನ್ನು ಕೇಂದ್ರೀಕರಿಸಿಕೊಂಡು ಹಳ್ಳಿಗಳಿಗೆ, ಸಮೀಪದ ಪಟ್ಟಣಗಳಿಗೆ, ಕೋಳಿಕಾಳಗದ ಆಟವನ್ನು ಪರಿಚಯಿಸುತ್ತಿದ್ದಾರೆ.

ದೃಢಕಾಯರಾದ ಬಂಜಾರ ಗಂಡಸರು ಹಬ್ಬ-ಜಾತ್ರೆ ಉತ್ಸವ ಮುಂತಾದ ಸಂದರ್ಭದಲ್ಲಿ ವಿವಿಧ ಬಗೆಯ ಕಸರತ್ತಿನ ಆಟಗಳಲ್ಲಿ ತೊಡಗುತ್ತಾರೆ. ಅವುಗಳೆಂದರೆ, ಮರಳಿನ ಚೀಲ ಗಳನ್ನು ಎತ್ತುವುದು, ಕಲ್ಲಿನ ಗುಂಡುಗಳನ್ನು ಎತ್ತುವುದು, ಗಾಡಿಯ ಗಾಲಿಗಳನ್ನು ಒಬ್ಬೊಬ್ಬರೆ ಎತ್ತಿಹಾಕುವುದು, ಕುಸ್ತಿ ಮಾಡುವುದು, ಮಣ್ಣು ತುಂಬಿದ ಅಥವಾ ನೀರು ತುಂಬಿದ ಕೊಡಗಳನ್ನು ಹಲ್ಲಿನಿಂದ ಎತ್ತುವುದು, ಗುರಿಪರೀಕ್ಷೆಯ ಆಟ, ತೆಂಗಿನ ಕಾಯಿ ಯನ್ನು ಕೈಯಿಂದ ಒಡೆಯುವುದು ಮುಂತಾದ ಶಕ್ತಿ ಪ್ರದರ್ಶನದ ಆಟಗಳನ್ನು ಆಡಿ, ದೈಹಿಕ ಹಾಗೂ ಮಾನಸಿಕ ನೆಮ್ಮದಿಯೊಂದಿಗೆ ಮನರಂಜನೆಯನ್ನು ಪಡೆಯುತ್ತಾರೆ.

**ಹೆಂಗಸರಾಡುವ ಆಟ:** ಲಂಬಾಣಿಗರಲ್ಲಿ ಇಪ್ಪತ್ತು-ಇಪ್ಪತ್ತೈದು ವರ್ಷದ ಮೇಲ್ಪಟ್ಟು ಮಹಿಳೆಯರು ಕುಣಿತವನ್ನು ಬಿಟ್ಟರೆ ಇತರೆ ಇನ್ನಾವುದೇ ಆಟಗಳಲ್ಲಿ ಪಾಲ್ಗೊಳ್ಳುವುದಿಲ್ಲ.

**೨. ಮಕ್ಕಳಾಟ:**

**i) ಬಾಲಿಕೆಯರಾಡುವ ಆಟ:** ಹೆಣ್ಣು ಮಕ್ಕಳಿಗೆ ಗಂಡಸರಿಗಿಂತಲೂ ಹೆಚ್ಚು ಸಮಯ ಲಭ್ಯವಾಗುವುದರಿಂದ ಅವರು ಹೆಚ್ಚಿನ ಆಟಗಳಲ್ಲಿ ತೊಡಗುತ್ತಾರೆ. ಬಾಲಿಕೆಯರೆಂದರೆ ಎರಡರಿಂದ ಹತ್ತು ವರ್ಷದೊಳಗಿನ ಹೆಣ್ಣುಮಕ್ಕಳಿಗೆ ಸಂಬಂಧಿಸಿದ ಆಟವಾಗಿದೆ. ಬಾಲಿಕೆಯರಾಡುವ ಆಟಗಳಲ್ಲಿ ಒಂದೆರಡನ್ನು ಇಲ್ಲಿ ಉಲ್ಲೇಖಿಸಬಹುದು.

**ವೀಂಚೂ ಕಾಟು ಮಕೋಡ:** ಇದೊಂದು ಒಳಾಂಗಣ ಆಟ. ಇದನ್ನು ಸಾಮಾನ್ಯವಾಗಿ ನಾಲ್ಕರಿಂದ ಹತ್ತು ವರ್ಷದೊಳಗಿನ ಬಾಲಿಕೆಯರು ಆಡುತ್ತಾರೆ. ತಮ್ಮ ಬಿಡುವಿನ ಸಮಯದಲ್ಲಿ ಅಥವಾ ಬೇಸರವಾದಾಗ ನಾಲ್ಕಾರು ಜನ ಬಾಲಿಕೆಯರು ಒಟ್ಟಿಗೆ ಸೇರಿ ಗುಂಪಾಗಿ ಕುಳಿತು ಆಡುವ ಆಟವಿದು. ತಮ್ಮ ಎರಡು ಕೈಗಳನ್ನು ಬೋರಲಾಗಿಟ್ಟು, ನಾಯಕಿ ಒಬ್ಬಳು ತನ್ನ ತೋರುಬೆರಳಿನಿಂದ ತುಟಿಯನ್ನು ಮೀಟುತ್ತಾ, ನೆಲದ ಮೇಲೆ ಇಟ್ಟು ಕೈಗಳ ಮೇಲೆ ಆ ತೋರುಬೆರಳನ್ನು ಇಟ್ಟು ಸಾಗುವುದರ ಮೂಲಕ ಆಟ ಪ್ರಾರಂಭವಾಗುತ್ತದೆ.

**ಸುರ್ ಸುರ್ ಬತ್ತಿಯಾಟ:** ಐದು ವರ್ಷದಿಂದ ಹತ್ತು ವರ್ಷದೊಳಿಗಿನ ಮಕ್ಕಳು ಆಡುವ ಒಳಾಂಗಣ ಆಟ ಇದು. ಹತ್ತಾರು ಬಾಲಕಿಯರು ಸೇರಿ 'ಹಾತೇಪರ್ ಹಾತ್' (ಕೈ ಮೇಲೆ ಕೈ) ಹಾಕಿ ಯಾರಾದರೂ ಒಬ್ಬರನ್ನು ಸೋಲಿಸುತ್ತಾರೆ. ಇವರಲ್ಲಿ ಒಬ್ಬ ನಾಯಕಿ ಇರುತ್ತಾಳೆ. ಮಕ್ಕಳೆಲ್ಲ ಸುತ್ತುಗಟ್ಟಿ ಬಲಗಾಲು ಮಡಿಚಿ ವೃತ್ತಾಕಾರವಾಗಿ ಕುಳಿತು ಎಡಗಾಲನ್ನು ನೇರಮಾಡಿ ಮಂಡಿಯ ಹತ್ತಿರ ಗೂಡು ಕಟ್ಟುತ್ತಾರೆ. ನಾಯಕಿ ಒಂದು

ಕಲ್ಲಿನ ಹರಳನ್ನು ಕೈಯಲ್ಲಿ ಹಿಡಿದುಕೊಂಡು 'ಸುರ್ ಸುರ್ ಬತ್ತಿ, ಸುರಾರಿ ಬತ್ತಿ, ದೇವಿರಾಮನ್ ಪರಸಾದ್‌ಬತ್ತಿ' ಎಂದು ಲಯಬದ್ಧವಾಗಿ ಹೇಳುತ್ತ ಗೂಡುಕಟ್ಟಿ ಕುಳಿತ ಮಕ್ಕಳ ಗೂಡಿಗೆಲ್ಲ ಕೈಹಾಕುತ್ತ ಯಾರದಾದರೊಂದು ಗೂಡಿನಲ್ಲಿ ಹರಳನ್ನು ಹಾಕಿ ಬಿಟ್ಟಿರುತ್ತಾಳೆ. ಸೋತವಳು ಯಾರ ಗೂಡಿನಲ್ಲಿ ಹರಳಿದೆ ಎಂಬುದನ್ನು ಪತ್ತೆ ಹಚ್ಚಿ ಹೇಳಬೇಕು. ಅವಳು ಹೇಳಿದ ಗೂಡಿನಲ್ಲಿ ಹರಳಿದ್ದರೆ ಅವರು ಗೆದ್ದಂತೆ. ಇಲ್ಲದೆ ಹೋದರೆ ಮತ್ತೆ ಅವಳೇ ಸೋತಂತೆ. ಹೀಗೆ ಆಟ ಮುಂದುವರಿಯುತ್ತದೆ. ಮಕ್ಕಳ ಚಾಣಾಕ್ಷತೆಗೆ, ಚುರುಕುಬುದ್ದಿಗೆ ಈ ಆಟ ಕನ್ನಡಿ ಹಿಡಿದಂತಿದೆ.

**ii) ಬಾಲಕರು ಆಡುವ ಆಟ:** ಸುಮಾರು ಎರಡು ವರ್ಷದಿಂದ ಹತ್ತು ವರ್ಷದೊಳಿಗನ ಬಾಲಕರು ಆಡುವ ಆಟಗಳೆಂದರೆ, ಟೋಪಿ ಆಟ, ಬುಗುರಿ ಆಟ, ತೋಳ ಕುರಿ ಆಟ ಮುಂತಾದ ಆಟಗಳನ್ನು ಆಡುತ್ತಾರೆ. ಸಾಮಾನ್ಯವಾಗಿ ಬಾಲಕರು ಈ ಕೆಲವೇ ಆಟಗಳನ್ನು ಬಿಟ್ಟರೆ ಉಳಿದ ಆಟಗಳನ್ನು ಬಾಲಿಕೆಯರೊಂದಿಗೆ ಕೂಡಿಯೇ ಆಡುತ್ತಾರೆ. ಬಂಜಾರರಲ್ಲಿ ಬಾಲಕ-ಬಾಲಕಿಯರು ಬೇರೆ ಬೇರೆಯಾಗಿ ಆಡುವ ಆಟಕ್ಕಿಂತ ಒಂದುಗೂಡಿ ಆಡುವ ಆಟವೇ ತುಂಬಾ ಮೋಜಿನದಾಗಿರುತ್ತದೆ.

**iii) ಬಾಲಕ-ಬಾಲಕಿಯರು ಕೂಡಿಯಾಡುವ ಆಟ:** ಸಾಮಾನ್ಯವಾಗಿ ಬಂಜಾರರಲ್ಲಿ ಹೆಣ್ಣು-ಗಂಡು ಕೂಡಿಯಾಡುವ ಆಟದ ಸಂಖ್ಯೆ ಹೆಚ್ಚಿನದು. ಅವುಗಳೆಂದರೆ, ಅಪಡಿಕಿ ತಿಪಡಿ, ಕಾಕಡಿಕಾಟು ಛರಿ ಅಳಾವು(ಚೂರಿ ಮಸೆದು ಸವತೆ ಕೊಯ್ಯುವ ಆಟ), ಆಂಕಿಮಿಚ್ಚೇರ್ ಆಟ ಮೊದಲಾದವುಗಳನ್ನು ಇಲ್ಲಿ ನೋಡಬಹುದು.

## ಬಂಜಾರರಲ್ಲಿ ನೃತ್ಯ

ಜನಪದ ಕಲೆಗಳಲ್ಲಿ ನೃತ್ಯ, ಸಂಗೀತ, ನಾಟಕ, ಶಿಲ್ಪ ಮತ್ತು ಚಿತ್ರಗಳು ಪ್ರಮುಖವಾಗಿದ್ದು, ಈ ಒಂದು ಕಲಾಪ್ರಕಾರಗಳನ್ನು ಸೂಕ್ತ ಹಿನ್ನೆಲೆಯೊಂದಿಗೆ ವ್ಯಾಖ್ಯಾನಿಸಿದಾಗ, ಅಯಾ ಜನಪದ ಸಂಸ್ಕೃತಿಯ ಪರಿಚಯವಾಗುತ್ತದೆ. "ಜನಪದ ಕಲೆಗಳನ್ನೆಲ್ಲ ವೈಜ್ಞಾನಿಕವಾಗಿ ಅಭ್ಯಾಸ ಮಾಡುವುದರಿಂದ ಜಾನಪದ ಸಂಸ್ಕೃತಿಯನ್ನು ಚೆನ್ನಾಗಿ ತಿಳಿದುಕೊಳ್ಳಲು ಸಾಧ್ಯ ವಾಗುತ್ತದೆ. ಆದ್ದರಿಂದ ಕೇವಲ ಕಲಾ ಸಾಮಗ್ರಿಗಳು ಅಥವಾ ಕಲಾ ಪ್ರಕಾರಗಳು ಮಾತ್ರ ಜನಪದ ಸಮಾಜದ ಬಳುವಳಿ ಪಡೆಯದೆ, ಜಾನಪದ ಬದುಕಿನ ಅವಿಭಾಜ್ಯ ಅಂಗ ವಾಗಿರುತ್ತವೆ.

**ಜನಪದ ಗೀತೆಗಳು**

ಜನಪದ ಸಾಹಿತ್ಯ ಪ್ರಕಾರಗಳಲ್ಲಿಯೇ ಅತ್ಯಂತ ಪ್ರಮುಖತೆಯನ್ನು ಪಡೆದ ಜನಪದ ಗೀತೆಗಳು ಆಯಾ ಜನಾಂಗದ ಸಂಸ್ಕೃತಿಯನ್ನು ಎತ್ತಿಹಿಡಿಯಬಲ್ಲ ಕುರುಹುಗಳಾಗಿವೆ. ಏಕೆಂದರೆ 'ಜನಪದ ಗೀತೆಗಳು ಸಂಸ್ಕೃತಿಯ ಒಂದು ಅಂಗ' ಇದು ಬಾಯಿಯಲ್ಲಿಯೇ ಬ್ರಹ್ಮಾಂಡವನ್ನು ತುಂಬಿಕೊಂಡಿರುವ ಅನಕ್ಷರಸ್ಥ ಸಮಾಜದ ಸಾಹಿತ್ಯ ಪ್ರಕಾರ. "ಭಾವನಾ ಪ್ರಧಾನವಾದ ಗೀತೆ ಪ್ರಪಂಚದಷ್ಟು ವಿಸ್ತಾರವೂ, ವೈವಿಧ್ಯಪೂರ್ಣವೂ, ಸಮೃದ್ಧವೂ ಆದ ಜನಪದ ಪ್ರಕಾರ ಮತ್ತೊಂದಿಲ್ಲ. ಬದುಕಿನಾಮ ಭವದ ಶತಶತ ಮುಖಗಳನ್ನು ಮೈ ತುಂಬಿಕೊಂಡು ಭಾವ ಪ್ರಪಂಚದ ಬಗೆಬಗೆಗಳನ್ನೆಲ್ಲಾ ಹೆಕ್ಕಿಕೊಂಡು ಸಾರ್ವಕಾಲಿಕ ಜೀವನ ಮೌಲ್ಯಗಳಿಂದಲೇ ಬೀಗಿನಿಂತ ಜನಪದ ಗೀತೆಗಳು ಯಾವುದೇ ರಾಷ್ಟ್ರದ ಬಹುದೊಡ್ಡ ಸಂಪತ್ತು. ಅವು ಸಂಸ್ಕೃತಿಯ ಮಹಾ ಪ್ರತೀಕ(ಇಮ್ರಾಪುರ: ೧೯೭೪: ೯೧). ಜನಪದರು ಬದುಕಿನ ವಾಸ್ತವ ಕಟುಸತ್ಯಗಳನ್ನು ತಮಗಾದ ನೋವು–ನಲಿವುಗಳನ್ನು, ಸುಖ–ದುಃಖ ಗಳನ್ನು, ಬವಣೆಗಳನ್ನು ಹಾಡಾಗಿ ತೋಡಿಕೊಳ್ಳುತ್ತಾರೆ. ಇದರಿಂದ ಜೀವನದಲ್ಲಿಯ ಜಡತ್ವ ಕಡಿಮೆಯಾಗುವುದೆಂಬುದು ಅವರ ಅನಿಸಿಕೆ. "ಒಂದು ಜನಪದ ಗುಂಪಿನ ಬಳಕೆ ಯಲ್ಲಿರುವ ಹಾಡುಗಳನ್ನು ಸಮಗ್ರವಾಗಿ ಸಂಗ್ರಹಿಸಿ, ವಿಶ್ಲೇಷಿಸಿ, ವರ್ಗೀಕರಿಸಿ ನೋಡಿದಾಗ ಆ ಗುಂಪಿನ ಜೀವನ ವಿಧಾನ, ಶ್ರದ್ಧೆ, ನಂಬಿಕೆ, ಆಚರಣೆಗಳ ನೈಜ ಪರಿಚಯ ನಮಗಾಗುತ್ತದೆ(ನಾಯಕ:೧೯೭೧:೨೭).

ವಿಶಿಷ್ಟ ಸಂಸ್ಕೃತಿ ಪರಂಪರೆಯನ್ನುಳ್ಳ ಲಂಬಾಣಿಗಳು ತಮ್ಮ ಭಾಷೆಯಲ್ಲಿ ತಮಗಾದ ಪಾಡನ್ನು ಹಾಡಾಗಿ ಹಾಡುತ್ತಾರೆ. ನರ್ತನ, ಗೀತೆಗಳು ಲಂಬಾಣಿಗರ ಜೀವನದಲ್ಲಿ ಹಾಸು ಹೊಕ್ಕಾಗಿ ಸೇರಿಕೊಂಡಿವೆ. ಇವರು ಎಷ್ಟು ಕಷ್ಟಜೀವಿಗಳೋ ಅಷ್ಟೇ ಸರಸಿಗಳಾಗಿದ್ದಾರೆ. ದಿನನಿತ್ಯದ ಕಷ್ಟ ಸುಖಗಳನ್ನು, ಬವಣೆಯನ್ನು ಮರೆತು ನಗುಮುಖದಿಂದ ತಮ್ಮ ನರ್ತನ, ಗೀತಗಳಿಂದ ನಿತ್ಯ ತೃಪ್ತಿಯನ್ನು ಪಡೆಯುವ ಆಶಾಜೀವಿಗಳಾಗಿದ್ದಾರೆ. ಒಂದೊಂದು ಹಾಡಿನಲ್ಲಿಯೂ ಜೀವನ ಸೌಂದರ್ಯ, ಅನುಭವ, ರಸಿಕತನ, ಅಭಿನಯ ಪುಟಿಯುತ್ತ ಶ್ರೋತೃಗಳನ್ನು, ಪ್ರೇಕ್ಷಕರನ್ನು ಮಂತ್ರಮುಗ್ಧರನ್ನಾಗಿಸುತ್ತವೆ. ಹೆಂಗಸರೆಲ್ಲ ಸುತ್ತುಗಟ್ಟಿ ಲಯ ಬದ್ಧವಾಗಿ ಹಾಡುವಾಗ ಶ್ರುತಿಬದ್ಧ ತಂಬೂರಿಯ ಝೇಂಕಾರಕ್ಕಿಲ್ಲದ ಜೀವಕಳೆ, ಲಾಲಿತ್ಯ, ಚೈತನ್ಯ ಅಲ್ಲಿ ಮೈ ತಳೆಯುತ್ತದೆ. ಅವರು ಹಾಡುವ ರೀತಿಯೇ ಅಷ್ಟೊಂದು ಸೊಗಸಾಗಿರುತ್ತದೆ.

ಲಂಬಾಣಿಗರು ಜೀವನದ ವಿವಿಧ ಘಟ್ಟಗಳಲ್ಲಿ ಅಂದರೆ ಜನನದಿಂದ ಹಿಡಿದು ಮರಣದವರೆಗೂ ನಡೆಯುವ ಅನೇಕ ಸಂಸ್ಕಾರಗಳಲ್ಲಿ, ಜೀವನದ ಸಂಘರ್ಷಗಳಲ್ಲಿ,

ಸಾಮಾಜಿಕ ಕಟ್ಟುಪಾಡುಗಳಲ್ಲಿ ಜನಪದ ಗೀತೆಗಳನ್ನು ಹಾಡುತ್ತಾರೆ. ಮದುವೆಯ ಸಂದರ್ಭ ದಲ್ಲಿಯಂತೂ ಹಾಡುಗಳ ಸುರಿಮಳೆ ಹೇಳತೀರದು. ಹಬ್ಬ–ಹರಿದಿನಗಳಲ್ಲಿ ದೇವರು–ದೇವತೆಗಳ ಸ್ತುತಿ ಗೀತೆಗಳನ್ನು, ಮದುವೆ–ಮುಂಜಿವೆಗಳಲ್ಲಿ ಮಂಗಳ ಗೀತೆ, ಪ್ರಣಯ ಗೀತೆಗಳನ್ನು, ಜರಿಯುವ ಗೀತೆಗಳನ್ನು ಹಾಗೂ ಢಾವಲೊ, ಹವೇಲಿಯಂತಹ ಕರುಣಾಜನಕ ವಾಗಿರುವ ವಿವಿಧ ಹಾಸ್ಯ ಗೀತೆಗಳನ್ನು ಹಾಡುತ್ತಾರೆ. ಅಶಿಕ್ಷಿತರಾದರೂ ಹುಟ್ಟಿನಿಂದ ಕವಿ ಹೃದಯವನ್ನು ಪಡೆದ ಈ ಜನ ಗಂಡು–ಹೆಣ್ಣು; ಹಿರಿ–ಕಿರಿಯರೆನ್ನದೆ ತಮಗೆ ಸಂತೋಷ ವಾದಾಗ ಹಾಡಿ ಅದನ್ನು ವ್ಯಕ್ತಪಡಿಸುತ್ತಾರೆ. ಜೀವನ ಸಂಘರ್ಷದಲ್ಲಿ ದುಃಖವಾದಾಗಲೂ ಕಣ್ಣೀರಿನೊಂದಿಗೆ ಅಳುತ್ತ ಹಾಡಿ ತಮ್ಮ ನೋವ(ಪಡ)ನ್ನು ತೋಡಿಕೊಳ್ಳುತ್ತಾರೆ. ಜೀವನದ ಏರಿಳಿತಗಳನ್ನು ಅವರ ಆಳುವ ಹಾಡಿನ ರಾಗಾಲಾಪಗಳಲ್ಲಿ ಕಾಣಬಹುದು. ಬೀಸುವಾಗ, ಕುಟ್ಟುವಾಗ, ತೆನೆ ಕೊಯ್ಯುವಾಗ, ಮಗುವಿನ ತೊಟ್ಟಿಲು ತೂಗುವಾಗ, ಕಳೆ ತೆಗೆಯುವಾಗ ಹಾಗೂ ಕಸೂತಿ ಹಾಕುವಾಗ ಹಾಡುವ ಹಾಡುಗಳು ಅವರ ಕೋಮಲ ಹೃದಯವನ್ನು ಸ್ಪಷ್ಟವಾಗಿ ಬಿಚ್ಚಿ ತೋರಿಸುತ್ತವೆ. ಒಟ್ಟಿನಲ್ಲಿ ಲಂಬಾಣಿಗರ ಹಾಡುಗಳಲ್ಲಿ ಒಂದು ಬಗೆಯ ಮುಗ್ಧತೆ, ಸರಳತೆ ಹಾಗೂ ಕೋಮಲತೆ ಈ ಮೂರು ಗುಣಗಳು ಎದ್ದು ಕಾಣಿಸುತ್ತಿವೆ.

ಲಂಬಾಣಿ ಗೀತಸಾಹಿತ್ಯವನ್ನು ಪ್ರಮುಖವಾಗಿ ಬಿಡಿಗೀತೆ ಹಾಗೂ ಕಥನಗೀತೆಗಳೆಂದು ಎರಡು ರೀತಿಯಿಂದ ವಿಂಗಡನೆ ಮಾಡಬಹುದು. ವಾಕ್ ಸಂಪ್ರದಾಯದಲ್ಲಿ ಉಳಿದು ಬಂದಿರುವ ಈ ಎರಡೂ ಪ್ರಕಾರಗಳು ಬಹುಮುಖ್ಯವಾಗಿವೆ. ಇದರಲ್ಲಿ ಮೊದಲನೆಯದು ಭಾವಗೀತೆಯ ಸ್ವರೂಪದ್ದಾಗಿದ್ದರೆ, ಎರಡನೆಯದು ಕಥಾತ್ಮಕವಾಗಿರುತ್ತದೆ. "ಒಂದು ಭಾವನಿಷ್ಠ ವಾದರೆ ಮತ್ತೊಂದು ವಸ್ತುನಿಷ್ಠ. ಎರಡೂ ಹಾಡಲ್ಪಡುವಂಥವು. ಎರಡರ ರಚನಕಾರರೂ ಇಂದು ಅನಾಮಧೇಯರಾದರೂ, ಎರಡನೆಯದರ ರಚನಕಾರ ಹೆಚ್ಚು ಸುಶಿಕ್ಷಿತ ಕಲಾವಂತ ನೆಂದು ಅಭಿಪ್ರಾಯ.ಮೊದಲ ಗುಂಪಿನ ಗೀತೆಗಳು ಬದುಕಿನ ಚಟುವಟಿಕೆಗಳೊಡನೆ ಹೆಚ್ಚು ಸಂಬಂಧಪಡುವುದರಿಂದ ಇವನ್ನು ಕ್ರಿಯಾತ್ಮಕ ಗೀತೆಗಳೆಂದು ಕರೆಯಬಹುದು. ಆದರೆ ಎರಡನೆಯ ಗುಂಪಿನ ಗೀತೆಗಳು ಈ ಬಗೆಯ ಯಾವುದೇ ಸಾಂಪ್ರದಾಯಿಕ ಸಂದರ್ಭಗಳನ್ನು ಹೆಚ್ಚಾಗಿ ಅಪೇಕ್ಷಿಸುವುದಿಲ್ಲ"(ರಾಗೌ:೧೯೭೮:೧–೨).

## ವರ್ಗೀಕರಣ

ಲಂಬಾಣಿ ಜನಪದ ಗೀತೆಗಳನ್ನು ಅವುಗಳಲ್ಲಿನ ಭಾವ ಮತ್ತು ವಸ್ತುಗಳಿಗೆ ಸಂಬಂಧಿಸಿ ದಂತೆ ಹಾಗೂ ಅಧ್ಯಯನದ ಅನುಕೂಲತೆಗಾಗಿ ಸಮಯ, ಸಂದರ್ಭ, ಕಟ್ಟುಕಟ್ಟಳೆಗಳನ್ನು ಅನುಲಕ್ಷಿಸಿ ಈ ಕೆಳಗಿನಂತೆ ವರ್ಗೀಕರಿಸಬಹುದು:

೧) ಸಂಸ್ಕಾರ ಗೀತೆಗಳು ೨) ಧಾರ್ಮಿಕ ಗೀತೆಗಳು ೩) ಶ್ರಮಪರಿಹಾರ ಗೀತೆಗಳು (ಕೆಲಸದ ಹಾಡುಗಳು ೪) ಪ್ರಕೃತಿ ಗೀತೆಗಳು ಹಾಗೂ ೫) ಶಿಶು ಗೀತೆಗಳು(ಮಕ್ಕಳ ಹಾಡುಗಳು).

**ಸಂಸ್ಕಾರ ಗೀತೆಗಳು**

ಸಂಸ್ಕಾರಕ್ಕೆ ಸಂಬಂಧಿಸಿದ ನಾಲ್ಕು ಗೀತೆಗಳನ್ನು ವ್ಯಕ್ತಿ ಜೀವನದ ಬಾಲ್ಯ, ಯೌವನ, ಮದುವೆ, ಮುಂಜಿವೆ, ಮುಪ್ಪು ಹಾಗೂ ಸಾವು ಮೊದಲಾದ ಪ್ರಮುಖ ಸಂದರ್ಭಗಳಲ್ಲಿ ಹಾಡುವುದು ಕಂಡುಬರುತ್ತದೆ. ಲಂಬಾಣಿಗರಲ್ಲಿ ಸಂಸ್ಕಾರಕ್ಕೆ ಸಂಬಂಧಿಸಿದಂತೆ ಅಸಂಖ್ಯಾತ ಗೀತೆಗಳು ಲಭ್ಯವಾಗುತ್ತವೆ. ಜೀವನದ ವಿವಿಧ ಘಟ್ಟಗಳಲ್ಲಿ ಹಾಡುವ ಸಂಸ್ಕಾರ ಸಂಬಂಧಿ ಜನಪದ ಗೀತೆಗಳನ್ನು ಪ್ರಮುಖವಾಗಿ ಮೂರು ರೀತಿಯಿಂದ ಗುರುತಿಸಬಹುದು: ೧) ಪುತ್ರಜನನ ಗೀತೆಗಳು ೨) ವಿವಾಹ ಗೀತೆಗಳು ಮತ್ತು ೩) ಮರಣ ಗೀತೆಗಳು.

ಬಂಜಾರರಲ್ಲಿ ಅನೇಕ ಬಗೆಯ ಜನಪದ ಕಲೆಗಳಿವೆ. ಸಾಹಿತ್ಯ, ಸಂಗೀತ, ಚಿತ್ರ, ನಾಟಕಗಳು ಇವುಗಳಲ್ಲಿ ಕುಣಿತ ಅಥವಾ ನೃತ್ಯ ಕಲೆಯು ಒಂದು ಪ್ರಮುಖ ಜನಪದ ಕಲಾಪ್ರಕಾರವಾಗಿದೆ.

ಆರಾಧನೆಯ ಹಿನ್ನಲೆಯಲ್ಲಿ ಹುಟ್ಟಿಕೊಂಡಿರುವ ನೃತ್ಯಕಲೆಗೆ ಪ್ರಾಚೀನವಾದ ಇತಿಹಾಸವಿದೆ. ಮನುಷ್ಯ ತನ್ನಲ್ಲಿ ಅಡಕಗೊಂಡಿರುವ ಅವ್ಯಕ್ತ ಭಾವನೆಗಳನ್ನು, ವಿಚಾರಗಳನ್ನು ಸ್ಪಷ್ಟಪಡಿಸು ವುದಕ್ಕಾಗಿ ಈ ದೈಹಿಕ ಕ್ರಿಯೆಯನ್ನು ಲಯಬದ್ಧವಾದ ರೀತಿಯಲ್ಲಿ ಹೊರಚೆಲ್ಲಿ ತಾಳ, ಗತ್ತುಗಳೊಂದಿಗೆ ಮೈಮಣಿಸುವ ಕಲೆಯೇ ನೃತ್ಯಕಲೆಯಾಗಿದೆ.(ತಿಪ್ಪೇರುದ್ರಸ್ವಾಮಿ, ೧೯೬೮, ೬೮೬). ಸಂವೇದನೆಗಳಿಗೂ ಭಾವನೆಗಳಿಗೂ ಅನುಗುಣವಾಗಿ ಉಂಟಾಗುವ ದೇಹದ ಲಯಬದ್ಧವಾದ ಚಲನೆಯೇ ಈ ನೃತ್ಯದ ಮೂಲವಾಗಿದೆ. ಇದು ಮನುಷ್ಯನಲ್ಲಿ ಮಾತ್ರವಲ್ಲ ಪ್ರಾಣಿಗಳಲ್ಲಿಯೂ ಕಂಡುಬರುವ ಸಹಜ ಪ್ರವೃತ್ತಿ, ಕಲೆಗಳಲ್ಲಿಯೇ ಇದಕ್ಕೆ ಅತ್ಯುನ್ನತ್ತವಾದ ಸ್ಥಾನವಿದೆ.

ಆದಿವಾಸಿ ಸಮುದಾಯಗಳಿಗೆ ತಮ್ಮದೇ ಆದ ವಿಶಿಷ್ಟ ಕುಣಿತದ ಪರಂಪರೆಯೊಂದು ಇರುತ್ತದೆ. ಒಂದೊಂದು ಕುಣಿತದ ರೀತಿಯು ಆಯಾ ಪ್ರಾಂತದ ಜನರ ಸಂಸ್ಕೃತಿ ಹಾಗೂ ಜನತೆಯ ಭಾವರೂಪಗಳನ್ನು ಅಭಿವ್ಯಕ್ತಪಡಿಸುತ್ತವೆ.

ಬಂಜಾರರ ಕುಣಿತವೆಂದಾಕ್ಷಣ ಕನ್ನಡಿಗಳನ್ನು ಕೆತ್ತಿದ ಬಣ್ಣ ಬಣ್ಣದ ಲಂಗಗಳನ್ನು ಧರಿಸಿ, ತೆಳ್ಳಗಿನ ಮುಸುಕುಗಳಿಂದ ಮುಖವನ್ನು ಮರೆಸಿ ಇಂಪಾದ ಹಾಡಿನ ಲಯದೊಂದಿಗೆ

ಇಲ್ಲವೆ ವಾದ್ಯದ ತಾಳದೊಂದಿಗೆ ಸರಿಯಾಗಿ ಲಾಲಿತ್ಯದಿಂದ ಕೂಡಿದ ನಿಲ್ಲುತ್ತದೆ. ಗುಂಪು ಗುಂಪಾಗಿ ಮಾಡುವ ಈ ಕುಣಿತಗಳು ಪ್ರೇಕ್ಷಕರ ಕಣ್ಣಿಗೆ ಮನೋಹರವಾಗಿ ಕಂಡುಬರುತ್ತವೆ.

ಬಂಜಾರರು ಮೂಲತಃ ನೃತ್ಯ ಪ್ರಿಯರು. ಈ ಬುಡಕಟ್ಟಿನ ಪರಂಪರಾಗತ ಕುಣಿತಗಳು ಇಂದಿಗೂ ವೈಶಿಷ್ಟ್ಯಪೂರ್ಣವಾಗಿವೆ. ಬಂಜಾರರು ವರ್ಷದುದ್ದಕ್ಕೂ ಆಚರಿಸುವ ಹಬ್ಬ ಹರಿದಿನಗಳಲ್ಲಿ ಕುಣಿತಗಳಿಗೆ ವಿಶೇಷ ಪ್ರಾಧಾನ್ಯತೆಯನ್ನು ಕೊಡುತ್ತಾರೆ. ಸಮೂಹ ಕುಣಿತಗಳು ಬಂಜಾರರ ಕುಣಿತಗಳ ಹೆಚ್ಚುಗಾರಿಕೆ. ಸಮೂಹದೊಡನೆ ಬೆರೆಯುವ ಭಾವನೆಗಳೇ ಮಾಯವಾಗುತ್ತಿರುವ ಇಂದಿನ ದಿನಗಳಲ್ಲಿ ಈ ಬುಡಕಟ್ಟಿನ ಜನರು ಸಮೂಹ ಜೀವನವನ್ನು ಸಾಗಿಸುತ್ತಿರುವ ಇಂದಿನ ದಿನಗಳಲ್ಲಿ ಈ ಬುಡಕಟ್ಟಿನ ಜನರು ಸಮೂಹ ಜೀವನವನ್ನು ಸಾಗಿಸುತ್ತಿರುವುದು ಸಂತಸ ತರುತ್ತದೆ. ಯುವತಿಯರು ವೃದ್ಧೆಯರು ಒಂದಾಗಿ ಕುಣಿಯುವ ಬಂಜಾರರ ಕುಣಿತದಲ್ಲಿ ಸಮೂಹದ ಪರಿಕಲ್ಪನೆಯನ್ನು ಗಾಢವಾಗಿಸುವ ಬಂಧನವಿದೆ. ಲಂಬಾಣಿಗಳಲ್ಲಿ ಸ್ತ್ರೀ ಪುರುಷರಿಬ್ಬರೂ ಕೂಡಿಕೊಂಡು ನರ್ತಿಸುವುದಿಲ್ಲ. ಪ್ರತ್ಯೇಕವಾಗಿಯೇ ಕುಣಿಯುತ್ತಾರೆ. ಇವರಲ್ಲಿ ಸ್ತ್ರೀ–ಪುರುಷರಿಬ್ಬರೂ ಕಲೆತು ನರ್ತಿಸುವ ವಿಧಾನಗಳು ಏಕೆ ರೂಢಿಯಲಿಲ್ಲ ಎಂಬುದು ತಿಳಿದು ಬರುವುದಿಲ್ಲ.

ಶ್ರಮಜೀವಿಗಳಾದ ಬಂಜಾರರಿಗೆ ಕುಣಿತ ಹಾಡುಗಳೆಂದರೆ ತಂಬಾ ಇಷ್ಟ.ಮದುವೆ ಸಮಾರಂಭಗಳಲ್ಲಿ ಹಬ್ಬ–ಜಾತ್ರೆ–ಉತ್ಸವಗಳಲ್ಲಿ, ವಿಶೇಷವಾಗಿ ಹೋಳಿ ಹಬ್ಬದಲ್ಲಿ, ತೀಜ್ ಹಬ್ಬದಲ್ಲಿ ಹಾಗೂ ಇನ್ನಿತರ ವಿಶೇಷ ಸಂದರ್ಭಗಳಲ್ಲಿ ಸ್ತ್ರೀ ಪುರುಷರು ಪ್ರತ್ಯೇಕವಾದ ಗುಂಪುಗಳಲ್ಲಿ ಕುಣಿದು ಆನಂದ ಪಡುತ್ತರೆ. ಹೆಂಗಸರು ವೃತ್ತಾಕಾರದಲ್ಲಿ ಚಲಿಸುತ್ತ ನರ್ತಿಸಿದರೆ ಗಂಡಸರು 'ಲೇಜಿಮ್ ಕುಣಿತ'ವನ್ನು ಕುಣಿಯುತ್ತಾರೆ. ಬಂಜಾರರಲ್ಲಿ ಯಾವುದೇ ರೀತಿಯ ನರ್ತನ ಶಾಲೆಗಳಿಲ್ಲ, ಆದರೂ ಅವರಲ್ಲಿ ಕುಣಿತಕ್ಕೆ ಕೊರತೆಯೆಂಬುದಿಲ್ಲ. ಕುಣಿತ ಬಂಜಾರ ಸ್ತ್ರೀಯರ ಹುಟ್ಟಿನೊಂದಿಗೆ ಬೆರೆತು ಬಂದಿದೆ. ಅದು ಅವರ ಪ್ರಾಣ ವಾಗಿದೆ. ಬಂಜಾರರು ವಾಸಿಸಿರುವ ಪ್ರತಿಯೊಂದು ತಾಂಡದಲ್ಲಿಯೂ ಕುಣಿತ ರೂಢಿಯಲ್ಲಿದೆ. ಇವರಲ್ಲಿ ಕುಣಿತ ಗೊತ್ತಿಲ್ಲದ ಸ್ತ್ರೀಯರಿಲ್ಲವೆಂದರೆ ತಪ್ಪಾಗಲಾರದು.ಈ ದೃಷ್ಟಿಯಿಂದ ಇವರು ಅಭಿಜಾತ ಕಲಾವಿದರು.

ಬಂಜಾರ ಕುಣಿತ ಎಂದಾಕ್ಷಣ ಕಣ್ಮುಂದೆ ಬರುವುದು ಅವರ ರಂಗು–ರಂಗಿನ ಬಟ್ಟೆ, ಅವರ ಉಡುಪಿನ ಅಂಚು, ಒಡಲಲ್ಲಿರುವ ಕನ್ನಡಿ. ಭಾರವಾದ ಮುಸುಕುಗಳಿಂದ ಮುಖ ಮರೆಸಿ ಇಂಪಾದ ಹಾಡಿನ ಲಯಗತಿಗನುಗುಣವಾಗಿ, ಇಲ್ಲವೆ ವಾದ್ಯದ

ತಾಳಮೇಳದೊಂದಿಗೆ ತಮ್ಮ ಬಾಗುಬಳಕುವಿಕೆಯಿಂದ ನರ್ತನ ಮಾಡುತ್ತಿರುವ ಮಹಿಳೆಯರ ಗುಂಪೊಂದು ತಟ್ಟನೆ ನೆನಪಾಗುತ್ತದೆ. ಗುಂಪು ಗುಂಪಾಗಿ ಒಟ್ಟಿಗೆ ಸೇರಿ ಮಾಡುವ ಈ ಕುಣಿತ ನೋಡುಗರ ಕಣ್ಣಿಗೆ ಹಬ್ಬವನ್ನುಂಟು ಮಾಡುವುದಲ್ಲದೆ ಪ್ರಶಾಂತತೆಯೇ ಮೈವೆತ್ತಂತೆ ಗೋಚರಿಸುತ್ತದೆ. ಬಂಜಾರರಲ್ಲಿ ಕಂಡುಬರುವ ಕುಣಿತಗಳನ್ನು ಎರಡು ಭಾಗವಾಗಿ ವಿಂಗಡಿಸಿಕೊಳ್ಳಬಹುದು. ೧. ಹೆಂಗಸರ ಕುಣಿತ ೨. ಗಂಡಸರ ಕುಣಿತ

**೧. ಹೆಂಗಸರ ಕುಣಿತ**

ಬಂಜಾರ ಮಹಿಳೆಯರ ಕುಣಿತ ಎಂದಿಗೂ ವೃತ್ತಾಕಾರವಾಗಿಯೇ ಇರುತ್ತದೆ. ಇವರು "ಕುಣಿತಕ್ಕ ಸುತ್ತುಗಟ್ಟಿ ನಿಂತರೆ ಭದ್ರಕೋಟೆಯಂತಿರುತ್ತದೆ. ಈ ಸುತ್ತು ಕುಣಿತ ಈ ಜನರ ಒಗ್ಗಟ್ಟಿನ ಸಂಕೇತ ಸುತ್ತ ಸಾಲು ಇವರ ಸಂಸ್ಕೃತಿ-ಸಂಪ್ರದಾಯಗಳ ರಕ್ಷಣೆಗೆ ಹಾಕಿದ ಸುತ್ತುಬೇಲಿ ಆ ಬೇಲಿ ದಾಟುವುದು ಅಷ್ಟು ಸುಲಭದ ಮಾತಲ್ಲ" (ಗೊ.ರು.ಚ. ೧೯೭೭: ೧೫೫) ಲಂಬಾಣಿ ಮಹಿಳೆಯರ ಕುಣಿತದ ರೀತಿ ಬಹು ಆಕರ್ಷಣೀಯ. ಕುಣಿತದಲ್ಲಿ ಕೈಕಾಲು ಮತ್ತು ಸೊಂಟಕ್ಕೆ ಹೆಚ್ಚು ಕೆಲಸ. ಬಹು ಸರಳ ಸುಂದರ ಸೊಗಸಾದ ಈ ಕುಣಿತಗಳು ಕೊಯಿಲು ನಾಟಿ, ಬಿತ್ತನೆ ಮುಂತಾದ ದೈಹಿಕ ಕ್ರಿಯೆಗಳಲ್ಲಿ ಕಂಡು ಬರುವ ಚಲನೆಗಳಿಂದ ಸ್ಫೂರ್ತಿ ಪಡೆದಿವೆ ಎಂದೆನಿಸುತ್ತದೆ.ಇವರು "ಎರಡೂ ಕೈಗಳನ್ನು ಮೇಲಕ್ಕೆತ್ತಿ, ಹಾಗೆಯೇ ಎಡಕ್ಕೂ ಬಲಕ್ಕೂ ಮುಖ ತಿರುಗಿಸುತ್ತಾ, ಒಂದೊಂದೇ ಕೈಯನ್ನು ನೇರವಾಗಿ ನೆಲದವರೆಗೆ ಇಳಿಸಿ ಮತ್ತೆ ಮೇಲಕ್ಕೆತ್ತುತ್ತಾರೆ. ಈ ಚಲನೆಗೆ ತಕ್ಕಂತೆ ಸೊಂಟವು ಬಳಕುತ್ತಿರುತ್ತದೆ. ಕೈ ಚಲನೆಯೊಂದಿಗೆ ಹೆಜ್ಜೆಗಳನ್ನು ಹಿಂದಕ್ಕೆ ಮುಂದಕ್ಕೆ ಹಾಕುತ್ತಾ ಚಪ್ಪಾಳೆ ತಟ್ಟುತ್ತಾರೆ. ಈ ಚಲನವಲನಗಳು ಒಂದು ದಿಕ್ಕಿನಲ್ಲಿ ನಡೆಯುತ್ತಿದ್ದಂತೆ ಕುಣಿತದ ತಂಡ ಅದೇ ವೃತ್ತಾಕಾರದಲ್ಲೇ ಇನ್ನೊಂದು ದಿಕ್ಕಿನಲ್ಲಿ ಸುತ್ತುತ್ತದೆ. ವಿವಿಧ ಭಂಗಿಗಳಲ್ಲಿ ಕೈಯಾಡಿಸಿ, ನಡುವಾಡಿಸಿ ಹಿಂದೆ ಮುಂದೆ ಚಲಿಸಿ ಸುತ್ತಿನಲ್ಲಿ ಕುಣಿಯುವುದಕ್ಕೆ ತಕ್ಕಂತೆ ಕಲಾವಿದರ ಕಂಠದಿಂದ ವೈವಿಧ್ಯಪೂರ್ಣ ಹಾಡುಗಳು ಹರಿದು ಬರುತ್ತದೆ(ಗೊರು.ಚ: ೧೯೭೭: ೧೫೫).

ಬಂಜಾರ ಕುಣಿತಕ್ಕೆ ಹಿಮ್ಮೇಳವಾಗಿ ಕೆಲವು ಕಡೆ ತಮ್ಮಟೆ ಬಾರಿಸಿದರೆ ಇನ್ನೂ ಕೆಲವೆಡೆ ತಾಳ ಬಡಿಯುತ್ತ ಕುಣಿಯುವುದುಂಟು. ಲಂಬಾಣಿ ಮಹಿಳೆಯರು ಮನದುಂಬಿ ಕುಣಿಯುವಾಗ ಅವರ ವೇಷಭೂಷಣಗಳಲ್ಲಿ ವಿಶೇಷ ಮೆರುಗನ್ನು ಕಾಣಬಹುದಾಗಿದೆ. ಕಾಲುಗೆಜ್ಜೆಯ ನಾದ, ಕೈಯಲ್ಲಿನ ದಂತದ ಬಳೆಗಳ ಸದ್ದು, ಗುಂಪುಗಾಯನದಿಂದ

ಬರುವ ಮಧುರ ಧ್ವನಿ, ಬಾಗಿಬಳುಕಿ ಕುಣಿಯುವಾಗ ಇಳಿಬೀಳುವ ಮುಂಗೂದಲಿನ ಸೊಗಸು – ಹೀಗೆ ಇವರ ಕುಣಿತದ ಸೊಗಸನ್ನು ಪ್ರತ್ಯಕ್ಷ ನೋಡಿಯೇ ಸವಿಯಬೇಕು. ಇವರ ಈ ಕುಣಿತ ನೋಡುಗರನ್ನು ಮಂತ್ರಮುಗ್ಧರನ್ನಾಗಿಸುತ್ತದೆ.

ಬಂಜಾರ ಮಹಿಳೆಯರು ಹಬ್ಬ ಹರಿದಿನ, ಜಾತ್ರೆ, ಉತ್ಸವ ಮದುವೆ ಮುಂತಾದ ಸಮಾರಂಭಗಳಲ್ಲಿ ಬೇರೆ ಬೇರೆ ರೀತಿಯ ಕುಣಿತಗಳನ್ನು ಕುಣಿಯುತ್ತಾರೆ. ಅಂದರೆ ಹಬ್ಬ, ಜಾತ್ರೆ, ಮದುವೆ, ಉತ್ಸವ ಸಂದರ್ಭದ ಕುಣಿತ, ತೀಜ ಕುಣಿತ, ಲೇಂಗಿ ಕುಣಿತ, ಕೋಲಾಟದ ಕುಣಿತ, ಕಿಕ್ಲಿ ಕುಣಿತ ಮುಂತಾದ ಕುಣಿತಗಳನ್ನು ಕುಣಿಯುವುದರೊಂದಿಗೆ ಹಾಡುತ್ತಾರೆ. ಕುಣಿಯುವಾಗ ಆ ಸಂದರ್ಭಕ್ಕೆ ಸರಿಹೊಂದುವ ಹಾಡನ್ನು ಆಗ್ಗಿಂದಾಗಲೇ ಕಟ್ಟಿ ಹಾಡುತ್ತಾ ನರ್ತಿಸಬಲ್ಲರವರು. ಬಂಜಾರ ಮಹಿಳೆಯರು ಹಬ್ಬ, ಜಾತ್ರೆ, ಉತ್ಸವ, ಮದುವೆ ಸಮಾರಂಭಗಳಲ್ಲಿ ಗುಂಪುಗೂಡಿ ಹಾಡಿನ ಲಯಕ್ಕೆ ಇಲ್ಲವೆ ಹಲಗೆಯ ತಾಳಗತಿಗನುಗುಣವಾಗಿ ನರ್ತಿಸಿ ನಲಿಯುತ್ತಾರೆ. ಇವು ಸಾಮಾನ್ಯವಾದ ಸರಳ ಕುಣಿತವಾಗಿದೆ. ಶ್ರೀ ಕೃಷ್ಣನನ್ನು ಮೆಚ್ಚಿಸುವ ಸಲುವಾಗಿ ಕುಣಿಯುವ ಕುಣಿತವೇ 'ತೀಜ ಕಣಿತ'ವಾಗಿದೆ. ಕೃಷ್ಣನಿಗೆ ಸಂಬಂಧಿಸಿದ ಪದಗಳನ್ನು ಹಾಡುತ್ತ ಆ ಪದದ ಲಯಗತಿಗೆ ತಕ್ಕಂತೆ ಕುಣಿದು ಮೈಮರೆಯುತ್ತಾರೆ. ದೈವೀ ಆರಾಧನೆಯ ಹಿನ್ನೆಲೆಯಲ್ಲಿ ಮೂಡಿ ಬಂದಿರುವ ಈ ಹಾಡುಗಳು ಬೇರೆ ಸಂದರ್ಭಗಳಲ್ಲಿ ಹೊರಹೊಮ್ಮುವುದಿಲ್ಲ. ಹಾಗೆಯೇ ಇವುಗಳನ್ನು ಕುಣಿತಕ್ಕಾಗಿ ಬಳಸಿಕೊಳ್ಳುವಂತಿಲ್ಲ. ಹೋಳಿ ಹಬ್ಬದ ಆಚರಣೆಯ ಸಂದರ್ಭದಲ್ಲಿ ಬಂಜಾರ ಸ್ತ್ರೀಯರು ಶೃಂಗಾರ ಗೀತೆಗಳನ್ನು ಹಾಡುತ್ತ ಕುಣಿದು ನಲಿಯುವ ವಿಶಿಷ್ಟವಾದ ಕುಣಿತ 'ಲೇಂಗಿಕುಣಿತ'ವೆಂದೇ ಹೆಸರಾಗಿದೆ. ಹೋಳಿ ಹಬ್ಬದ ಸಂದರ್ಭವನ್ನುಳಿದ ಬೇರೆ ಸಂದರ್ಭ ಗಳಲ್ಲಿ ಈ ಹಾಡು, ಕುಣಿತವನ್ನು ನಿಷೇಧಿಸಲಾಗಿದೆ.

**ತೀಜ ಕುಣಿತ:** ಲಂಬಾಣಿ ಸ್ತ್ರೀಯರು ಶ್ರೀಕೃಷ್ಣನನ್ನು ಮೆಚ್ಚಿಸುವ ಉದ್ದೇಶಕ್ಕಾಗಿ ಕುಣಿಯುವ ಅಪೂರ್ವ ಕುಣಿತವೇ 'ತೀಜ ಕುಣಿತ'. ಶ್ರಾವಣ ಇಲ್ಲವೆ ಭಾದ್ರಪದ ಮಾಸ ಗಳಲ್ಲಿ ಬಿದಿರಿನ ಬುಟ್ಟಿಗಳಲ್ಲಿ ಗೋಧಿ ಸಸಿಗಳನ್ನು ನಾಟಿಸಿ, ಒಂಭತ್ತನೆಯ ದಿನಕ್ಕೆ ಶ್ರೀಕೃಷ್ಣನ ಹೆಸರಿನಲ್ಲಿ ಪೂಜೆ ಸಲ್ಲಿಸುತ್ತಾರೆ. ಒಂಭತ್ತು ದಿನಗಳವರೆಗೆ ಬೆಳೆಸಿದ ಗೋಧಿ ಸಸಿಯ ಬುಟ್ಟಿಗಳನ್ನು ತಲೆಯ ಮೇಲೆ ಹೊತ್ತು ಶ್ರೀಕೃಷ್ಣನನ್ನು ಸ್ತುತಿಸುವ ಹಾಡುಗಳೊಂದಿಗೆ ದಿನವಿಡೀ ಕುಣಿದು ಕೊನೆಯಲ್ಲಿ ಸಸಿಗಳನ್ನು ನೀರಿನಲ್ಲಿ ವಿಸರ್ಜಿಸುತ್ತಾರೆ. ಈ ಸಂದರ್ಭದಲ್ಲಿ ಬಂಜಾರ ಮಹಿಳೆಯರು ದೇವರನ್ನು ಕುರಿತು ನಿರರ್ಗಳವಾಗಿ ಹಾಡಿ ಕುಣಿಯುತ್ತಾರೆ.

**ಲೇಂಗಿ ಕುಣಿತ:** ಹೋಳಿಹಬ್ಬದ ಆಚರಣೆ ಸಂದರ್ಭದಲ್ಲಿ ಬಂಜಾರ ಸ್ತ್ರೀಯರು ಶೃಂಗಾರ ರಸದಿಂದ ಕೂಡಿದ ಹಾಡುಗಳನ್ನು ಹಾಡುತ್ತ ಕುಣಿದು ಕುಪ್ಪಳಿಸುವ ವಿಶಿಷ್ಟ ಕುಣಿತವೇ ಲೇಂಗಿ ಕುಣಿತ. ಹೋಳಿಹಬ್ಬ, ಪ್ರಸಂಗ ಬಿಟ್ಟರೆ ಬೇರೆ ಪ್ರಸಂಗಗಳಲ್ಲಿ ಈ ಕುಣಿತಕ್ಕೆ ನಿಷೇಧವಿದೆ. ಸಾಧ್ಯವಾದಷ್ಟು ಜನ ಸ್ತ್ರೀಯರು ಕೈ ಕೈ ಹಿಡಿದುಕೊಂಡು ವೃತ್ತಾಕಾರವಾಗಿ ನಿಂತು ಹಾಡನ್ನು ಹಾಡುತ್ತ ಹಾಡಿನ ಲಯಕ್ಕೆ ಅನುಗುಣವಾಗಿ ಹಿಂದಕ್ಕೆ ಮುಂದಕ್ಕೆ ಸರಿದು ಕುಣಿಯುತ್ತಾರೆ.

ಎರಡೂ ಕೈಗಳಲ್ಲಿ ಕೋಲು ಹಿಡಿದು ಕೋಲಾಟದ ತಾಳಕ್ಕೆ ತಕ್ಕಂತೆ ಕುಣಿಯುವ ಕುಣಿತವೇ 'ಕೋಲಾಟದ ಕುಣಿತ'ವಾಗಿದೆ. ಯಾವುದೇ ಪಕ್ಕ ವಾದ್ಯಗಳ ಸಹಾಯವಿಲ್ಲದೆ, ಹಾಡುಗಳಲ್ಲಿನ ಭಾವಕ್ಕೆ, ಲಯಕ್ಕನುಗುಣವಾಗಿ ಕುಣಿಯುವ ಯುವತಿಯರ ಜೋಡಿ ಕುಣಿತವೇ 'ಕಿಕ್ಲ ಕುಣಿತ'ವೆನಿಸಿದೆ. ಯುವತಿಯರು ಜೊತೆಯಾಗಿ ಕಾಲುಗಳನ್ನು ಹತ್ತಿರ ಹತ್ತಿರವಾಗಿಟ್ಟುಕೊಂಡು, ಒಬ್ಬರು ಇನ್ನೊಬ್ಬರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಂಡು ಮೈಯನ್ನು ಹಿಂದಕ್ಕೆ ಬಗ್ಗಿಸಿ ಸುತ್ತು ಸುತ್ತಾಗಿ ಕುಣಿಯುತ್ತಾರೆ. ಕೆಲವೊಮ್ಮೆ ಹಾಡುಗಳಿಲ್ಲದೆ ಹಾಗೆಯೇ ಸುತ್ತುಸುತ್ತಾಗಿ ಕುಣಿಯುವುದುಂಟು.

ಬಂಜಾರ ಮಹಿಳೆಯರು ವಿಶೇಷ ಸಂದರ್ಭಗಳಲ್ಲಿ ತಾಂಡದ ದೇವಸ್ಥಾನದ ಮುಂಭಾಗ ದಲ್ಲಿ ಮನದಣಿಯುವಂತೆ ಮನಸ್ಸಿನ ತೃಪ್ತಿಗಾಗಿ ಕುಣಿಯುತ್ತಾರೆ. ಹಾಡಿನ ಲಯಕ್ಕೆ ಹೊಂದಿಕೊಳ್ಳುವ ಕುಣಿತದ ವಿನ್ಯಾಸಗಳು, ಅಂದವಾದ ತಿರುಗುವಿಕೆ ಪ್ರತ್ಯೇಕವಾದ ಚಮತ್ಕಾರ- ಮುಂತಾದವು ಇವರ ಕುಣಿತದ ವೈಶಿಷ್ಟ್ಯಗಳಾಗಿವೆ.

**೨. ಗಂಡಸರ ಕುಣಿತ**

ಬಂಜಾರ ಪುರುಷರು ಕುಣಿಯುವುದು ತುಂಬಾ ವಿರಳ. ಜಾತ್ರೆ-ಉತ್ಸವ, ಮದುವೆ ಮುಂತಾದ ಸಂದರ್ಭಗಳಲ್ಲಿ ಮಾತ್ರ ಕುಣಿಯುತ್ತಾರೆ. ಇವರ ಕುಣಿತಗಳಿಗೆ ಹಿನ್ನೆಲೆಯಾಗಿ ಹಾಡುಗಳು ಇರಬೇಕೆಂದೇನಿಲ್ಲ. ಇವರ ಕುಣಿತಗಳಲ್ಲಿ 'ಲೇಂಗಿ ಕುಣಿತ', 'ಅರಾವಿ ಕುಣಿತ', 'ಲೇಜಿಮ್ ಕುಣಿತ', 'ಮಳೆರಾಯನ ಕುಣಿತ'ಗಳು ಪ್ರಮುಖವಾದವು.

'ಲೇಂಗಿ ಕುಣಿತ' – ಹೋಳಿ ಹಬ್ಬಕ್ಕೆ ಹತ್ತು – ಹದಿನೈದು ದಿನಗಳಿರುವಾಗಲೇ ಯುವಕರು ಪ್ರತಿ ರಾತ್ರಿ 'ಲೇಂಗಿ'(ಪ್ರೇಮಗೀತೆ) ಹಾಡುತ್ತಾ ಕುಣಿಯುತ್ತಾರೆ. ತಮಗಿಷ್ಟವಾದ ಯುವತಿಯರ ಕುರಿತು ಹಾಡುವ ಈ ಪ್ರೇಮ ಪ್ರಣಯದ ಗೀತೆಗಳು ಕೆಲವೊಮ್ಮೆ ಅಶ್ಲೀಲತೆಗೂ ಬಂದು ಮುಟ್ಟುವುದಿದೆ. ಆಗ ಹೆಣ್ಣುಮಕ್ಕಳು ಬಡಿಗೆ, ಕೋಲು ತೆಗೆದುಕೊಂಡು ಹೊಡೆಯಲು

ಮುಂದಾಗುತ್ತಾರೆ. ಅತ್ತಿಗೆಯಂದಿರು, ಮೈದುನರ ರುಮಾಲು, ಟೊಪ್ಪಿಗೆ ಏನನ್ನಾದರೂ ಕಸಿದುಕೊಂಡು, ಅವರು ಕಾಣಿಕೆ ಕೊಟ್ಟು ನಂತರ ಮರಳಿಸುತ್ತಾರೆ. ಬೈಗುಳ, ಹೊಡೆತ, ಬಡಿತ, ಕುಣಿತಗಳಿಗೆ ಮುಕ್ತ ಅವಕಾಶವಿರುವ ಹೋಳಿ ಎಂದರೆ ಲಂಬಾಣಿಗರ ಮೈನವಿರೇಳುತ್ತದೆ.

'ಮಳೆರಾಯನ ಕುಣಿತ' – ತಾಂಡಗಳಿಗೆ ಮಳೆಬಾರದೆ ಬರ ಅಥವಾ ಕ್ಷಾಮ ತಲೆದೋರಿದಾಗ, ಲಂಬಾಣಿಗರು ಮಳೆರಾಯನಿಗೆ ಪೂಜೆ ಮಾಡಿ ನೈವೇದ್ಯ ಸಲ್ಲಿಸುವ ಸಲುವಾಗಿ ಹಾಡು ಹೇಳಿಕೊಂಡು ಕುಣಿಯುತ್ತಾರೆ. ತಾಂಡದ ಪ್ರತಿ ಮನೆ ಮುಂದೆಯೂ ಕುಣಿದು ಅಂದಿನ ಪೂಜೆ, ನೈವೇದ್ಯಕ್ಕೆ ಬೇಕಾದ ಸಾಮಾನುಗಳನ್ನು ಸಂಗ್ರಹಿಸಿ ಪೂಜೆ ಸಲ್ಲಿಸುತ್ತಾರೆ.

ಹೀಗೆ ಬಂಜಾರರ ಕುಣಿತ ಬೇರೆಯವರ ಕುಣಿತಕ್ಕಿಂತ ವಿಶಿಷ್ಟವಾಗಿದ್ದು, ಅವರ ಬದುಕಿನೊಂದಿಗೆ ನಿಕಟಸಂಬಂಧವನ್ನು ಹೊಂದಿದೆ. ಅವರ ಕುಣಿತಕ್ಕೆ ಮೂಲ ಅವರ ಸಂಸ್ಕೃತಿಯೇ ಆಗಿರುವುದು ಗಮನಿಸಬೇಕಾದ ಅಂಶ. ಲಂಬಾಣಿಗಳ ಕುಣಿತ, ಹಾಡುಗಳಿಗೆ ಸ್ವಲ್ಪ ವ್ಯವಸ್ಥಿತ ತರಬೇತಿ ನೀಡಿ ಜನಪದ ಕಲಾ ಪ್ರದರ್ಶನಗಳಲ್ಲಿ, ಕಲಾಮೇಳಗಳಲ್ಲಿ ಸರಿಯಾದ ಅವಕಾಶ ಕಲ್ಪಿಸಿ ಕೊಡಬೇಕಾದುದು ಅಗತ್ಯವಾಗಿದೆ.

ಹೊಸದುರ್ಗ ತಾಲ್ಲೂಕಿನ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ತಾಂಡಗಳಾದ ಸಿಂಗೇನಹಳ್ಳಿ ತಾಂಡ, ತಂಡಗ ಲಂಬಾಣಿಹಟ್ಟಿ, ಕೃಷ್ಣಾಪುರ ಲಂಬಾಣಿ ತಾಂಡ, ಹನುಮನ ತಾಂಡ ಮತ್ತು ಅಲಘಟ್ಟ ಲಂಬಾಣಿ ತಾಂಡಗಳಲ್ಲಿನ ಭಾಷೆ, ಸಾಹಿತ್ಯ ಮತ್ತು ಕಲೆ ಕುರಿತು ಅವಲೋಕಿಸಿ ಅಧ್ಯಯನ ಮಾಡಿದಾಗ ಕಂಡುಬಂದತಂಹ ಮಾಹಿತಿಗಳು ಈ ಕೆಳಕಂಡಂತಿದೆ.

**ಭಾಷೆ:** ಈ ತಾಂಡಗಳ ಭಾಷೆ ಉತ್ತರ ಭಾರತೀಯ ಹಿಂದಿ, ಮರಾಠಿ ಭಾಷಾ ಪ್ರಭಾವಗಳಿಂದ ಕೂಡಿದ್ದು, ಪ್ರಾದೇಶಿಕವಾಗಿ ಕನ್ನಡ ಮತ್ತು ಅಲ್ಪಸ್ವಲ್ಪ ತೆಲುಗು ಮಿಶ್ರಿತ ಭಾಷೆಯಿಂದ ಕೂಡಿರುತ್ತದೆ. ಇತ್ತೀಚೆಗೆ ನಾಗರೀಕ ಸಮಾಜಗಳ ಸಂಪರ್ಕಗಳನ್ನು ಏರ್ಪಡಿಸಿ ಕೊಂಡು ತಮ್ಮ ಮೂಲ ಭಾಷೆಯ ಜೊತೆಗೆ ಅನ್ಯಭಾಷೆಗಳ ಬಗ್ಗೆ ಆಸಕ್ತಿ ಹೊಂದುತ್ತಿರುವುದು ಕಂಡುಬಂದಿದೆ. ಉಳಿದಂತೆ ಯುವಪೀಳಿಗೆಯು ಶೈಕ್ಷಣಿಕ ಕ್ಷೇತ್ರದಲ್ಲಿ ತಮ್ಮನ್ನು ತಾವು ಸಕ್ರೀಯವಾಗಿ ತೊಡಗಿಸಿಕೊಂಡು, ಮೂಲ ಲಂಬಾಣಿ ಭಾಷೆಯನ್ನು ಕೇವಲ ತಮ್ಮ ವೈಯಕ್ತಿಕ, ಕೌಟುಂಬಿಕ ಹಾಗೂ ಸಮೀಪ ಬಂದುಗಳೊಡನೆ ಸಂಪರ್ಕ ವೇರ್ಪಡಿಸಿಕೊಳ್ಳುವಾಗ ಮಾತ್ರ ಬಳಕೆ ಮಾಡಿಕೊಳ್ಳುತ್ತಿರುವುದು ಕಂಡುಬರುತ್ತಿದೆ. ಮುಂದುವರೆಯುತ್ತಾ ಮಹಾನಗರ

ಗಳಲ್ಲಿ ವಾಸ್ತವ್ಯ ಮಾಡಿಕೊಂಡಿರುವ ಬಂಜಾರ ತಾಂಡದ ಹೊಸ ಪೀಳಿಗೆಯಂತೂ ಬಂಜಾರ ಭಾಷೆಯ ಗಂಧಗಾಳಿಯನ್ನು ಸ್ವೀಕರಿಸುತ್ತಿಲ್ಲಾ. ಆಂಗ್ಲ ಭಾಷಾ ಮೋಹಕ್ಕೆ ಒಳಗಾಗುತ್ತಿದ್ದಾರೆ.

ಚಿಕ್ಕಮಗಳೂರು ಜಿಲ್ಲೆಯಲ್ಲಿನ ಎಂ.ಎನ್.ತಾಂಡ, ಬಸವನಹಳ್ಳಿ ತಾಂಡ, ಸಿ.ಎಲ್.ತಾಂಡ ನಡವಳ್ಳಿ ತಾಂಡ ಮತ್ತು ಉಪ್ಪಿನಹಳ್ಳಿ ತಾಂಡಗಳು ಅಷ್ಟೇನೂ ಭಾಷೆಯಲ್ಲಿ ಪ್ರಗತಿಯಾಗಲೀ ಬದಲಾವಣೆಯಾಗಲೀ ಕಂಡುಕೊಂಡಿಲ್ಲ. ಕಾರಣ ಇವರಲ್ಲಿ ಶೈಕ್ಷಣಿಕ, ಆರ್ಥಿಕ ಪ್ರಗತಿಯಲ್ಲಿ ಹೊಸದುರ್ಗದ ತಾಂಡಗಳಿಗೆ ಹೋಲಿಕೆ ಮಾಡಿದರೆ ಅಷ್ಟೇನೂ ಅಭಿವೃದ್ಧಿಯಾಗಿಲ್ಲ. ಇಂದಿಗೂ ಇವರಲ್ಲಿನ ಬಡತನ, ನಿರುದ್ಯೋಗ ಹಾಗೂ ಶೋಷಣೆಗಳು ಭಾಷಾ ಪ್ರಗತಿಗೆ ಅಡಚಣೆಗಳಾಗಿವೆ. ಆದರೆ ಚಿಕ್ಕಬಳ್ಳಾಪುರ ಜಿಲ್ಲೆಯ ಬಾಗೇಪಲ್ಲಿಯ ತಾಲ್ಲೂಕು ತಾಂಡಗಳಾದ ಲಕ್ಷಣತಾಂಡ, ಸಿದ್ಧವನಪಳ್ಳಿತಾಂಡ, ಮರವಪಳ್ಳಿ ತಾಂಡ, ಪಾರ್ವತಿ ಪುರತಾಂಡ ಮತ್ತು ಕೊಯ್ಯಗುಂಟ ತಾಂಡಗಳಲ್ಲಿ ಕಂಡುಬಂದಿರುವಂತೆ, ಮೂಲ ಬಂಜಾರಿ ಭಾಷೆಯೊಂದಿಗೆ ತೆಲುಗು ಭಾಷೆಯನ್ನು ಮಿಶ್ರಣ ಮಾಡಿಕೊಂಡು ನಿತ್ಯಜೀವನ ವ್ಯವಹಾರ ನಿರ್ವಹಿಸುತ್ತಿದ್ದಾರೆ. ಪಕ್ಕದ ಆಂಧ್ರಪ್ರದೇಶದ ಭಾಷೆ, ಸಾಹಿತ್ಯ, ಕಲೆ, ಸಂಸ್ಕೃತಿ, ಸಂಪ್ರದಾಯಗಳಿಗೆ ಕ್ರಮೇಣವಾಗಿ ಪ್ರಭಾವಕ್ಕೆ ಒಳಗಾಗಿರುತ್ತಾರೆ. ಆದಾಗ್ಯೂ ತಮ್ಮ ಮೂಲ ಭಾಷೆ, ಸಂಸ್ಕೃತಿ, ಸಂಬಂಧಗಳನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದಾರೆ. ಇಂತಹ ಪ್ರಯತ್ನಗಳು ಕೇವಲ ವೈಯಕ್ತಿಕ ಕೌಟುಂಬಿಕ ವೈವಾಹಿಕ, ಸಂಪ್ರದಾಯಗಳಲ್ಲಿ ಮಾತ್ರ ಕಾಣಲಾಗುತ್ತಿದೆ ಆದರೂ, ಆಧುನಿಕತೆಯ ಆಕರ್ಷಣೆಗೆ ತಮ್ಮನ್ನು ತಾವು ತೊಡಗಿಸಿಕೊಂಡರೂ, ವಾಸ್ತವ್ಯ, ಉಡುಗೆ-ತೊಡುಗೆ, ನಾಮಕರಣ, ಹಬ್ಬ-ಹರಿದಿನಗಳು, ಮಾತ್ರ ಬಂಜಾರ ಸಾಂಸ್ಕೃತಿಕ ಜೀವನವನ್ನು ಪ್ರತಿಬಿಂಬಿಸುತ್ತಿದೆ.



ಅಧ್ಯಾಯ ಆರು

# ಪರಿವರ್ತನೆಯಲ್ಲಿ ಬಂಜಾರ ಸಮುದಾಯ

೬.೧. ಸಾಮಾಜಿಕ ಪರಿವರ್ತನೆ

೬.೨. ಆರ್ಥಿಕ ಪರಿವರ್ತನೆ

೬.೩. ರಾಜಕೀಯ ಪರಿವರ್ತನೆ

ಅಧ್ಯಾಯ ಆರು

# ಪರಿವರ್ತನೆಯಲ್ಲಿ ಬಂಜಾರ ಸಮುದಾಯ

ಪರಿವರ್ತನೆ ಅಥವಾ ಗತಿಶೀಲತೆ ಸಮಾಜದ ಆಂತರಿಕ ಲಕ್ಷಣಗಳಲ್ಲಿ ಒಂದಾಗಿದೆ. ಪರಿವರ್ತನೆಯ ತತ್ವವು ಗಹನವಾದದು. ಮಾನವನು ಇಂದು ಅನಾಗರಿಕ ಸ್ಥಿತಿಯಿಂದ ನಾಗರಿಕ ಸ್ಥಿತಿಗೆ ಬರಲು ಮತ್ತು ಇನ್ನೂ ಹೆಚ್ಚಿನ ಸ್ಥಿತಿಗೆ ಹೋಗಲು ಪರಿವರ್ತನೆಯೇ ಕಾರಣವಾಗಿದೆ. ಪರಿವರ್ತನೆಯ ಅಗಾಧತೆಯನ್ನು ಊಹಿಸುವುದೂ ಮತ್ತು ಅಳೆಯುವುದೂ ಅಷ್ಟೇ ಕಷ್ಟದ ಕೆಲಸವಾಗಿದೆ.

ಇ.ಬಿ.ಟೇಲರ್, ಎಲ್.ಹೆಚ್. ಮೊರ್ಗಾನ್, ಹರ್ಬಟ್ ಸ್ಪೆನ್ಸರ್, ಡರ್ಖಿಮ್, ಸೈಂಟ್ ಸೈಮನ್, ಆಗಸ್ಟ್‌ಕೋಮ್ಸ್, ಇವರುಗಳ ವಿಕಾಸವಾದಿ ತತ್ವಸಿದ್ಧಾಂತಗಳಂತೆ ಸಮಾಜ ಅಥವಾ ಸಮುದಾಯಗಳು ಸರಳ ರೂಪದಲ್ಲಿ ಆರಂಭವಾಗಿ ಮಂದಗತಿಯಿಂದ ಸಂಕೀರ್ಣ ರೂಪದತ್ತ ಸಾಗುತ್ತವೆ. ಮುಂದುವರೆಯುತ್ತಾ ಈ ಚಿಂತಕರ ದೃಷ್ಟಿಯ ಪ್ರಕಾರ ಪರಿವರ್ತನೆ ಮತ್ತು ಪ್ರಗತಿ ಸಮಾನವಾದವುಗಳು, ಆದ್ದರಿಂದ ಎಲ್ಲಾ ಸಾಮಾಜಿಕ ಪರಿವರ್ತನೆಗಳು ಪ್ರಯೋಜನಕಾರಿಯಾಗಿಯೇ ಇರುತ್ತವೆ. ವಿಕಾಸದ ಪ್ರಕ್ರಿಯೆಗಳು ಸಮಾಜಗಳನ್ನು ನವ್ಯ ಹಾಗೂ ಶ್ರೇಷ್ಠಮಟ್ಟದ ನಾಗರಿಕತೆಗಳತ್ತ ಅನಿವಾರ್ಯವಾಗಿ ಕೊಂಡೊಯ್ಯುವವು ಎಂಬುದಾಗಿ ಅಭಿಪ್ರಾಯ ಪಡುತ್ತಾರೆ.

ಡೇನಿಯಲ್ ಲರ್ನರ್ ಎಂಬ ಮಾನವಶಾಸ್ತ್ರಜ್ಞರು ಮಧ್ಯ ಪ್ರಾಚ್ಯ ಸಮಾಜಗಳ ಅಧ್ಯಯನವೊಂದರಲ್ಲಿ ಆಧುನೀಕರಣ ಎಂಬ ಕಲ್ಪನೆಯನ್ನು ಬಳಸಿದ್ದಾರೆ. ಇವರ ಅಭಿಪ್ರಾಯದಂತೆ ಆಧುನೀಕರಣ ವೈಚಾರಿಕತೆ ವೈಜ್ಞಾನಿಕತೆ ಮಾನವನ ಹಿತಸಾಧನೆ ಮತ್ತು ವಸ್ತು ಪ್ರಾಧಾನ್ಯ ದೃಷ್ಠಿಯನ್ನೊಳಗೊಂಡ ಜೀವನದ ಕ್ರಮವನ್ನು ಪ್ರತಿಬಿಂಬಿಸುವ ಕಲ್ಪನೆ.

ಪಶ್ಚಿಮ ದೇಶವೊಂದರ ಪ್ರಭಾವಿ ವಲಯಕ್ಕೆ ಸಿಲುಕಿರುವುದರ ಪರಿಣಾಮವಾಗಿ ಪಶ್ಚಿಮೇತರ ದೇಶಗಳಲ್ಲಿ ಸಂಭವಿಸಬಹುದಾದ ಸಾಮಾಜಿಕ–ಸಾಂಸ್ಕೃತಿಕ ಪರಿವರ್ತನೆಗಳನ್ನು ವಿಶ್ಲೇಷಿಸಲು ಪಾಶ್ಚಾತ್ಯೀಕರಣ ಮತ್ತು ಆಧುನೀಕರಣ ಎಂಬ ಕಲ್ಪನೆಗಳನ್ನು ಬಳಸುವ ಪರಿಪಾಠವಿದ್ದರೂ ಡೇನಿಯಲ್ ಲರ್ನರ್‌ರ ಆಧುನೀಕರಣ ಕಲ್ಪನೆಯೇ ಹೆಚ್ಚು ಸೂಕ್ತ ಹಾಗೂ ಸಂಗತವಾಗಿರುತ್ತದೆ ಎಂದಿದ್ದಾರೆ.

ಎಂ.ಎನ್.ಶ್ರೀನಿವಾಸ್ ರವರ ಕೃತಿ Social Change in Modern India-1971[1]ಇವರ ಬರಹಗಳಲ್ಲಿ ವ್ಯಕ್ತವಾಗಿರುವಂತೆ ಸಂಸ್ಕೃತೀಕರಣದ ಪ್ರಕ್ರಿಯೆಯು "ಉಲ್ಲೇಖ ಸಮೂಹ"ದ ಪ್ರಕ್ರಿಯೆಯಂತೆ ಕಾರ್ಯವೆಸಗುವುದು. ಹೋಲಿಕೆ ಅಥವಾ ತುಲನೆಯ ಅಂಶಗಳಾಗಿ ಕಾರ್ಯವೆಸಗುವ ಸಮೂಹಗಳೇ ಉಲ್ಲೇಖ ಸಮೂಹಗಳು, ಇದರಿಂದ ಒಬ್ಬಾತ ತನ್ನ ಮನೋಭಾವನೆಗಳ ರೂಢಿ ಅಥವಾ ಪದ್ದತಿಗಳ ರೀತಿ–ನೀತಿಗಳ ಮತ್ತು ಕ್ರಿಯಾವಿಧಿಗಳ ಮೌಲ್ಯ ನಿರ್ಣಯ ಮಾಡಲು ಯತ್ನಿಸುವುದು ತೀರಾ ಸಹಜ. ವ್ಯಕ್ತಿ ಅಥವಾ ಸಮೂಹದ ಮೇಲೆ ಉಲ್ಲೇಖ ಸಮೂಹವು ಬೀರುವ ಪ್ರಭಾವವು ಆ ಸಮೂಹದ ಸಾಮಾಜಿಕ ಪ್ರತಿಷ್ಠತೆಯನ್ನು ಆಧರಿಸುತ್ತದೆ.

ವಿಶಿಷ್ಟ ರೀತಿ ಸಂಪ್ರಾದಾಯ ಆಚರಣೆಗಳಿಂದಾಗಿ ವಿಶಿಷ್ಟವಾಗಿ ಗುರುತಿಸಲ್ಪಡುವ ಲಂಬಾಣಿ ವಿಶಿಷ್ಟ ಸಂಪ್ರದಾಯ, ಸಂಸ್ಕೃತಿ, ಅವರ ಪ್ರಗತಿ ಅಡ್ಡಿಯಾಗುತ್ತಿದೆ. ಆದರೂ ಈ ಸಮುದಾಯದ ಆಚರಣೆ, ಸಂಪ್ರದಾಯಗಳು ಬದಲಾವಣೆಗಳಾಗಿವೆ.

---

೧. ಎಂ.ಎನ್. ಶ್ರೀನಿವಾಸ್ ಅವರ ಕೃತಿ Social Change in Modern India–೧೯೭೧

## ಬಂಜಾರ ಸಮುದಾಯಗಳ ಮೇಲೆ ಸಾಮಾಜಿಕ, ಆರ್ಥಿಕ, ರಾಜಕೀಯ ಬದಲಾವಣೆಗಳ ಪ್ರಭಾವ

### ೬.೧. ಸಾಮಾಜಿಕ ಪರಿವರ್ತನೆ

ಕರ್ನಾಟಕದಲ್ಲಿ ವಾಸಿಸುತ್ತಿರುವ ಅನೇಕ ಸಮುದಾಯಗಳಲ್ಲಿ ಬಂಜಾರ ಸಮುದಾಯವು ಒಂದು. ಸಂತೆಯ, ಪೇಟೆಯ ಬೀದಿ ಬೀದಿಗಳಲ್ಲಿ ಸೌದೆ ಹೊತ್ತು ಜೀವನ ಸಾಗಿಸುತ್ತಿರುವ ಲಂಬಾಣಿಗರನ್ನು ನೋಡಬಹುದು. ರಂಗು ರಂಗಿನ ಬಟ್ಟೆಯುಟ್ಟು ತಿರುಗುವ ಈ ಜನರು ಬಹುಬೇಗನೆ ಪತ್ತೆಯಾಗುತ್ತರೆ. ಇವರ ಆಚಾರ-ವಿಚಾರ, ಸಂಪ್ರದಾಯ, ರೀತಿ-ನೀತಿಗಳು ಬಹು ವಿಶಿಷ್ಟವಾದವುಗಳು.

ರಜಪೂತರಲ್ಲಿ ಕಂಡುಬರುವ ರಾಠೋಡ, ಪವಾರ, ಚವ್ಹಾಣ ಹಾಗೂ ಜಾಧವ ಎಂಬ ಬೆಡಗುಗಳು ಲಂಬಾಣಿಗರಲ್ಲಿಯೂ ಕಂಡುಬರುತ್ತದೆ. ಈ ಬೆಡಗುಗಳಲ್ಲಿ 'ಜಾತ್' ಮತ್ತು 'ಭೂಕ್ಯಾ' ಎಂದು ಎರಡು ಪಂಗಡಗಳಿವೆ. ರಾಠೋಡ ಬೆಡಗಿನವರು 'ಭೂಕ್ಯಾ' ಎಂದು ಕರೆಯಿಸಿಕೊಂಡರೆ ಉಳಿದ ಮೂರು ಪಂಗಡದವರನ್ನು 'ಜಾತ್' ಎಂಬ ಹೆಸರಿನಿಂದ ಗುರುತಿಸುತ್ತಾರೆ. ಸಗೋತ್ರ ವಿವಾಹ ನಿಷಿದ್ಧವಾಗಿದೆ. ತಾವು ಸಹೋದರರೆಂದು ಭಾವಿಸುತ್ತಾರೆ. ಆದ್ದರಿಂದ 'ಜಾತ್'ದವರು ಭೂಕ್ಯಾದವರಲ್ಲಿ ಹಾಗೂ 'ಭೂಕ್ಯಾದವರು' ಜಾತ್‌ದವರಲ್ಲಿ ಮದುವೆ ಸಂಬಂಧವನ್ನು ಬೆಳೆಸುತ್ತಾರೆ.

ಲಂಬಾಣಿಗರಲ್ಲಿ ಅವಿಭಕ್ತ ಕುಟುಂಬ ಜೀವನ ಕ್ರಮವು ಅಲ್ಲಲ್ಲಿ ಕಂಡು ಬರುತ್ತಿದ್ದರೂ ಸಾಮಾನ್ಯವಾಗಿ ಅವರಲ್ಲಿ ವಿಭಕ್ತ ಕುಟುಂಬ ಜೀವನ ಕ್ರಮವೇ ಹೆಚ್ಚು. ಗಂಡು ಮಕ್ಕಳು ತಮ್ಮ ಮದುವೆಯಾಗುವವರೆಗೆ ಮಾತ್ರ ಕುಟುಂಬದಲ್ಲಿ ಒಟ್ಟಾಗಿ ಜೀವಿಸಿ, ಮದುವೆಯ ನಂತರದಲ್ಲಿ ತಮ್ಮ ಹೆಂಡತಿಯನ್ನು ಅನುಸರಿಸಿ ಆಸ್ತಿಯಲ್ಲಿ ಭಾಗ ತೆಗೆದುಕೊಂಡು ಸ್ವತಂತ್ರವಾದ ಜೀವನವನ್ನು ನಡೆಸಿಕೊಂಡು ಹೋಗುವುದು ಸಾಮಾನ್ಯವಾಗಿ ಕಂಡುಬರುತ್ತದೆ.

ಬಂಜಾರರಲ್ಲಿ ಪಿತೃಪ್ರಧಾನ ಕುಟುಂಬ ಪದ್ಧತಿ ಜಾರಿಗೆಯಲ್ಲಿದ್ದು ಆಸ್ತಿಯ ಹಕ್ಕು, ವಂಶದ ಕೀರ್ತಿ, ಬಿರುದು-ಬಾವಲಿಗಳು ತಂದೆಯಿಂದ ಮಗನಿಗೆ ಮುಂದುವರಿದುಕೊಂಡು ಹೋಗುತ್ತವೆ. ಲಂಬಾಣಿಗರಲ್ಲಿ ಮದುವೆ ಒಂದೇ ದಿನದಲ್ಲಿ ಮುಗಿದು ಹೋಗುವುದಿಲ್ಲ. ಕನಿಷ್ಟ ಪಕ್ಷ ೬-೭ ದಿನಗಳಾದರೂ ಬೇಕಾಗುತ್ತದೆ. ಪೂರ್ವದಲ್ಲಿ ಇವರ ಮದುವೆ ತಿಂಗಳುಗಟ್ಟಲೆ ನಡೆಯುತ್ತಿತ್ತು. ಮದುವೆ ಎಂದಾಕ್ಷಣ ಈ ಜನರಿಗೆ ಎಲ್ಲಿಲ್ಲದ ಸಂತೋಷ ಮತ್ತು ಸಂಭ್ರಮ. ಈ ಮದುವೆ ಸಮಾರಂಭವು ಹೆಣ್ಣಿನವರ ಮನೆಯಲ್ಲಿಯೇ ನಡೆಯುತ್ತದೆ.

ಮದುವೆಯ ಆಚರಣೆಯಲ್ಲಿ ಅನೇಕ ವಿಶಿಷ್ಟವಾದ ವಿಧಿ-ವಿಧಾನಗಳು ಕಂಡುಬರುತ್ತದೆ. ಅವುಗಳಲ್ಲಿ ಮದುಮಗಳನ್ನು ಗಂಡನ ಮನೆಗೆ ಬೀಳ್ಕೊಡುವ ಸಂದರ್ಭದ 'ಢಾವಾಲೋ' ಹಾಗೂ 'ಹವೇಲಿ'ಗಳು ಪ್ರಮುಖವಾದ ಅಂಶಗಳಾಗಿವೆ. ಈ 'ಢಾವಲೋ' ಹಾಗೂ 'ಹವೇಲಿ'ಗಳೆಂಬ ಆಳುವ ಪದ್ದತಿಗಳನ್ನು ತಾಂಡಾದ ಹಿರಿಯ ಹೆಣ್ಣುಮಕ್ಕಳು ಮದುಮಗಳಿಗೆ ಕಲಿಸಿಕೊಡುತ್ತಾರೆ. ಪ್ರಾಯಶಃ ಈ ವಿಶಿಷ್ಟವಾದ ಸಂಪ್ರದಾಯ ಭಾರತೀಯ ಯಾವ ಸಮುದಾಯದಲ್ಲಿಯೂ ಕಂಡುಬರುವುದಿಲ್ಲ. ಮನೆಗೆ ಬಂದ ಅತಿಥಿಗಳನ್ನು ಬರಮಾಡಿ ಕೊಳ್ಳುವಾಗ ನೀರಿನ ತಂಬಿಗೆ ಕೊಟ್ಟು ಯೋಗಕ್ಷೇಮ ವಿನಿಮಯ ಮಾಡಿಕೊಳ್ಳುವಾಗ; ಲಂಬಾಣಿ ಸ್ತ್ರೀಯು ಕೊರಳು ಬಾಚಿ ಅಳುತ್ತಾ ತನ್ನ ನೋವು-ನಲಿವುಗಳನ್ನು ವ್ಯಕ್ತಪಡಿಸುತ್ತಾಳೆ. ಇದಕ್ಕೆ ಅವರು 'ಮಳೆರೋ' ಎಂದು ಕರೆಯುತ್ತಾರೆ. ಈ ವಿಶಿಷ್ಟ ಸಾಂಪ್ರದಾಯವು ಕೂಡ ಭಾರತೀಯ ಉಳಿದ ಸಮುದಾಯಗಳಲ್ಲಿ ಕಾಣುವುದಿಲ್ಲ. ಕಾಲಾಂತರಗಳಲ್ಲಿ ಹೆಚ್ಚು ಸುಶಿಕ್ಷಿತರಾಗಿರುವ ಕುಟುಂಬಗಳಲ್ಲಿ ಹಾಗೂ ನಗರದತ್ತ ವಲಸೆಯಾಗುತ್ತಿರುವ ಬಂಜಾರರಲ್ಲಿ ಇಂತಹ ಪದ್ಧತಿಯನ್ನು ಬದಲಿಸಿ ಆಧುನಿಕ ರೀತಿಯಲ್ಲಿ ತಮ್ಮ ವಿವಾಹಗಳನ್ನು ಅದ್ದೂರಿಯಾಗಿ ಛತ್ರಗಳಲ್ಲಿ ನೇರವೇರಿಸುತ್ತಿರುವುದನ್ನು ಕಾಣಬಹುದಾಗಿದೆ.

**ಧಾರ್ಮಿಕ ವ್ಯವಸ್ಥೆ**

ದೇವರು ಧರ್ಮದ ವಿಷಯದಲ್ಲಿ ಲಂಬಾಣಿಗರಿಗೆ ಹೆಚ್ಚಿನ ಭಯ ಮತ್ತು ಭಕ್ತಿ. ಸಾಮಾನ್ಯವಾಗಿ ಅವರು ಶಕ್ತಿ ದೇವತೆಗಳ ಉಪಾಸಕರಾಗಿದ್ದು "ಮರಿಯಮ್ಮ, ಕರಿಯಮ್ಮ, ದುರುಗಮ್ಮ, ಕಂಕಾಳಿ(ಚಾಮುಂಡಿ) ವಾಗ್ಜಾಯಿ (ಹುಲಿಗೆಮ್ಮ)' ಮುಂತಾದ ಶಕ್ತಿ ದೇವತೆಗಳನ್ನು, ಸೇವಾಭಾಯ, ಬಾಲಾಜಿ (ತಿರುಪತಿ ವೆಂಕಟೇಶ) ಮುಂತಾದ ದೇವರುಗಳನ್ನು ಪೂಜಿಸುತ್ತಾರೆ. ಈ ದೇವತೆಗಳ ಜೊತೆಗೆ ಶಿವ, ವಿಷ್ಣು, ಕೃಷ್ಣ ಮುಂತಾದ ಹಿಂದೂ ದೇವತೆಗಳನ್ನು ಪೂಜಿಸುವುದುಂಟು. ಅಲ್ಲದೆ ತುಳಜಾಭವಾನಿ, ಶೀತಲಾ ಭವಾನಿ ಮುಂತದ ಸಾತ್ ಭವಾನಿ (ಏಳು ಜನ ಸಹೋದರಿ ದೇವಿಯರು)ಗಳನ್ನು ಹಾಗೂ ಹೂನಾಸತ್ತಿ, ಕೇಶಿರಾಣಿ, ಸೀತಾ ಸತ್ತಿಯರೆಂಬ ಸಾತಿಸತ್ತಿ(ಏಳು ಜನ ಸತಿಸಹಗಮನ ಮಾಡಿದ ಮುತ್ತೈದೆಯರು) ಯರನ್ನು ಅವರು ಆರಾಧಿಸುತ್ತಾರೆ. ಭಗತ್(ಪೂಜಾರಿ) ಅವರುಗಳ ಪೂಜೆ, ಪೂರ್ವಜರ ಆರಾಧನೆ ಕೂಡ ಅವರಲ್ಲಿ ಕಂಡುಬರುತ್ತದೆ. ದೈವಭಕ್ತರಾದ ಲಂಬಾಣಿಗರಲ್ಲಿ ಕುರಿ, ಕೋಳಿಗಳನ್ನು ಬಲಿಕೊಡುವ ಪದ್ಧತಿ ಜಾರಿಯಲ್ಲಿದೆ. ತಮ್ಮ ಇಷ್ಟ ದೈವಗಳ ಹಾಗೂ ಭೂತ ಪಿಶಾಚಿಗಳ ಸಂತೃಪ್ತಿಗಾಗಿ ಬಲಿಕೊಡುವ ಸಂಪ್ರದಾಯ ಇನ್ನೂ ಅವರಲ್ಲಿ ಜೀವಂತವಾಗಿಯೇ ಉಳಿದುಕೊಂಡು ಬಂದಿದೆ.

ಕರ್ನಾಟಕದ ಬಂಜಾರರು ಮುಖ್ಯವಾಗಿ ದೀಪಾವಳಿ(ದವಾಳಿ), ಹೋಳಿಹಬ್ಬ, ಗೌರಿಹಬ್ಬ (ತೀಜ), ದಸರಾಹಬ್ಬ ಹಾಗೂ ಹಿಂದುಗಳು ಆಚರಿಸುವ ಇನ್ನುಳಿದ ಎಲ್ಲಾ ಹಬ್ಬಗಳನ್ನು ತಮ್ಮದೇ ಆದ ರೀತಿಯಲ್ಲಿ ಆಚರಿಸುವುದುಂಟು. ದೀಪಾವಳಿ ಹಬ್ಬವನ್ನು ಗೋಪೂಜೆ, ಲಕ್ಷ್ಮೀ ಪೂಜೆ ಹಾಗೂ ಪೂರ್ವಜರಿಗೆ ಪೂಜೆ ಸಲ್ಲಿಸುವ ಹಿನ್ನೆಲೆಯಲ್ಲಿ ಆಚರಿಸಿದರೆ; ಹೋಳಿ ಹಬ್ಬವನ್ನು ಕಾಮನ ಸಂಕೇತವಾಗಿ ಮನೋಲ್ಲಾಸಗಳ ಹಿನ್ನೆಲೆಯಲ್ಲಿ ಆಚರಿಸುತ್ತಾರೆ. ಗೌರೀಹಬ್ಬವನ್ನು ಶ್ರೀಕೃಷ್ಣನ ಆರಾಧನೆಯ ಹಿನ್ನೆಲೆಯಲ್ಲಿ ಆಚರಿಸಿದರೆ; ದಸರಾ ಹಬ್ಬವನ್ನು ದುರ್ಗಾದೇವಿಯ ಪೂಜೆಯ ಹಿನ್ನೆಲೆಯಲ್ಲಿ ಆಚರಿಸುತ್ತಾರೆ.

ಭಾರತದ ಸಾಮಾಜಿಕ ಪರಿಸರದಲ್ಲಿ ಜಾತಿ, ಬುಡಕಟ್ಟುಗಳು ಎಂದು ಅಸ್ತಿತ್ವದಲ್ಲಿವೆ ಜಾತಿಗಳು ಯಾವಾಗಲೂ ಚಲಿಸುವಲ್ಲಿ ಪ್ರಯತ್ನಿಸುತ್ತವೆ. ಬುಡಕಟ್ಟು ತಮ್ಮ ಲಕ್ಷಣಗಳನ್ನು ಕಳೆದುಕೊಂಡು ಜಾತಿಯ ಲಕ್ಷಣಗಳನ್ನು ಮೈಗುಡಿಸಿಕೊಳ್ಳಲು ಹಂಬಲಿಸುತ್ತವೆ. ಬಂಜಾರರ ಹಲವಾರು ಆಚರಣೆಗಳನ್ನು ಹಿಂಬಾಲಿಸುತ್ತಿರುವುದನ್ನು ನೋಡಬಹುದಾಗಿದೆ. ಅಲೆಮಾರಿ ಬುಡಕಟ್ಟುಗಳ ಅಲೆಮಾರಿ ಪ್ರವೃತ್ತಿಯನ್ನು ಈ ಜನರು ಒಂದೆಡೆ ಸ್ಥಿರವಾಗಿ ನೆಲೆ ನಿಲ್ಲುವಂತಾಗಿದೆ. ತಾತ್ಕಲಿಕ ಬಿಡಾರ, ಗುಡಿಸಲು ಸ್ಥಾನದಲ್ಲಿ ಹೆಂಚಿನ ಮನೆಗಳು ಕೆಲವಡೆ ಆರ್.ಸಿ.ಸಿ.ಮನೆಗಳು ತಲೆಯೆತ್ತಿವೆ. ಮನೆಯ ಮುಂದೆ ರಂಗೋಲಿ ಹಾಕದ ಇವರ ಮನೆಯ ಮುಂದೆ ರಂಗೋಲೆ ರಾರಾಜಿಸುತ್ತದೆ. ಮನೆಯ ಮುಂದೆ ತುಳಸಿ ಕಟ್ಟೆ ತುಳಸಿ ಪೂಜೆ ಪ್ರಾರಂಭವಾಗಿದೆ. ಸೇವಾಲಾಲ್ ಮರಿಯಮ್ಮ ಬಿಟ್ಟು ಬೇರೆ ದೇವರುಗಳ ಪರಿಚಯ ವಿಲ್ಲದ ಬುಡಕಟ್ಟು ಇಂದು ಆಯಾ ಪ್ರದೇಶದಲ್ಲಿ ಇರುವ ಕಲ್ಲೇಶ್ವರ, ದುರ್ಗಮ್ಮ, ಮಾರಮ್ಮ, ಅಣ್ಣಮ್ಮ, ದೇವರುಗಳನ್ನು ಪೂಜಿಸುವ ಪದ್ಧತಿ ಕಂಡುಬರುತ್ತಿದೆ. ತಮ್ಮದೆ ಆದ ಹಬ್ಬಗಳನ್ನು ಆಚರಿಸುತ್ತಿದ್ದ. ಈ ಸಮುದಾಯದವರು ಹಿಂದುಗಳಂತೆ ಶಿವರಾತ್ರಿ, ಸಂಕ್ರಾತಿ, ಭೂಮಿಪೂಜೆ ಆಚರಿಸಲು ಪ್ರಾರಂಭಿಸಿದ್ದಾರೆ. ಒಂದು ಬುಡಕಟ್ಟು ಕ್ರಮೇಣ ಹೇಗೆ ಜಾತಿಯಾಗಿ ಬದಲಾಗುತ್ತದೆ ಎಂಬುದಕ್ಕೆ ಇದೊಂದು ಜೀವಂತ ನಿರ್ದೇಶನ. ಲಂಬಾಣಿ ಸಮುದಾಯದ ಜನರಲ್ಲಿ ಬೇರೆ ದೇವರು ಪೂಜಿಸುವ ಬೇರೆ ಬೇರೆ ಆಚರಣೆ ಹೊಂದಿರುವ ಪಂಗಡಗಳು ಉಪಪಂಗಡ ಗುಂಪುಗಳಾಗಿ ಉಂಟಾಗಿ ಜಾತಿಯಲ್ಲಿ ಸಂಕೀರ್ಣತೆ ಕಂಡುಬರುತ್ತಿದೆ. ಜಾತಿ ಉಪಜಾತಿಗಳನ್ನು ಗುರುತಿಸುತ್ತ ಜಾತಿ ಎನ್ನಿಸಿಕೊಳ್ಳುವ ಮಟ್ಟದಲ್ಲಿ ವೇಷ–ಭೂಷಣಗಳು ವಿಶಿಷ್ಟ ಸಹಕಾರದೊಂದಿಗೆ ಸಣ್ಣ ಸಣ್ಣ ಗುಂಪುಗಳು ಒಂದು ಮಾಡಿವೆ.

ಆಧುನಿಕತೆಯಿಂದಾಗಿ ಬಂಜಾರ ಸಮುದಾಯದಲ್ಲಿ ಆಗಿರುವ ಬದಲಾವಣೆ ಕುರಿತು ಒಂದು ವಿಶ್ಲೇಷಣೆ

- ಜೀವನ ಶೈಲಿಯಲ್ಲಿ ಬದಲಾವಣೆ
- ಉಡುಗೆ ತೊಡುಗೆಯಲ್ಲಿ ಬದಲಾವಣೆ
- ಪ್ರದರ್ಶನ ಕಲೆಗಳಲ್ಲಿ ಬದಲಾವಣೆ
- ವಾದ್ಯಗಳ ಸ್ವರೂಪದಲ್ಲಿ ಬದಲಾವಣೆ
- ಸಂಪರ್ಕದಿಂದ ಉಂಟಾದ ಬದಲಾವಣೆಗಳು

ಬಂಜಾರರು ತಮ್ಮ ತಾಂಡಾಗಳಿಗೆ ಪ್ರತ್ಯೇಕ ಸ್ಥಳನಾಮಗಳನ್ನು ಇಟ್ಟಿಕೊಂಡಿರುವುದು ಅವರ ಸ್ವಂತಿಕೆಯ ಲಕ್ಷಣವಾಗಿದೆ. ಪೂರ್ವದಲ್ಲಿ ಲಂಬಾಣಿ ತಾಂಡಾಗಳಲ್ಲಿ ಕೇವಲ ಗುಡಿಸಲು ಮನೆಗಳು ಇದ್ದವು. ಆದರೆ ಇಂದು ಗುಡಿಸಲು ಕಡಿಮೆಯಾಗಿ ಮಾಳಿಗೆ ಮನೆಗಳು ಆರ್.ಸಿ.ಸಿ. ಮನೆಗಳು ಕಾಣಿಸಿಕೊಂಡಿವೆ ಹಲವಾರು ತಾಂಡಾಗಳಿಗೆ ಬಸ್ಸಿನ ಸೌಕರ್ಯ, ವಿದ್ಯುತ್ ದೀಪಗಳು, ಅಂಗನವಾಡಿ ಶಾಲೆಗಳು, ಪ್ರಾಥಮಿಕ ಶಾಲೆಗಳು, ಇನ್ನು ಕೆಲವು ತಾಂಡಾಗಳಲ್ಲಿ ಪ್ರೌಢಶಾಲೆಗಳಿವೆ. ನೀರಿನ ವ್ಯವಸ್ಥೆ ಮೊದಲಾದ ಸೌಕರ್ಯಗಳಿವೆ. ಕರ್ನಾಟಕ ಸರ್ಕಾರವು ಇತ್ತೀಚಿಗೆ ತಾಂಡಾಗಳನ್ನು ಕಂದಾಯ ಗ್ರಾಮಗಳಾಗಿ ಪರಿವರ್ತಿಸಲು ಅಲೋಚನೆ ನಡೆಸಿವೆ. ಸಾಮಾಜಿಕ, ರಾಜಕೀಯ ಆಡಳಿತಾತ್ಮಕ ಕ್ಷೇತ್ರದಲ್ಲಿ ಐ.ಎ.ಎಸ್., ಕೆ.ಎ.ಎಸ್., ಪೋಲಿಸ್ ಇಲಾಖೆ ಶಿಕ್ಷಣ ಇಲಾಖೆ ಹಲವಾರು ಇಲಾಖೆಗಳಲ್ಲಿ ಉನ್ನತ ಸ್ಥಾನಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ರಾಜಕೀಯವಾಗಿ ಶಾಸಕರಾಗಿ, ಲೋಕಸಭಾ ಸದಸ್ಯರಾಗಿ, ಜಿಲ್ಲಾಪಂಚಾಯತ್, ತಾಲೂಕು ಪಂಚಾಯತ್ ಹಾಗೂ ಗ್ರಾಮಪಂಚಾಯತ್ ಸದಸ್ಯರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯ, ಹೊಸದುರ್ಗಾ ತಾಂಡಗಳಲ್ಲಿ ಜೀವನಶೈಲಿಯ ಬದಲಾವಣೆ ಉತ್ತಮವಾಗಿದ್ದರೆ, ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲ್ಲೂಕಿನ ತಾಂಡಗಳಲ್ಲಿ ಮಧ್ಯಮ ಬದಲಾವಣೆಯನ್ನು ಹಾಗೂ ಆಂಧ್ರಪ್ರದೇಶದ ಗಡಿಯ ಬಾಗೇಪಲ್ಲಿ ತಾಲ್ಲೂಕಿನ ತಾಂಡಗಳಲ್ಲಿ ಅಷ್ಟೇನು ಪರಿಣಾಮಕಾರಿಯಾಗಿಲ್ಲ ಜೀವನ ಶೈಲಿಯ ಬದಲಾವಣೆ ಕಂಡುಬಂದಿಲ್ಲ.

ಬಂಜಾರ ಸಮುದಾಯದ ಹೆಣ್ಣುಮಕ್ಕಳು ಪೋಷಾಕುಗಳು ನಿಜಕ್ಕೂ ಕಲಾತ್ಮಕ ವಾಗಿರುತ್ತವೆ. ಬಣ್ಣ ಬಣ್ಣದ ರಂಗುರಂಗಿನ ತಮ್ಮ ವಸ್ತ್ರಗಳಿಗೆ ಕವಡೆ ಕನ್ನಡಿ ಬಣ್ಣದ

ವಸ್ತುಗಳನ್ನು ಸೇರಿಸಿ ಪಳಪಳನೆ ಹೊಳೆಯುವಂತೆ ಕಸೂತಿ ಕೆಲಸ ಮಾಡಿ ಹೊಲಿದ ಈ ಪೋಷಾಕುಗಳು ಕಲಾತ್ಮಕವಾಗಿರುತ್ತದೆ. ಈ ಚಿತ್ತಾಕರ್ಷಕವಾದ ಉಡುಗೆ ಪೋಷಾಕುಗಳನ್ನು ಸಿದ್ದಪಡಿಸಲಿಕ್ಕೆ ತೆಗೆದುಕೊಳ್ಳಬಹುದಾದ ಸಮಯ ತಗಲುಬಹುದಾದ ವೆಚ್ಚ ಪರಿಶ್ರಮಗಳನ್ನು ತೂಲನೆ ಮಾಡಿದಾಗ ಕುಪ್ಪಸ ಲಂಗ ಮತ್ತು ಮೇಲು ಹೊದಿಕೆ ಇವುಗಳನ್ನು ಸಿದ್ದಪಡಿಸಲಕ್ಕೆ ಒಬ್ಬರಿಗೆ ಕನಿಷ್ಠ ೨ ರಿಂದ ೩ ತಿಂಗಳ ಕಾಲವಧಿ ಬೇಕಾಗುತ್ತದೆ. ಬಂಜಾರ ಮಹಿಳೆಯರ ಪೋಷಾಕುಗಳಿಗೆ ವಿವಿಧ ರೀತಿಯ ಬಣ್ಣಗಳು ದಾರಗಳು ಗಾಜಿನ ಬಿಲ್ಲೆಗಳು ಬೇಕಾಗುತ್ತದೆ. ಈಗಾಗಿ ಉಡುಪುಗಳನ್ನು ಸಿದ್ದಪಡಿಸುವುದಕ್ಕೆ ಹೆಚ್ಚು ಖರ್ಚು ತಗುಲುತ್ತದೆ ಆದರೆ ಲಂಬಾಣಿ ಸ್ತ್ರೀಯರು ಈ ತರಹದ ಉಡುಗೆಗಳನ್ನು ತೊಡುವುದಕ್ಕಿಂತ ಮಾರಾಟ ಮಾಡುವುದಕ್ಕಾಗಿ ತಯಾರಿಸುವುದು ಹೆಚ್ಚಾಗಿ ಕಂಡುಬರುತ್ತದೆ.

ಇತ್ತೀಚಿನ ದಿನಗಳಲ್ಲಿ ಲಂಬಾಣಿ ಮಹಿಳೆಯರಿಗೆ ವಿಶಿಷ್ಟ ಸಾಂಪ್ರದಾಯಿಕ ಉಡುಗೆಯ ಮೇಲಿನ ವ್ಯಾಮೋಹ ಕಡಿಮೆಯಾಗಿದೆ. ನಾಗರಿಕ ವಸ್ತುಗಳ ಮೇಲಿನ ವ್ಯಾಮೋಹ ಈ ಮೇಲಿನ ಈ ಎಲ್ಲಾ ಕಾರಣಗಳಿಂದ ಲಂಬಾಣಿ ಮಹಿಳೆಯರು ಈ ಬಟ್ಟೆಗಳನ್ನು ತ್ಯಜಿಸುತ್ತಿದ್ದಾರೆ. ಲಂಬಾಣಿ ಮಹಿಳೆಯರ ಕಸೂತಿಗೆ ಅವರದೆ ಆದ ವೈಶಿಷ್ಟವಿದೆ. ದಟ್ಟ ಕೆಂಪು ವರ್ಣದ ಬಟ್ಟೆಗಳ ಮೇಲೆ ಅಂದವಾಗಿ ಜೋಡಿಸಿದ ನಾಣ್ಯ, ಗಾಜಿನ ಬಿಲ್ಲೆಗಳು ಆಕರ್ಷಕ ಕುಸುರಿಯೊಂದಿಗೆ ಮನಮೋಹಕ ಕಸೂತಿ ಕಲೆಯ ಬೆಡಗೂ ವಿನ್ಯಾಸ ಅತ್ಯಂತ ಆಕರ್ಷಣಿಯ ಬದಲಾದ ಆಧುನಿಕ ನೆಪದಲ್ಲಿ ಈ ಜನರಲ್ಲಿ ಬೆಳೆದು ಬಂದ ಕಸೂತಿ ಕಲೆ ನಶಿಸುತ್ತಿವೆ.

**➢ ಪ್ರದರ್ಶನ ಕಲೆಗಳಲ್ಲಿ ಬದಲಾವಣೆ**

ಅಲೆಮಾರಿ ಜೀನದಲ್ಲಿ ಸಾಂಸ್ಕೃತಿಕ ಚಟುವಟಿಕೆಯಾಗಿ ತಮ್ಮದೆ ಆದ ವಿಶಿಷ್ಟ ನೃತ್ಯ ಶೈಲಿ ಹೊಂದಿದ ಲಂಬಾಣಿ ಸಮುದಾಯದ ಜನರ ಮೇಲೆ ಮಾಧ್ಯಮಗಳ ಪ್ರೇರಣೆ ಪ್ರಭಾವಗಳಿಂದ ವಿವಿಧ ರೀತಿಗಳಲ್ಲಿ ಬೇರೆ ಬೇರೆ ನೃತ್ಯ ಪ್ರಕಾರ ಹೊಂದಿಸಿಕೊಂಡು ನರ್ತಿಸುವುದನ್ನು ಕಲಿತಿದ್ದಾರೆ. ಕರ್ನಾಟಕದ ಕೆಲವು ಭಾಗಗಳಲ್ಲಿ ಲಂಬಾಣಿ ಮಹಿಳೆಯರು ಕೋಲು ಹಿಡಿದು ನರ್ತಿಸುವ ವಿಧಾನ ಪ್ರಚಲಿತವಿದೆ. ಲಂಬಾಣಿಗರ ಸಾಂಪ್ರದಾಯಿಕ ಕೋಲಾಟವು ಜಾನಪದ ನೃತ್ಯ ಪ್ರದರ್ಶನಗಳಲ್ಲಿ ಚಮತ್ಕಾರಗಳಿಂದ ಪ್ರದರ್ಶನಗೊಳ್ಳುತ್ತಿವೆ. ತೇರುಕೋಲು ಬೆಂಡಾಡುವಕೋಲು ಕಾವಲೂಗೋಡುಕೋಲು, ಕುಕ್ಕರಗಾಲುಕೋಲು, ಪ್ರತಿಕೋಲು, ಅಂಗಡಿಕೋಲು, ಜಡೆಕೋಲು, ಬೆನ್ನಾಲಿಕೋಲು ಹೀಗೆ ಹತ್ತಾರು ವಿಭಿನ್ನ ಬಗೆಯ ಕೋಲಾಟಗಳನ್ನು ಕಲಿತು ಜಾಣ್ಮೆಯಿಂದ ಲಂಬಾಣಿಗರು ಪ್ರದರ್ಶನ ಮಾಡುತ್ತ

ಇದ್ದಾರೆ. ಶಿವಮೊಗ್ಗ, ಚಿಕ್ಕಮಂಗಳೂರು, ಚಿತ್ರದುರ್ಗ, ಜಿಲ್ಲೆಗಳಲ್ಲಿ ಕೆಲವು ತಾಂಡಾಗಳ ಕೋಲಾಟ ಮೇಳಗಳಿಗೆ ಪ್ರಸಿದ್ಧಿ ಪಡೆದಿವೆ.

**➢ ವಾದ್ಯಗಳ ಸ್ವರೂಪದಲ್ಲಿ ಬದಲಾವಣೆ**

ಆಧುನಿಕತೆಯಿಂದಾಗಿ ಇತ್ತೀಚಿನ ದಿನಗಳಲ್ಲಿ ಹಲವಾರು ವಾದ್ಯಗಳನ್ನು ಬಳಸಿಕೊಂಡು ಲಾವಣಿಗಳನ್ನು ಹಾಡುತ್ತಾರೆ. ಉದಾಹರಣೆಗೆ ಡಪ್ಪು, ಡುಮುಕಿ, ಘಟ, ಗೆಜ್ಜೆಸರ, ತಬಲ, ಕಂಜರ, ತಾಳ ಈ ನವೀನ ವಾದ್ಯಗಳನ್ನು ಬಳಸಿ ಹಾಡುವ ನರ್ತಿಸುವ ಹಲವಾರು ಮೇಳಗಳು ಈಗ ಲಂಬಾಣಿ ತಾಂಡಾಗಳಲ್ಲಿ ತಲೆ ಎತ್ತಿವೆ.

ಭಾರತ ದೇಶದ ಯಾವುದೇ ಸಮುದಾಯಕ್ಕೆ ತನ್ನದೆ ಆದ ಇತಿಹಾಸವಿದೆ. ಆದರೆ ಅಲೆಮಾರಿ ಬುಡಕಟ್ಟು ಲಂಬಾಣಿಗರ ಐತಿಹಾಸಿಕ ಹಿನ್ನೆಲೆ ಅರಿತುಕೊಳ್ಳುವುದು ಅತ್ಯಂತ ಕಷ್ಟಕರವಾದದ್ದು. ಲಂಬಾಣಿಗರ ಭಾಷೆ ಲಿಪಿ ಇಲ್ಲದ ಭಾಷೆ. ಹೀಗಾಗಿ ಖಚಿತ ಆಧಾರವಾಗಲಿ ಅಥವಾ ಪ್ರಾಚೀನತೆಯ ದಾಖಲೆಯಾಗಲಿ ಚರಿತ್ರೆಯಲ್ಲಿ ಕಂಡುಬರುವುದಿಲ್ಲ. ಲಂಬಾಣಿಗರ ವೃತ್ತಿಯ ಮೂಲದಿಂದ ಅವರ ಚರಿತ್ರೆಯನ್ನು ಕಾಣಬಹುದಾಗಿದೆ. ಈ ಸಮುದಾಯವು ಬೆಟ್ಟ, ಕಾಡು, ಹಳ್ಳಗಳನ್ನು ದಾಟಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ದವಸ ಧಾನ್ಯಗಳನ್ನು ಎತ್ತಿನ ಮೇಲೆ ಹೇರಿಕೊಂಡು ಸಾಗಿಸುತ್ತಿದ್ದರು. ಲಂಬಾಣಿಗರು ಧೈರ್ಯಶಾಲಿಗಳು, ಚತುರರು, ಸಾಹಸಿಗಳಾಗಿರುವುದರಿಂದ ಮಾತ್ರ ಈ ವೃತ್ತಿಯನ್ನು ನಿಭಾಯಿಸಲು ಸಾಧ್ಯವಾಗುತ್ತಿತ್ತು.

**➢ ಸಂಪರ್ಕದಿಂದ ಉಂಟಾದ ಬದಲಾವಣೆ**

ಪೂರ್ವ ಕಾಲದಲ್ಲಿ ಲಂಬಾಣಿಗರು ಸಾಮಾನ್ಯವಾಗಿ ತಮ್ಮ ಎತ್ತುಗಳ ಮೇಲೆ ದವಸಧಾನ್ಯ, ಸಂಬಾರ ಪದಾರ್ಥಗಳನ್ನು ಹೇರಿಕೊಂಡು ವ್ಯಾಪಾರ ಮಾಡುತ್ತಿದ್ದು, ಸ್ಥಿರವಾಗಿ ನೆಲೆಗೊಳದೆ ಊರಿನಿಂದ ಊರಿಗೆ ತಮ್ಮ ಸಂಸಾರ ಸಮೇತ ಸಂಚರಿಸುತ್ತಿದ್ದರು. ಆದರೆ ಕೆಲ ದಶಕ ನಂತರ ಬ್ರಿಟಿಷರು ಜಾರಿಗೆ ತಂದ ಕಾನೂನು ನೀತಿ, ಅರಣ್ಯ ನೀತಿ, ರೈಲ್ವೆ, ಸಾರಿಗೆ ಸಂಪರ್ಕ ಇತ್ಯಾದಿಗಳ ಆರಂಭದಿಂದ ಲಂಬಾಣಿಗರ ವ್ಯಾಪಾರದ ಮೇಲೆ ಹೊಡೆತ ಬಿದ್ದಂತಾಯಿತು. ಆಗ ಲಂಬಾಣಿಗರು ಬೆಟ್ಟ ಕಾಡುಗಳ ಹತ್ತಿರ ಅವರ ದನಕರುಗಳಿಗೆ ಹುಲ್ಲು, ನೀರು ಸಿಗುವ ಕಡೆ ತಮ್ಮದೆ ಆದ ತಾಂಡಾ ಕಟ್ಟಿಕೊಂಡು ಸ್ಥಿರವಾಗಿ ವಾಸಿಸಲು ಆರಂಭಿಸಿದರು. ಅವರು ಉಪಜೀವನ ಸಾಗಿಸಲು ಕಾಡುಗಳಲ್ಲಿ ಸಿಗುವ ಸೌಧೆ, ನೆಲ್ಲಿಕಾಯಿ, ಕವಳೆಕಾಯಿ ಮುಂತಾದವುಗಳನ್ನು ಸಂಗ್ರಹಿಸಿ ಪಕ್ಕದ ಗ್ರಾಮಗಳಲ್ಲಿ ವ್ಯಾಪಾರ ಮಾಡಿ ಉಪಜೀವನ ಸಾಗಿಸುತ್ತಿದ್ದರು. ಕೆಲವು ಕುಟುಂಬದವರು

ಭಟ್ಟಿಸರಾಯಿ ತಯಾರಿಸಿ ಮಾರುತ್ತಿದ್ದರು. ಇನ್ನು ಕೆಲವರು ಜಮೀನದಾರರ ಮನೆಯಲ್ಲಿ ಜೀತದಾಳಾಗಿ ಜೀವನ ಸಾಗಿಸುತ್ತಿದ್ದರು. ಕರ್ನಾಟಕದ ಕೆಲವು ಜಿಲ್ಲೆಯ ಲಂಬಾಣಿಗರು ಇವತ್ತಿಗೂ ಕೂಡ ತಂಡೋಪ ತಂಡವಾಗಿ ಗಂಡಸರು, ಹೆಂಗಸರು, ಮಕ್ಕಳ ಸಮೇತವಾಗಿ ಚಿಕ್ಕಮಗಳೂರು, ಮಂಗಳೂರು, ಕಾಫಿ ತೋಟಗಳಲ್ಲಿ ದುಡಿಯಲು ಹೋಗುತ್ತಿರುವ ದೃಶ್ಯವನ್ನು ನಿತ್ಯವು ಕಾಣಬಹುದಾಗಿದೆ. ಅದೇ ರೀತಿಯಾಗಿ ವಿಜಯಪುರ, ಬಾಗಲಕೋಟೆ ಜಿಲ್ಲೆಗಳಿಂದ ನೆರ ರಾಜ್ಯಗಳಾದ ಮಹಾರಾಷ್ಟ್ರ ಮತ್ತು ಗೋವಾ ರಾಜ್ಯಗಳಿಗೆ ಕೂಲಿಗಾಗಿ ಪ್ರತಿ ವರ್ಷವು ಹೋಗುತ್ತಿರುವ ದೃಶ್ಯವನ್ನು ಕಾಣಬಹುದಾಗಿದೆ.[೨]

**೬.೨. ಆರ್ಥಿಕ ಪರಿವರ್ತನೆ**

ಆರ್ಥಿಕ ವ್ಯವಸ್ಥೆಯು ಸಾಮಾಜಿಕ ಸಂರಚನೆಯ ಒಂದು ಭಾಗವಾಗಿದೆ. ಶ್ರಮವಿಭಜನೆ, ಆಸ್ತಿ ಸಂಬಂಧಗಳು, ಆರ್ಥಿಕ ಸಂಘಟನೆಯ ಪ್ರಕಾರಗಳು, ಕೈಗಾರಿಕೆ ಮತ್ತು ಕೈಗಾರಿಕಾ ಸಂಬಂಧ ಇವುಗಳೆಲ್ಲವೂ ಈ ವ್ಯವಸ್ಥೆಯ ಭಾಗಗಳಾಗಿವೆ. ಆರ್ಥಿಕ ವ್ಯವಸ್ಥೆಯು ಆರ್ಥಿಕ ಸಂಸ್ಥೆಗಳನ್ನು ಹೊಂದಿದೆ. ಮಾನವನ ಭೌತಿಕ ಅಗತ್ಯಗಳನ್ನು ಈಡೇರಿಸಲು ಉತ್ಪಾದನೆ, ಹಂಚಿಕೆ ಮತ್ತು ವಸ್ತುಗಳ ಹಾಗೂ ಸೇವೆಗಳ ಅನುಭೋಗದಲ್ಲಿ ನಿರ್ವಹಿಸುವ 'ಸಾಮಾಜಿಕ ಪಾತ್ರಗಳು' ಹಾಗೂ ಸಂಘಟಿತ ಪ್ರಮಾಣಕಗಳನ್ನು ಇದು ಹೊಂದಿದೆ. ಆರ್ಥಿಕ ವ್ಯವಸ್ಥೆ ಎಂದರೆ ವಸ್ತುಗಳನ್ನು ಮತ್ತು ಸೇವೆಗಳನ್ನು ಉತ್ಪಾದಿಸುವುದಕ್ಕಾಗಿ ಮತ್ತು ಹಂಚುವುದಕ್ಕಾಗಿ ಮಾಡಿಕೊಂಡ ಸಾಂಸ್ಥಿಕ ವ್ಯವಸ್ಥೆಯಾಗಿದೆ. ಎಂದು ಐಯಾನ್ ರಾಬರ್ಟ್ ಸನ್[೩] ವ್ಯಾಖ್ಯಾನಿಸುತ್ತಾರೆ. ("Sociologu" page 409) ("The Economic order is the institutionalized system of producing and distributing goods and services") ಆರ್ಥಿಕ ವ್ಯವಸ್ಥೆ ಎಂಬುದು ಜನರು ಜೀವನೋಪಾಯಕ್ಕಾಗಿ ಕೈಗೊಳ್ಳುವ ಆರ್ಥಿಕ ಚಟುವಟಿಕೆಗಳ ಒಂದು ಸಂಘಟಿತ ವ್ಯವಸ್ಥೆಯಾಗಿದೆ. ಸಂಕ್ಷಿಪ್ತವಾಗಿ ಹೇಳಬೇಕೆಂದರೆ ಮಾನವನ ಆರ್ಥಿಕ ಚಟುವಟಿಕೆಗಳನ್ನು ಸಂಘಟಿಸುವ ವಿಧಾನ.

---

೨. ಡಾ. ಎಲ್. ಶ್ರೀನಿವಾಸ್ ಅವರ ಸಂಪಾದಕತ್ವದಲ್ಲಿ ಸಂಗ್ರಹಿಸಿರುವ ಲೇಖನ ಗೀತಾ ಚಟ್ ಗುಬಿ ಜಿ ಮುರಹರಿ ನಾಯ್ಕ ಅವರ ಸಂಗ್ರಹಣೆ.

೩. ಐಯಾನ್ ರಾಬರ್ಟ್ ಸನ್ "ಸೋಶಿಯಾಲಜಿ" ಪು. ೪೦೯, ೧೯೭೯.

**ಬಂಜಾರರ ಆರ್ಥಿಕತೆಯ ನೆಲೆಗಳು**

ಅನೇಕ ದಶಕಗಳಿಂದಲೂ ಬಂಜಾರರು ಲವಣ/ಉಪ್ಪು, ಎಲೆ ಅಡಿಕೆ, ಆಹಾರ ಧಾನ್ಯಗಳು ಮುಂತಾದ ವಸ್ತುಗಳನ್ನು ಮಾರಾಟ ಮಾಡುವುದರಲ್ಲಿ ನಿರತರಾಗಿದ್ದರು. ಮೊಗಲರ ಕಾಲದಲ್ಲಿ ಹಾಗೂ ಬ್ರಿಟಿಷರ ಕಾಲದಲ್ಲಿ ಅವರ ಸೈನ್ಯಕ್ಕೆ ಆಹಾರ ಧಾನ್ಯಗಳನ್ನು ಸರಬರಾಜು ಮಾಡುತ್ತಿದ್ದರು. ಈ ವಸ್ತುಗಳನ್ನು ಸಾಗಾಟ ಮಾಡುವುದಕ್ಕೆ ಇವರು ತಮ್ಮ ಎತ್ತುಗಳನ್ನು ಬಳಸುತ್ತಿದ್ದರು. ಕಾರಣ ಬೆಟ್ಟಗುಡ್ಡ, ಕಾಡುಗಳ ಅಥವಾ ದುರ್ಗಮ ಪ್ರದೇಶಗಳ ಮಧ್ಯೆ ಸಂಚಾರ ಮಾಡಬೇಕಾಗಿದ್ದಿತು. ಕಾಡಿನಿಂದ ಸೌದೆ ತಂದು ಹತ್ತಿರದ ಊರುಗಳಿಗೆ ಅಥವಾ ಪಟ್ಟಣಗಳಿಗೆ ಮಾರಿ ಜೀವನ ಸಾಗಿಸುತ್ತಿದ್ದರು. ಇವರು ಕೃಷಿ ಕಾರ್ಮಿಕರಾಗಿ, ಕೃಷಿಕರಾಗಿ, ಮನೆಕಟ್ಟುವ ಕೆಲಸಗಳಲ್ಲಿ ಕೂಲಿಗಳಾಗಿ ಹಾಗೂ ಇತರೆ ಕೆಲಸಗಳನ್ನು ಪ್ರಾರಂಭಿಸಿದಾಗ ಈ ಕೆಲಸಗಳಲ್ಲಿಯೂ ನಿರತರಾಗಿದ್ದಾರೆ. ಶಿಕ್ಷಿತರಾದ ಲಂಬಾಣಿಗಳಷ್ಟೇ ಸರ್ಕಾರದ ಕೆಲಸಗಳನ್ನು ಪಡೆದುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ.

ದೃಢಕಾಯರಾದ ಲಂಬಾಣಿಗರು ಶ್ರಮಜೀವಿಗಳಾಗಿದ್ದಾರೆ. 'ರಟ್ಟೆಮುರಿದು, ರೊಟ್ಟಿ ತಿನ್ನಬೇಕೆಂಬ' ಬಲವಾದ ನಂಬಿಕೆ ಅವರಲ್ಲಿದೆ. ಹೀಗಾಗಿ ಎಂಥ ಕಠಿಣ ಪ್ರಸಂಗ ಬಂದೊದಗಿದರೂ ಭಿಕ್ಷೆ ಬೇಡುವುದನ್ನು ಮತ್ತು ಸೋಮಾರಿತನದಿಂದ ಜೀವಿಸುವುದನ್ನು ಇವರು ವಿರೋಧಿಸುತ್ತಾರೆ. ಕಷ್ಟಪಟ್ಟು ದುಡಿದು, ಬೆವರುಸುರಿಸಿಯೇ ಯಾವತ್ತೂ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ತಮ್ಮ ಮೂಲ ಉದ್ಯೋಗದೊಂದಿಗೆ ವಂಚಿತರಾದ ಇವರು ಒಕ್ಕಲುತನಕ್ಕೆ ಅಂಟಿಕೊಳ್ಳದೆ ಬ್ರಿಟಿಷ್ ಸರಕಾರದ ಕೋಪಕ್ಕೆ ತುತ್ತಾಗಿ ಅಡವಿಯ ಪಾಲಾಗಿದ್ದರಿಂದ ಇತ್ತ ಭೂಮಿಯಿಂದಲೂ ದೂರವಾಗಿಯೇ ಉಳಿದುಕೊಂಡರು. ಹೀಗಾಗಿ "ಧೋಬಿ ಕಾ ಕುತ್ತಾ ನ ಘರಕಾ – ನ ಘಾಟಕಾ" ಎನ್ನುವ ಸ್ಥಿತಿ ಅವರಿಗುಂಟಾಯಿತು. ಸ್ವಾತಂತ್ರ್ಯನಂತರ ಅವರಿಗೆ ರಾಜಕೀಯ ಸ್ವಾತಂತ್ರ್ಯ ದೊರೆತರೂ ಆರ್ಥಿಕ ಸ್ವಾತಂತ್ರ್ಯ ದೂರ ವಾಗಿಯೇ ಉಳಿದಿದೆ. ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯ ಫಲ ನೀಡಲಾರದು. ಹೀಗಾಗಿ ಬೆವರು ಮಾತ್ರ ಅವರ ಸಂಗಾತಿಯಾಗಿದೆ. "ಪ್ರಕೃತಿ ದತ್ತವಾಗಿ ಸಿಕ್ಕ ವಸ್ತುಗಳನ್ನು ಮಾರಿ ಜೀವನ ಸಾಗಿಸುವಲ್ಲಿ ನಸ್ಸೀಮರಾಗಿದ್ದಾರೆ; ಬೆಟ್ಟಗುಡ್ಡಗಳಲ್ಲಿ ಸಿಗುವ ಸೌದೆ, ಗೋಂದು, ಬಿಕ್ಕೆಹಣ್ಣು, ಕವಳಿಹಣ್ಣು, ನೆಲ್ಲಿಕಾಯಿ, ಹೀಗೆ ವಿವಿಧ ಬಗೆಯ ಸರಕುಗಳನ್ನು ಮಾರಿ ಹಣ ಸಂಪಾದಿಸುತ್ತಾರೆ. ಕೆಲವರು ರಸ್ತೆಯ ಮೇಲೆ ಕಲ್ಲು ಒಡೆಯುವುದು; ಇನ್ನು ಕೆಲವರು ಗದ್ದೆಯಲ್ಲಿ ಗೇಯುವುದು; ಹೆಣ್ಣುಮಕ್ಕಳು ಮಣ್ಣು ಹೊರುವ ಕೆಲಸ ಮಾಡುವುದು ಕಂಡುಬರುತ್ತದೆ.

ಸಾಮಾನ್ಯವಾಗಿ ಇಂದು ಕರ್ನಾಟಕದ ಲಂಬಾಣಿಗರು ಕೃಷಿಯನ್ನೇ ತಮ್ಮ ಒಂದು ಉಪ ಕಸುಬನ್ನಾಗಿ ಮಾಡಿಕೊಂಡು ಜೀವಿಸುತ್ತಿದ್ದಾರೆ. ವ್ಯವಸಾಯಗಾರರಲ್ಲಿ ಒಣ ಬೇಸಾಯದವರೇ ಹೆಚ್ಚಾಗಿದ್ದು ಗದ್ದೆ-ತೋಟಗಳಿರುವವರು ತೀರ ಕಡಿಮೆ. ಈ ಬೇಸಾಯದ ಜೊತೆಗೆ ಕೂಲಿನಾಲಿಗಳನ್ನು ಅವಲಂಬಿಸಿ ಜೀವಿಸುತ್ತಿದ್ದಾರೆ.

ಪ್ರಸ್ತುತ ಸಂಶೋಧನೆ ವಿಷಯವು ಬಂಜಾರ ಸಮುದಾಯದ ಅಧ್ಯಯನವಾಗಿರುವುದರಿಂದ ಆರ್ಥಿಕ ಬಂಜಾರರ ಸ್ಥಿತಿ ತಿಳಿಯುವುದು ಅನಿವಾರ್ಯ ಲಂಬಾಣಿಗರ ಆರ್ಥಿಕ ಜೀವನ ಸಾಂಪ್ರದಾಯಿಕವಾಗಿ ದವಸಧಾನ್ಯಗಳನ್ನು ಎತ್ತುಗಳ ಮೇಲೆ ಹೇರಿಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆ ಸಂಚರಿಸುತ್ತ ವ್ಯಾಪಾರ ಮಾಡುವುದು, ಸೌದೆ ಮಾರುವುದು, ಭಟ್ಟಿಸರಾಯಿ ತಯಾರಿಸಿ ಮಾರುವರು ಇತ್ಯಾದಿ ಕಸುಬುಗಳನ್ನು ಮೂಲವೃತ್ತಿಯನ್ನಾಗಿ ಅನುಸರಿಸಿಕೊಂಡು ಬರುತ್ತಿದ್ದರು. ಬ್ರಿಟಿಷರು ಜಾರಿಗೆ ತಂದ ನೀತಿ ಅರಣ್ಯನೀತಿ, ಸಾರಿಗೆ ಸಂಪರ್ಕ ಸುಧಾರಣೆ, ಆಧುನಿಕತೆಯ ಮನೋಭಾವನೆಯ ಬೆಳವಣಿಗೆ, ಕಡಿಮೆ ಖರ್ಚಿನಲ್ಲಿ ಉತ್ತಮ ಮಟ್ಟದ ಪದಾರ್ಥಗಳ ಲಭ್ಯ ಹಾಗೂ ಆಧುನಿಕ ವ್ಯವಸ್ಥೆಯಲ್ಲಿ ದೊರಕುತ್ತಿರುವ ವಿವಿಧ ಉದ್ಯೋಗಾವಕಾಶಗಳು ಮತ್ತು ಆಧುನಿಕ ಶಿಕ್ಷಣ. ಈ ಎಲ್ಲಾ ಕಾರಣಗಳಿಂದ ಲಂಬಾಣಿಗರು ತಮ್ಮ ಸಾಂಪ್ರದಾಯಿಕ ಕಸುಬನ್ನು ತೊರೆದು ನಾಗರಿಕ ಸಮಾಜದಲ್ಲಿ ಲಭ್ಯವಾಗುತ್ತಿರುವ ಕೃಷಿ, ಕೈಗಾರಿಕೆ, ಖಾಸಗಿ ವಲಯ, ಸರ್ಕಾರಿ ವಲಯ, ವ್ಯಾಪಾರ, ವ್ಯವಹಾರ ಇನ್ನಿತರ ಕಸುಬುಗಳನ್ನು ಅನುಸರಿಸುತ್ತ ತಮ್ಮ ದೈನಂದಿನವಾದ ಆರ್ಥಿಕ ಪರಿಸ್ಥಿತಿಯನ್ನು ಬದಲಾವಣೆಗೊಳ್ಳುತ್ತ ಇವರ ಜೀವನಮಟ್ಟ ಸುಧಾರಣೆ ಯಾಗುತ್ತಿರುವುದನ್ನು ಕಾಣಬಹುದಾಗಿದೆ. ಅಧ್ಯಯನಕ್ಕೆ ಒಳಪಡಿಸಿಕೊಂಡಿರುವ ತಾಂಡಗಳಲ್ಲಿ ಕಂಡುಬಂದಿರುವ ಆರ್ಥಿಕ ಸ್ಥಿತಿಗತಿ ಹಾಗೂ ವೃತ್ತಿ ಅನುಕರಣೆಯನ್ನು ಈ ಕೆಳಕಂಡಂತೆ ಕಾಣಬಹುದು.

**ಆರ್ಥಿಕ ಸ್ಥಿತಿಗತಿ**

| ಕ್ರ.ಸಂ. | ಉದ್ಯೋಗ | ೧೮-೩೫ | ೩೬-೫೫ | ೫೬ಮೇಲ್ಪಟ್ಟು |
|---|---|---|---|---|
| ೧ | ಸೌದೆ ಮಾರಾಟ | ೦% | ೩% | ೧೫% |
| ೨ | ಉಪ್ಪು ಮಾರಾಟ | ೦% | ೨% | ೩% |
| ೩ | ಭಟ್ಟಿ ಸರಾಯಿ ತಯಾರಿಕೆ | ೫% | ೧೦% | ೩೦% |
| ೪ | ಇತರೆ ಆಹಾರ ಪದಾರ್ಥ ಮಾರಾಟ | ೦% | ೨% | ೫% |

ಈ ಕೋಷ್ಟಕವನ್ನು ಗಮನಿಸಿದಾಗ ಕಂಡುಬರುವ ಅಂಶಗಳೆಂದರೆ ಸಾಂಪ್ರದಾಯ ಉದ್ಯೋಗ ಇಂದಿನ ತಲೆಮಾರಿನ ಜನರು ಕೈಬಿಟ್ಟದ್ದು ಮದ್ಯ ವಯಸ್ಸಿನ ಜನತೆಯಲ್ಲಿ ಅಲ್ಪಪ್ರಮಾಣದಲ್ಲಿ ಕಂಡು ಬರುತ್ತಿದ್ದು, ೫೬ ವರ್ಷಕ್ಕಿಂತ ಮೇಲ್ಪಟ್ಟವರಲ್ಲಿ ತಮ್ಮ ಸಾಂಪ್ರದಾಯಿಕ ಕುಲಕಸುಬುಗಳ ಬಗ್ಗೆ ಇನ್ನು ಹೆಚ್ಚು ಒಲವು ಇರುವುದನ್ನು ಕಾಣಬಹುದಾಗಿದೆ.

**ಆಧುನಿಕ ಸುಧಾರಿತ ವೃತ್ತಿ ಅನುಕರಣೆ**

| | | |
|---|---|---|
| ೧ | ಕೃಷಿ | ೩೫% |
| ೨ | ಕೈಗಾರಿಕೆ | ೧೫% |
| ೩ | ಸರ್ಕಾರಿ ನೌಕರಿ | ೭% |
| ೪ | ವ್ಯವಹಾರ ಮತ್ತು ವ್ಯಾಪಾರ | ೧೬% |
| ೫ | ಇತರೆ | ೨೭% |
| | **ಒಟ್ಟು** | ೧೦೦% |

ಶೇಕಡಾ ೩೫ರಷ್ಟು ಕೃಷಿಯನ್ನು, ಶೇ. ೧೫ರಷ್ಟು ಕೈಗಾರಿಕೆ ಕಾರ್ಖಾನೆಗಳಲ್ಲಿ ಶೇ. ೭ರಷ್ಟು ಸರ್ಕಾರಿ ನೌಕರಿಯಲ್ಲಿ ಶೇ. ೧೬ರಷ್ಟು ವ್ಯಾಪಾರ ವ್ಯವಹಾರಗಳಲ್ಲಿ ಶೇ. ೨೭ರಷ್ಟು ಕೃಷಿಕಾರ್ಮಿಕರು, ದಿನಗೂಲಿ ನೌಕರರಾಗಿ ಜೀತದಾರರಾಗಿ ಉಪಜೀವನ ನಡೆಸುತ್ತಿರುವುದನ್ನು ಗಮನಿಸಬಹುದಾಗಿದೆ.

**ಈ ಸಂಶೋಧನೆಯಲ್ಲಿ ಕಂಡುಬಂದಂತಹ ಅಂಶಗಳು**

- ಇಂದಿನ ಯುವ ಪೀಳಿಕೆಯವರು ಸಂಪ್ರದಾಯದ ಕುಲಕಸುಬು, ವಿವಾಹ ಇತ್ಯಾದಿ ಗಳನ್ನು ಬಿಡುತ್ತಿದ್ದರೆ ಹಿರಿಯ ಪೀಳಿಗೆಯವರು ಅದನ್ನು ಸಂರಕ್ಷಿಸಲು ಪ್ರಯತ್ನಿಸುತ್ತಿರು ವುದನ್ನು ಕಾಣಬಹುದಾಗಿದೆ.
- ಆಧುನಿಕ ಪರಿಸ್ಥಿತಿಯಲ್ಲಿ ಸಂಪೂರ್ಣ ಬದಲಾವಣೆಯನ್ನು ಶಿಕ್ಷಿತ ಹಾಗೂ ನಗರ ಪಟ್ಟಣ ಜನರಲ್ಲಿಯೂ ಕೆಲವು ಮಹತ್ವವೆನ್ನಿಸಿದ ಸಂಸ್ಕಾರಗಳನ್ನು ಉಳಿಸಿಕೊಳ್ಳುವ ಪ್ರಯತ್ನ ಮತ್ತು ಆಚರಣೆ ಮಾಡುವ ಮನೋಭಾವನೆ ಇಂದಿಗೂ ಶಾಶ್ವತವಾಗಿ ಉಳಿದುಕೊಂಡಿರುವುದು ಕಾಣಬಹುದಾಗಿದೆ.
- ಬಂಜಾರರು ವಾಸವಾಗಿರುವ ತಾಂಡಾಕ್ಕಿಂತ ಮಿಶ್ರಿತ ಜಾತಿಯ ಜನರೊಂದಿಗೆ ಸೇರಿರುವ ಬಂಜಾರರಲ್ಲಿ ಹೆಚ್ಚು ಪರಿವರ್ತನೆಯಾಗಿರುವುದನ್ನು ಕಾಣಬಹುದಾಗಿದೆ.

• ಬಂಜಾರ ಸಾಂಪ್ರದಾಯಿಕ ಉಡುಗೆ-ತೊಡುಗೆಯನ್ನು ಸಂಪೂರ್ಣವಾಗಿ ಬಿಡುವುದರ ಬದಲು ಕೇವಲ ಸಭೆ ಸಮಾರಂಭ ಹಬ್ಬ ಹರಿದಿನಗಳಲ್ಲಿ ಆಚರಣೆ ಧರಿಸುವುದನ್ನು ಕಾಣಬಹುದಾಗಿದೆ.
• ಸಾಮಾಜಿಕ ಸ್ಥಾನಮಾನದ ದೃಷ್ಟಿಯಿಂದ ಇವರ ಸ್ಥಿತಿಗತಿ ಇನ್ನೂ ಸುಧಾರಿಸಬೇಕಾಗಿದೆ.
• ಇವರು ಪಂಗಡವೋ ಮತ್ತು ಜಾತಿಯ ಅಂತಸ್ತಿನ ಅಡಿಯಲ್ಲಿ ಕಾಣಬಹುದಾಗಿದೆ.

**೬.೩. ರಾಜಕೀಯ ಪರಿವರ್ತನೆ**

ಮಾನವನ ರಾಜಕೀಯ ಆಸಕ್ತಿ ಇಂದು ನಿನ್ನೆಯದಲ್ಲ ಬಹು ಪ್ರಾಚೀನವಾದುದಾಗಿದೆ. ಸುಮಾರು ೨೦೦೦ ವರ್ಷಗಳ ಹಿಂದೆಯೇ ಪ್ರಾಚೀನ ಗ್ರೀಕ್ ತತ್ವಜ್ಞಾನಿ ಅರಿಸ್ಟಾಟಲ್ 'ಮಾನವನು ರಾಜಕೀಯ ಜೀವಿಯಾಗಿದ್ದಾನೆ' ಎಂಬ ಮಾತನ್ನು ಹೇಳಿದ್ದನು. ರಾಜಕೀಯ ಎಂಬುದು ನಮ್ಮ ಸಾಮಾಜಿಕ ಜೀವನದ ಒಂದು ಅನಿವಾರ್ಯ ಭಾಗವಾಗಿದೆ. ಹಾಗೂ ಸಾರ್ವತ್ರಿಕವಾದ ಒಂದು ವ್ಯವಸ್ಥೆಯಾಗಿದೆ. ಐಯಾನ್ ರಾಬರ್ಟ್ ಸನ್[೪]ನ ಪ್ರಕಾರ "ರಾಜಕೀಯ ಸಂಪಾದಿಸುವ ಮತ್ತು ಇತರರ ಮೇಲೆ ಚಲಾಯಿಸುವ ಒಂದು ಸಾಂಸ್ಥಿಕ ವ್ಯವಸ್ಥೆಯಾಗಿದೆ." ಮ್ಯಾಕ್ಸ್‌ವೇಬರ್‌ನ ಪ್ರಕಾರ "ನಿಶ್ಚಿತ ಭೂಪ್ರದೇಶದಲ್ಲಿ ಕಾನೂನು ಸಮ್ಮತವಾದ ಭೌತಿಕ ಬಲವನ್ನು ಚಲಾಯಿಸುವ ತನ್ನ ಏಕಸ್ವಾಮ್ಯವನ್ನು ಯಶಸ್ವಿಯಾಗಿ ಸಾಧಿಸಿಕೊಂಡಿರುವ ಮಾನವ ಸಮುದಾಯವನ್ನು ರಾಜಕೀಯ ವ್ಯವಸ್ಥೆ" ಎನ್ನಲಾಗಿದೆ. ರಾಜಕೀಯ ವ್ಯವಸ್ಥೆಯು ರಾಜಶಕ್ತಿ, ಅಧಿಕಾರ, ಭೌತಿಕ ಬಲದ ಚಲಾವಣೆ, ರಾಜಕೀಯ ತತ್ವಾದರ್ಶಗಳು ಹಾಗೂ ರಾಜಕೀಯ ಸಂಸ್ಥೆಗಳನ್ನು ಒಳಗೊಂಡಿರುವ ಒಂದು ವಿಸ್ತೃತವಾದ ವ್ಯವಸ್ಥೆ ಆಗಿದೆ.

ಆಧುನಿಕ ಮಾನವನ ಜೀವನವು ರಾಜಕೀಯ ವ್ಯವಸ್ಥೆಯಿಂದ ಪ್ರಭಾವಿತವಾದುದು ಆಗಿದೆ. ಮಾನವನ ರಾಜಕೀಯ ವ್ಯವಸ್ಥೆಯನ್ನು ಸಮಾಜಶಾಸ್ತ್ರೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗುತ್ತಿದೆ. ಹೀಗೆ ಅಧ್ಯಯನ ಮಾಡುವ ಶಾಸ್ತ್ರವೇ 'ರಾಜಕೀಯ ಸಮಾಜಶಾಸ್ತ್ರ' ಆಗಿದೆ. ರಾಜಕೀಯ ವಿಷಯಗಳನ್ನು ಹಾಗೂ ವಿದ್ಯಮಾನಗಳನ್ನು ಸಮಾಜ ಶಾಸ್ತ್ರೀಯ ಹಿನ್ನೆಲೆಯಲ್ಲಿ ವಿಶ್ಲೇಷಿಸುವ ಅಧ್ಯಯನಶಾಸ್ತ್ರವೇ ಇದಾಗಿದೆ. ಎನ್.ಜೆ. ಸ್ಮೈಲ್ಸರ್ ಹೇಳಿರುವಂತೆ "ರಾಜಕೀಯ ಸಮಾಜಶಾಸ್ತ್ರವನ್ನು ಸಮಾಜ ಮತ್ತು ರಾಜಕೀಯ ವ್ಯವಸ್ಥೆಗಳ

---

೪. ಐಯಾನ್ ರಾಬರ್ಟ್ ಸನ್ "ಸೋಶಿಯಾಲಜಿ" ಪು. ೪೮೯, ೧೯೭೭.

ನಡುವಿನ ಮತ್ತು ಸಾಮಾಜಿಕ ಸಂರಚನೆಗಳು ಮತ್ತು ರಾಜಕೀಯ ಸಂಸ್ಥೆಗಳು ಇವುಗಳ ನಡುವಿನ ಪರಸ್ಪರ ಸಂಬಂಧದ ಅಧ್ಯಯನವೆಂಬುದಾಗಿ ವ್ಯಾಖ್ಯಾನಿಸಬಹುದು. ಮಾನವನ ಸಾಮಾಜಿಕ ಜೀವನದ ಮೇಲೆ ರಾಜಕೀಯವು ಬೀರಬಹುದಾದ ಪ್ರಭಾವವನ್ನು ಇದು ಅಧ್ಯಯನ ಮಾಡುತ್ತದೆ. ರಾಜಕೀಯ ವ್ಯವಸ್ಥೆಗೂ ಸಮಾಜಕ್ಕೂ ಇರುವ ನಂಟನ್ನು ಅಧ್ಯಯನ ಮಾಡುತ್ತದೆ.

ಚುನಾವಣಾ ವ್ಯವಸ್ಥೆಯನ್ನಾಧರಿಸಿದ ರಾಜಕೀಯ ವ್ಯವಸ್ಥೆಯಿಂದಾಗಿ ಎಲ್ಲಾ ಸಾಮಾಜಿಕ ಸಂಘಟನೆಗಳ ರಾಜಕೀಕರಣ ನಡೆಯುತ್ತಿದೆ. ಇದಕ್ಕೆ ಬಂಜಾರ ಸಮುದಾಯವೇನೂ ಹೊರತಾಗಿಲ್ಲ. ಅದರಲ್ಲೂ ಸಂಘಟಿತ ಗುಂಪುಗಳಿಗೆ ಅವು ಸಾಂಸ್ಕೃತಿಕವಾಗಿರಲಿ ಅಥವಾ ಆರ್ಥಿಕ-ಸಾಮಾಜಿಕವಾಗಿರಲಿ ಪ್ರಾಧಾನ್ಯತೆ ಹೆಚ್ಚಿರುತ್ತಿದೆ. ಬಂಜಾರರು ತಮ್ಮದೇ ಆದ ಪ್ರತ್ಯೇಕ ಭಾಷೆ ಸಂಸ್ಕೃತಿಯಿಂದಾಗಿ ಹಾಗೂ ಅವರಲ್ಲಿನ ಸಾಂಪ್ರದಾಯಿಕ ವ್ಯವಸ್ಥೆಯಿಂದಾಗಿ ರಾಜಕೀಯ ಪ್ರಕ್ರಿಯೆಯಲ್ಲಿ ಒಂದು ಶಕ್ತಿಯಾಗಿದ್ದಾರೆ. ಅವರ ಸಾಮಾಜಿಕ ವ್ಯವಸ್ಥೆಯೇ ಅವರ ಶಕ್ತಿ. ಈ ವಿಷಯದ ಅರಿವು ಮೂಡುತ್ತಿರುವಂತೆಯೇ ಜಾತಿ ಸಂಘಟನೆಗೆ ಹೊಸದೊಂದು ಆಯಾಮ ದೊರೆಯುತ್ತಿದೆ. ತನ್ನ ಸಾಂಪ್ರದಾಯಿಕ ಚೌಕಟ್ಟನ್ನು ರಾಜಕೀಯ-ಸಾಮಾಜಿಕ ಉದ್ದೇಶಗಳಿಗಾಗಿ ಬಳಸಿಕೊಳ್ಳುವ ಪ್ರಯತ್ನ ಹೆಚ್ಚುತ್ತಿದೆ.

ಜಾತಿ ಮತ್ತು ವೃತ್ತಿಯ ನಡುವೆ ಇದ್ದ ಸಂಬಂಧ, ನಗರೀಕರಣ, ಶಿಕ್ಷಣ, ಅರಣ್ಯ, ಸಂಪತ್ತಿನ ನಾಶ, ಮೀಸಲಾತಿ ಮುಂತಾದ ಕಾರಣಗಳಿಂದಾಗಿ ಬದಲಾಗುತ್ತಿದೆ. ಸಾಂಪ್ರದಾಯಿಕ ವೃತ್ತಿ ಮತ್ತು ಜಾತಿಯ ನಡುವಣ ಸಂಬಂಧ ಆಧುನಿಕ ಭಾರತದಲ್ಲಿ ಕಳಚಿಕೊಳ್ಳುತ್ತಿದೆ ಎಂಬ ಎ.ಎಲ್.ಷಾ ಅವರ ಹಿಂದುಳಿದ ವರ್ಗದವರ ಕುರಿತ ವಾದ ಲಂಬಾಣಿಗಳಿಗೂ ಅನ್ವಯಿಸುತ್ತದೆ. ಅಲ್ಲದೆ ನಗರ ಪ್ರದೇಶದ ಜಾತಿ ಹಾಗೂ ಗ್ರಾಮೀಣ ಪ್ರದೇಶದ ಜಾತಿಗಳಲ್ಲಿ ವ್ಯತ್ಯಾಸಗಳಿವೆ. ಗ್ರಾಮೀಣ ಪ್ರದೇಶದಲ್ಲಿ ಶ್ರೇಣಿ ವ್ಯವಸ್ಥೆಯಿದ್ದರೆ ನಗರಗಳಲ್ಲಿ ಪ್ರತ್ಯೇಕತೆ ಕಂಡುಬರುತ್ತದೆ ಎಂಬುದು ಷಾ ಅವರ ಇನ್ನೊಂದು ವಾದವಾಗಿದೆ. ನಗರ ಪ್ರದೇಶದ ಸಮೀಪದಲ್ಲಿರುವ ಲಂಬಾಣಿಗಳು ತಮ್ಮ ಕುಲಕಸುಬಿನಿಂದ ದೂರ ಸರಿಯುತ್ತಿದ್ದಾರೆ. ಜಾತಿ ಸಂಘಟನೆಯ ಮೂಲಕ ರಾಜಕೀಯವನ್ನು ಪ್ರವೇಶಿಸಿ ಲಂಬಾಣಿಗರು ಯಶಸ್ಸು ಪಡೆದಿದ್ದಾರೆ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಜಾತಿ ಸಂಘಟನೆ ಪ್ರಮುಖ ಪಾತ್ರ ವಹಿಸುತ್ತದೆ.

**ರಾಜಕೀಯದಲ್ಲಿ ಭಾಗವಹಿಸುವಿಕೆ**

ಪ್ರಜಾಪ್ರಭುತ್ವದ ಪ್ರಧಾನ ಅಂಶವೇ ಪ್ರಜೆಗಳಿಗೆ ರಾಜಕೀಯದಲ್ಲಿ ಭಾಗವಹಿಸುವ ಅವಕಾಶ ನೀಡುವುದಾಗಿದೆ. ಮತಾಧಿಕಾರ ಚಲಾವಣೆಯ ಮೂಲಕ ಪೌರರು ರಾಜಕೀಯದಲ್ಲಿ ಭಾಗವಹಿಸುತ್ತಾರೆ. ಅದೇ ರೀತಿಯಲ್ಲಿ ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕನ್ನು ಪಡೆದಿರುತ್ತಾರೆ. ಮಾತನಾಡುವ, ಅಭಿಪ್ರಾಯ ವ್ಯಕ್ತಪಡಿಸುವ, ಸಂಘ-ಸಂಸ್ಥೆಗಳನ್ನು ಕಟ್ಟಿಕೊಳ್ಳುವ ಸ್ವಾತಂತ್ರ್ಯವು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲಾ ಪ್ರಜೆಗಳಿಗೂ ಲಭ್ಯ. ಈ ಹಕ್ಕು-ಸ್ವಾತಂತ್ರ್ಯಗಳನ್ನು ಬಳಸಿಕೊಂಡು ಪೌರರು ವಿವಿಧ ರೀತಿಯಲ್ಲಿ ರಾಜಕೀಯದಲ್ಲಿ ಭಾಗವಹಿಸುತ್ತಾರೆ.

ಮತದಾರರಾಗಿ, ಚುನಾವಣೆಯಲ್ಲಿ ಸ್ಪರ್ಧಿಸುವ ಉಮೇದುವಾರರಾಗಿ, ಸರ್ಕಾರದ ಚಟುವಟಿಕೆಗಳನ್ನು ಎಚ್ಚರದಿಂದ ಗಮನಿಸಿ ಅದಕ್ಕೆ ತಮ್ಮ ಪ್ರತಿಕ್ರಿಯೆಯನ್ನು ವಿವಿಧ ರೂಪಗಳಲ್ಲಿ ವ್ಯಕ್ತಪಡಿಸುವವರಾಗಿ, ಸಂಘ ಸಂಸ್ಥೆಗಳ ಸದಸ್ಯರಾಗಿ, ರಾಜಕೀಯ ಪಕ್ಷದ ಸದಸ್ಯರಾಗಿ, ಮುಖಂಡರಾಗಿ, ನಾಯಕರಾಗಿ ಹೀಗೆ ಹಲವಾರು ರೀತಿಯಲ್ಲಿ ಭಾಗವಹಿಸುವಿಕೆಯ ಪ್ರಕ್ರಿಯೆ ವ್ಯಕ್ತವಾಗುತ್ತದೆ. ರಾಜಕೀಯದಲ್ಲಿ ನೇರವಾಗಿ ಪ್ರವೇಶಿಸಿ ಅಥವಾ ಪರೋಕ್ಷವಾಗಿ ರಾಜಕೀಯ ವ್ಯವಸ್ಥೆಯ ಮೇಲೆ ಪ್ರಭಾವ ಬೀರುವುದರ ಮೂಲಕ ಪ್ರಜೆಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುತ್ತಾರೆ.

ಒಂದು ಕಾಲಕ್ಕೆ ರಾಜರಾಗಿ, ರಾಜರ ಸೈನಿಕರಾಗಿ, ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಪೂರೈಸುವ ಸಾಹಸಿಗರಾಗಿ ಕಾರ್ಯನಿರ್ವಹಿಸಿದ ಲಂಬಾಣಿಗರಲ್ಲಿ ಕಾಲನ ಮಹಿಮೆಯಿಂದ ಕಾಡು ಸೇರಿಕೊಳ್ಳುವ ಸ್ಥಿತಿ ಒದಗಿ ಬಂದುದು ಒಂದು ವಿಪರ್ಯಾಸವೇ ಸರಿ. ಹೀಗಾಗಿ ಅವರು ರಾಜಕೀಯ ಪ್ರಜ್ಞೆಯಿಂದ ದೂರವಾಗಿ ಉಳಿದಿದ್ದಾರೆ. ೧೯೮೯ರಲ್ಲಿ ನಡೆದ ಕರ್ನಾಟಕ ರಾಜ್ಯ ವಿಧಾನಸಭೆಯ ಚುನಾವಣೆಯಲ್ಲಿ ೫ ಜನ ಲಂಬಾಣಿ ಶಾಸಕರು ಆಯ್ಕೆಯಾಗಿದ್ದರು. ೧೯೯೯ರಲ್ಲಿ ನಡೆದ ಚುನಾವಣೆಯಲ್ಲಿ ೪ ಜನ ಶಾಸಕರು ಆಯ್ಕೆಯಾಗಿರುವುದನ್ನು ಹಾಗೂ ಮಂಡಲ ಪಂಚಾಯತ್ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪರಿಷತ್ ಚುನಾವಣೆಗಳಲ್ಲಿ ಕೆಲವು ಜನರು ಆಯ್ಕೆಯಾಗಿರುವುದು, ಅಧ್ಯಕ್ಷರು ಹಾಗೂ ಉಪಾಧ್ಯಕ್ಷರು ಆಗಿರುವುದು ಅವರಲ್ಲಿ ಬೆಳೆಯುತ್ತಿರುವ ರಾಜಕೀಯ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ.

ಕರ್ನಾಟಕದಲ್ಲಿ ಬಂಜಾರರನ್ನು ಅನುಸೂಚಿತ ಜಾತಿಗೆ ಸೇರಿಸಿರುವುದರಿಂದ ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ಶಾಸನ ಸಭೆಗಳ ಚುನಾವಣೆಯಲ್ಲಿ ಕಾದಿರಿಸಲ್ಪಟ್ಟ ಮೀಸಲಾತಿ ಸ್ಥಾನಗಳಿಗೆ ಲಂಬಾಣಿಗರು ಉಮೇದುದಾರರಾಗಿ

ನಿಂತು ವಿಜೇತರಾಗುತ್ತಿದ್ದಾರೆ. ಎಲ್ಲಾ ಪಕ್ಷಗಳಲ್ಲಿ ಲಂಬಾಣಿಗರು ಭಾಗವಹಿಸುತ್ತಿರುವುದನ್ನು ಕಾಣಬಹುದು.[೬]

ಬಂಜಾರರನ್ನು ಕರ್ನಾಟಕ ಸರ್ಕಾರವು ಕರ್ನಾಟಕದಾದ್ಯಂತ ಎಲ್ಲಾ ಬಂಜಾರರ ಸಮಾನಾರ್ಥ ಮತ್ತು ಉಪಜಾತಿಗಳನ್ನು ಸೇರಿಸಿ ಪರಿಶಿಷ್ಟ ಜಾತಿ ಪಟ್ಟಿಯಲ್ಲಿ ಸೇರಿಸಿತು. ೧೯೮೦ ರಿಂದ ಬಂಜಾರರು (ಲಂಬಾಣಿ) ಕರ್ನಾಟಕದಲ್ಲಿ ಸಾಮಾಜಿಕ. ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕವಾಗಿ ಸೌಲಭ್ಯಗಳನ್ನು ಪಡೆಯಲು ಅನುಕೂಲವಾಯಿತು.

ಬಹು ಹಿಂದಿನಿಂದಲೂ ಜಾತಿಯಾಧಾರಿತ ಸಮಾಜ ವ್ಯವಸ್ಥೆಯುಳ್ಳ ದೇಶ ಇಲ್ಲಿ ಹಲವು ಜಾತಿ ವರ್ಗಗಳಿಗೆ ಸೇರಿದ ಜನರು ಶತಮಾಗಳಿಂದಲೂ ಸಮಾಜದ ಮುಖ್ಯವಾಹಿನಿಯಿಂದ ಬೇರೆಯಾಗಿಯೇ ಬದುಕಿದವರು. ಈ ಸಾಮಾಜಿಕ ಅಸಮತೋಲನ ವನ್ನು ಹೋಗಲಾಡಿಸಿ ಈ ದೇಶದಲ್ಲಿ ವಾಸಿಸುವ ಪ್ರತಿಯೊಬ್ಬ ಪ್ರಜೆಗೂ ಒಂದೇ ರೀತಿಯಾದ ನಾಗರಿಕ ಹಕ್ಕು ಇರಬೇಕು ಎಂಬ ಉದ್ದೇಶದಿಂದ ಭಾರತದ ಸಂವಿಧಾನಾತ್ಮಕ ರಕ್ಷಣೆ ಒದಗಿಸಿದೆ. ಕೆಲವು ವಿಶೇಷವಾದ ಹಕ್ಕು ನೀಡಿದೆ. ಹಾಗೆಯೇ ಇವರಿಗಾಗಿ ಅನೇಕ ಸವಲತ್ತುಗಳನ್ನು ಸಹಾ ನೀಡುತ್ತಿದೆ.

ಸಮಾಜದ ಇತರ ಜನಸಮುದಾಯದಲ್ಲಿ ಬೆರೆತು ಅವರಿಗೆ ಸರಿ ಸಮವಾಗಿ ತಮ್ಮ ಬದುಕು ರೂಪಿಸಿಕೊಳ್ಳಲು ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಬೆಳೆಯಲು ಅಗತ್ಯವಾದ ಅನೇಕ ಯೋಜನೆಗಳನ್ನು ಇವರಿಗಾಗಿ ರೂಪಿಸಲಾಗಿದೆ. ಅಸ್ಪೃಶ್ಯತೆ, ಜಾತೀಯತೆ ಯಂತಹ ಅಮಾನೀಯ ಆಚರಣೆಯಿಂದ ಶೋಷಿಸಲ್ಪಟ್ಟ ಈ ಜನರ ಅಭ್ಯುದಯಕ್ಕಾಗಿಯೇ ಕರ್ನಾಟಕ ಸರ್ಕಾರ ಸಮಾಜ ಕಲ್ಯಾಣ ಇಲಾಖೆಯ ಮೂಲಕ ಅನೇಕ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರುತ್ತಿದೆ.

ಈ ಸಮುದಾಯದ ಪ್ರಗತಿಗಾಗಿ ಕೈಗೊಳ್ಳಲಾಗು ತ್ತಿರುವ ಅನೇಕ ಯೋಜನೆ ಹಾಗು ಕಾರ್ಯಕ್ರಮಗಳಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅನುದಾನ ಒದಗಿಸುತ್ತದೆ. ವಿಶೇಷ ಘಟಕ ಯೋಜನೆ ಹಾಗೂ ಗಿರಿಜನ ಉಪಯೋಜನೆಗಳನ್ನು ಕೇಂದ್ರ ಸರ್ಕಾರದ ಕೆಲವು ಪ್ರತ್ಯೇಕ ಯೋಜನೆಗಳೂ ಜಾರಿಯಲ್ಲಿವೆ. ಹಲವು ಕೇಂದ್ರೀಯ ಪುರಸ್ಕೃತ ಯೋಜನೆಗಳಿಗೆ ರಾಜ್ಯ ಸರ್ಕಾರ ಶೇಕಡಾ ೫೦ರ ಅನುದಾನ ನೀಡಿ ಕಾರ್ಯರೂಪಕ್ಕೆ

---

೬. ಲಂಬಾಣಿಗಳಲ್ಲಿ ರಾಜಕೀಯ ಅರಿವು ಒಂದು ಅಧ್ಯಯನ, ಡಾ. ಎನ್. ರಾಜುನಾಯ್ಕ, ಆತ್ಮಜ್ಯೋತಿ ಪ್ರಕಾಶನ, ಬೆಂಗಳೂರು, ೨೦೦೬

ತಂದಿದೆ. ಈ ಎಲ್ಲಾ ಯೋಜನೆಗಳು ರಾಜ್ಯಮಟ್ಟ ಜಿಲ್ಲಾಮಟ್ಟ ಹಾಗೂ ತಾಲ್ಲೂಕು ಮಟ್ಟಗಳಲ್ಲಿ ಅನುಷ್ಠಾನಗೊಳ್ಳುತ್ತಿವೆ. ಕೆಲವು ಯೋಜನೆಗಳು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿ, ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಪಂಚಾಯಿತಿಗಳ ಮೂಲಕ ಕಾರ್ಯಗತಗೊಳ್ಳುತ್ತಿವೆ. ಈ ಯೋಜನೆಗಳನ್ನು ನಾವು ಶೈಕ್ಷಣಿಕ ನೆರವಿನ ಯೋಜನೆಗಳು, ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು ಮತ್ತು ಸಾಮಾಜಿಕ ಆರ್ಥಿಕ ನೆರವಿನ ಯೋಜನೆಗಳು ಎಂದು ವಿಂಗಡಿಸಿ ವಿವರಿಸಬಹುದು. ಇದಲ್ಲದೆ ವಿಶೇಷ ಘಟಕ ಯೋಜನೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭಿವೃದ್ಧಿ ಯೋಜನೆ ಹಾಗೂ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭಿವೃದ್ಧಿ ನಿಗಮಗಳಡಿ ಜಾರಿಗೊಳ್ಳುತ್ತಿರುವ ಯೋಜನೆಗಳನ್ನು ಪ್ರತ್ಯೇಕವಾಗಿ ನೋಡಬಹುದು.

**೧. ಶೈಕ್ಷಣಿಕ ನೆರವಿನ ಯೋಜನೆಗಳು:**

ಎ) ನರ್ಸರಿ ಮತ್ತು ಮಹಿಳಾ ಕಲ್ಯಾಣ ಕೇಂದ್ರಗಳು

ಬಿ) ವಸತಿ ಶಾಲೆಗಳು/ಆಶ್ರಮ ಶಾಲೆಗಳು

ಸಿ) ನವೋದಯ ಶಾಲೆ.

ಡಿ) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು

ಇ) ಕಾಲೇಜು ವಿದ್ಯಾರ್ಥಿನಿಲಯಗಳು

ಎಫ್)ಮುರಾರ್ಜಿ ದೇಸಾಯಿ ವಸತಿ ಶಾಲೆಗಳು

ಜಿ) ವಿದ್ಯಾರ್ಥಿ ವೇತನಗಳು

ಹೆಚ್) ಪ್ರತಿಭಾ ವಿದ್ಯಾರ್ಥಿ ವೇತನ

ಐ) ರ್‍ಯಾಂಕ್ ವಿದ್ಯಾರ್ಥಿಗಳಿಗೆ ನಗದು ಬಹುಮಾನ

ಜೆ) ಎಂ.ಫಿಲ್ ಮತ್ತು ಪಿಹೆಚ್.ಡಿ ವಿದ್ಯಾರ್ಥಿಗಳಿಗೆ ಫೆಲೋಶಿಪ್

ಕೆ) ಅಧ್ಯಾಯನ ಪ್ರವಾಸಕ್ಕೆ ನೆರವು.

ಎಲ್)ಪರೀಕ್ಷಾ ಪೂರ್ವ ತರಬೇತಿ ಕೇಂದ್ರಗಳ ನೆರವಿನ ಯೋಜನೆಗಳು

**೨. ಉದ್ಯೋಗ ಹಾಗೂ ತರಬೇತಿ ನೆರವಿನ ಯೋಜನೆಗಳು**

ಎ) ಬೆರಳಚ್ಚು, ಮತ್ತು ಶೀಘ್ರಲಿಪಿ ತರಬೇತಿ

ಬಿ) ಹೊಲಿಗೆ, ಎಲೆಕ್ಟ್ರಾನಿಕ್ಸ್ ಮತ್ತು ಕಂಪ್ಯೂಟರ್ ಶಿಕ್ಷಣ ತರಗತಿಗಳಿಗೆ ಶಿಷ್ಯವೇತನ.

ಸಿ) ಕಾನೂನು ಪದವೀಧರರಿಗೆ ಧನಸಹಾಯ

ಡಿ) ಸಾರ್ವಜನಿಕ ವಲಯ-ಉದ್ದಿಮೆಗಳಲ್ಲಿ ತರಬೇತಿ

**೩. ಸಾಮಾಜಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳು**

೧. ಅಸ್ಪೃಶ್ಯತೆ ನಿವಾರಣೆ

ಎ) ಅಂತರಜಾತಿ ವಿವಾಹವಾದ ದಂಪತಿಗಳಿಗೆ ಧನಸಹಾಯ

ಬಿ) ದೌರ್ಜನ್ಯಕ್ಕೆ ಒಳಗಾದವರಿಗೆ ಧನಸಹಾಯ

೨. ಗೃಹ ವಿದ್ಯುತೀಕರಣ

೩. ಗೃಹ ನಿರ್ಮಾಣಕ್ಕೆ ಧನಸಹಾಯ (ಆಶ್ರಯ ಯೋಜನೆಯಡಿ)
(ಅಂಬೇಡ್ಕರ್ ವಸತಿ ಯೋಜನೆ)

೪. ಕೃಷಿ, ಪಶು ಸಂಗೋಪನೆ, ಅರಣ್ಯ ಇಲಾಖೆ, ಸಣ್ಣ ಕೈಗಾರಿಕೆ.

**೪. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಜಾರಿಯಾಗುತ್ತಿರುವ ಕಾರ್ಯಕ್ರಮ:**

ಎ) ಭೂ ಒಡೆತನ ಯೋಜನೆ

ಬಿ) ಸ್ವಯಂ ಉದ್ಯೋಗ ಯೋಜನೆ

೧) ಉದ್ಯಮಶೀಲತಾ ಅಭಿವೃದ್ಧಿ(ಐ.ಎಸ್.ಬಿ) ಯೋಜನೆ

೨) ನೇರ ಸಾಲ ಯೋಜನೆ(ಎನ್.ಎಸ್.ಎಫ್.ಡಿ.ಸಿ)

ಸಿ) ಗಂಗಾ ಕಲ್ಯಾಣ ಯೋಜನೆ

೧) ವೈಯಕ್ತಿಕ ನೀರಾವರಿ ಕೊಳವೆ ಭಾವಿ ಯೋಜನೆ

೨) ಸಾಮೂಹಿಕ ನೀರಾವರಿ(ಬಾವಿ) ಯೋಜನೆ.

ಡಿ) ದೇವದಾಸಿ ಪುನರ್ವಸತಿ ಯೋಜನೆ

ಇ) ಸಫಾಯಿ ಕರ್ಮಚಾರಿ ಪುನರ್ವಸತಿ ಯೋಜನೆ.

ಕರ್ನಾಟಕ ಸರ್ಕಾರವು ಬಂಜಾರರನ್ನು ಪರಿಶಿಷ್ಟ ಜಾತಿಯೆಂದು ಪರಿಗಣಿಸಿದೆ. ಆದರೆ ಪ್ರತ್ಯೇಕವಾಗಿ ಯಾವುದೇ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕೈಗೊಂಡಿಲ್ಲ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಮೀಸಲಾತಿ ಅಡಿಯಲ್ಲಿ ಬರುವಂತಹ ಈ ಮೇಲಿನ ಸೌಲಭ್ಯ ಗಳನ್ನು ಮತ್ತು ಅಭಿವೃದ್ಧಿ ಕಾರ್ಯಗಳಲ್ಲಿ ಬಂಜಾರರೂ ಸೇರಿರುತ್ತಾರೆ. ಆದ್ದರಿಂದ ಲಂಬಾಣಿಗರು ಇತರ ಜನ ಸಮುದಾಯದೊಡನೆ ಬೆರತು ಸ್ಪರ್ಧಿಸಿ ತಮ್ಮ ಬದುಕು ರೂಪಿಸಿಕೊಳ್ಳಲು ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯವಾಗಿ ಭಾಗವನ್ನು ಪಡೆಯ ಬೇಕಾಗಿದೆ. ಕರ್ನಾಟಕದ ಲಂಬಾಣಿಗರು ಕೃಷಿಯನ್ನೇ ತಮ್ಮ ಪ್ರಧಾನ ಕಸಬನ್ನಾಗಿ ಮಾಡಿಕೊಂಡು ಉಪಜೀವಿಸುತ್ತಿದ್ದಾರೆ. ವ್ಯವಸಾಯಗಾರರಲ್ಲಿ ಒಣಬೇಸಾಯದವರೇ ಹೆಚ್ಚು ಜನ. ಬಹುಸಂಖ್ಯಾತ ಲಂಬಾಣಿಗರು ತಮ್ಮ ಸ್ವಂತ ಜಮೀನು ಇಲ್ಲದೆ ಬೇರೆಯವರ ಜಮೀನಿನಲ್ಲಿ ಕೃಷಿ ಮಾಡುತ್ತಾರೆ.

ಆರ್ಥಿಕ ದೃಷ್ಟಿಯಿಂದ ತುಂಬಾ ದುರ್ಬಲ ಸ್ಥಿತಿಯಲ್ಲಿದ್ದಾರೆ. ಹೆಚ್ಚಾಗಿ ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವ ಈ ಜನರು ಕಾಡು ಕಡಿದು ಅಲ್ಪಸ್ವಲ್ಪ ಭೂಮಿಯನ್ನು ಸಾಗುವಳಿ ಮಾಡಿಕೊಂಡಿದ್ದರೂ ಹೆಚ್ಚು ಜನ ಕೂಲಿಯನ್ನು ಅವಲಂಬಿಸಿದ್ದಾರೆ. ಸಾಂಪ್ರದಾಯಿಕ ನಾಯಕತ್ವ ವಂಶಪಾರಂಪರ್ಯವಾಗಿ ಬಂದಿದ್ದು, ಅನೇಕ ತಾಂಡಾಗಳಲ್ಲಿ ನಾಯಕರೂ ದಿನಗೂಲಿಯ ಕೆಲಸಕ್ಕೆ ಹೋಗುತ್ತಿರುವುದನ್ನು ಅಧ್ಯಯನದ ಸಮಯದಲ್ಲಿ ಗಮನಿಸಲಾಗಿದೆ.

ಕೆಲವು ಜನರಲ್ಲಿ ಮೂಲದ ವ್ಯಾಪಾರ ವೃತ್ತಿ ಇಂದಿಗೂ ಉಳಿದುಬಂದಿದೆ. ಕಾಡಿನಲ್ಲಿ ಸುಲಭವಾಗಿ ಸಿಗುವ ಜೇನು, ಕವಳಿಹಣ್ಣು, ನೆಲ್ಲಿಕಾಯಿ, ಬಿಕ್ಕೆಹಣ್ಣು, ನೇರಳೆಹಣ್ಣುಗಳನ್ನು ಪೇಟೆಗೆ ತಂದು ಮಾರಿ, ಹಣ ಸಂಪಾದಿಸುತ್ತಾರೆ. ಕೆಲವೊಂದು ಲಂಬಾಣಿಗರು ಕೆಲಸವಿಲ್ಲದೆ ಬದುಕಲು ಕಷ್ಟವೆಂದು ತೋರಿದಾಗ ತಾಂಡಾ ಬಿಟ್ಟು ಕುಟುಂಬ ಸಮೇತ ದೂರದ ಪ್ರದೇಶಗಳಾದ ಮುಂಬೈ, ಗೋವಾ ಕಡೆಗೆ ಹೋಗುತ್ತಾರೆ. ರಾಯಚೂರು ಮತ್ತು ಗುಲ್ಬರ್ಗಾ ಜಿಲ್ಲೆಗಳಲ್ಲಿ ಪಟ್ಟಣಕ್ಕೆ ವಲಸೆಹೋಗುತ್ತಿರುವವರ ಸಂಖ್ಯೆ ಹೆಚ್ಚಾಗಿದ್ದುದು ಕಂಡುಬಂದಿತು. ಶೈಕ್ಷಣಿಕವಾಗಿ ಬಂಜಾರರು ತಮ್ಮ ಮಕ್ಕಳಲ್ಲಿ ಗಂಡುಮಕ್ಕಳಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುತ್ತಾರೆ. ಲಂಬಾಣಿಗರಲ್ಲಿ ಬೆರಳಣಿಕೆಯಷ್ಟು ಜನರು ಮಾತ್ರ ಪದವೀಧರರಾಗಿದ್ದಾರೆ ಮತ್ತು ಅಕ್ಷರಸ್ಥರಾಗುತ್ತಿದ್ದಾರೆ. ಸಾಮಾನ್ಯವಾಗಿ ಹೆಣ್ಣುಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳುಹಿಸುವುದಿಲ್ಲ. ಬಡತನದ ಕಾರಣಗಳಿಂದಾಗಿ ಶಾಲೆಯನ್ನು ಮಧ್ಯದಲ್ಲೇ ಬಿಟ್ಟುಬಿಡುತ್ತಾರೆ. ಹಳ್ಳಿಯಲ್ಲಿರುವ ಲಂಬಾಣಿಗರು ಬಹುತೇಕ ಮಂದಿ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಂದಾಗಿ ಅನಕ್ಷರಸ್ಥರಾಗಿಯೇ ಉಳಿಯುತ್ತಾರೆ. ಎಲ್ಲಾ ರಾಜಕೀಯ ಅಭ್ಯರ್ಥಿಗಳು ಬಂಜಾರರನ್ನು

ಚುನಾವಣಾ ಪ್ರಕ್ರಿಯೆಯಲ್ಲಿ ಮತಯಾಚಿಸುವುದರಿಂದ ಲಂಬಾಣಿಗರು ರಾಜಕೀಯದಲ್ಲಿ ಮತದಾರರಾಗಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಲಂಬಾಣಿಗರು ಮೂಲತಃ ಸಾಮಾಜಿಕ ಮತ್ತು ರಾಜಕೀಯ ತಿಳುವಳಿಕೆಯನ್ನು ಹೊಂದಿದವರಾಗಿದ್ದಾರೆ. ಆದರೆ ಅದು ಒಂದು ಸಮುದಾಯಕ್ಕೆ ಮಾತ್ರ ಸೀಮಿತವಾಗಿತ್ತು. ಸ್ವಾತಂತ್ರ್ಯ ಬಂದನಂತರ ಇವರನ್ನು ಪರಿಶಿಷ್ಟ ಜಾತಿ ಪಟ್ಟಿಗೆ ಸೇರಿಸಿರುವುದರಿಂದ ಇತರೆ ಜನಾಂಗಗಳ ಸಂಪರ್ಕದಿಂದ ಅವರೊಡನೆ ಹೊಂದಿಕೊಂಡು ತಮ್ಮ ಮೀಸಲಾತಿಯ ಉಪಯೋಗವನ್ನು ಪಡೆಯಲು ಪ್ರಯತ್ನಿಸುತ್ತಿರುವುದನ್ನು ಕಾಣಬಹುದಾಗಿದೆ.



# ಉಪಸಂಹಾರ

ಬುಡಕಟ್ಟು ಸಮುದಾಯವನ್ನು ಹೊಂದಿರುವ ವಿಶ್ವದ ರಾಷ್ಟ್ರಗಳಲ್ಲಿ ದಕ್ಷಿಣ ಆಫ್ರಿಕಾ ದೇಶವನ್ನು ಬಿಟ್ಟರೆ ಭಾರತ ದೇಶವು ಎರಡನೆ ರಾಷ್ಟ್ರದಿಂದ ಹೆಗ್ಗಳಿಕೆಗೆ ಪಾತ್ರವಾಗಿದೆ. ೨೦೧೧ರ ಜನಗಣತಿ ಪ್ರಕಾರ ದೇಶದ ಒಟ್ಟು ಜನಸಂಖ್ಯೆಯ ಶೇ. ೯.೫ರಷ್ಟು ಬುಡಕಟ್ಟು ಜನಸಂಖ್ಯೆ ನಮ್ಮ ದೇಶದಲ್ಲಿ ಕಂಡುಬರುತ್ತದೆ. ಬುಡಕಟ್ಟುಗಳ ಬಗ್ಗೆ ನಿರ್ದಿಷ್ಟವಾದ ವ್ಯಾಖ್ಯಾನ ನೀಡುವಲ್ಲಿ ಬಹಳಷ್ಟು ಸಮಾಜಶಾಸ್ತ್ರಜ್ಞರು ಮತ್ತು ಮಾನವಶಾಸ್ತ್ರಜ್ಞರು ಅಸಮರ್ಥರಾಗಿತ್ತಾರೆ. ಆದರೂ ಅವರು ತಮ್ಮದೇ ಆದ ಜೀವನಶೈಲಿ, ಸಾಂಪ್ರದಾಯಿಕ ಆಚರಣೆಗಳ ಅನುಸರಣೆ, ವೇಷಭೂಷಣ ಮುಂತಾದ ವಿಷಯಗಳಲ್ಲಿ ವಿಭಿನ್ನ ವ್ಯಾಖ್ಯಾನ ನೀಡಿರುವುದು ಕಂಡುಬಂದಿದೆ. ಪ್ರಮುಖ ಸಂಶೋಧಕರಾದ ಹರ್ಬರ್ಟ್‌ರಿಸ್ಲೆ ವೆರಿಯರ್ ಎಲ್ವಿನ್ ಥಕ್ಕರ್ ಬಾಪಾರವರು ತಿಳಿಸಿರುವಂತೆ ಬುಡಕಟ್ಟುಗಳ ಭಾರತದ ಮೂಲನಿವಾಸಿಗಳು ಎಂದಿದ್ದಾರೆ. ಹಟ್ಟನ್‌ರವರು ಇವರನ್ನು ಪ್ರಾಚೀನ ಬುಡಕಟ್ಟುಗಳು ಎಂದು ವ್ಯಾಖ್ಯಾನಿಸಿದರೆ, ಜಿ.ಎಸ್.ಘುರೆ ಅವರು ಬುಡಕಟ್ಟುಗಳು ಭಾರತದ ಮೂಲ ನಿವಾಸಿಗಳು ಹಾಗೂ ಹಿಂದುಳಿದ ಹಿಂದುಗಳೂ ಸಹ ಆಗಿರುತ್ತಾರೆ ಎಂದಿದ್ದಾರೆ.

ಬುಡಕಟ್ಟು ಸಮೂಹದಲ್ಲಿ ಬಂಜಾರ ಸಮುದಾಯವು ಒಂದು ಸಮೂಹವಾಗಿದ್ದು, ಪರಿಶಿಷ್ಟ ಪಂಗಡದ ಪಟ್ಟಿಯಲ್ಲಿ ಸೇರಿರದ ಒಂದು ಬುಡಕಟ್ಟು ಸಮುದಾಯ ಎಂದೇ

ಹೇಳಬಹುದು. ಕರ್ನಾಟಕದ ಸರ್ಕಾರವು ದಿವಂಗತ ದೇವರಾಜ ಅರಸು ಅವರ ನೇತೃತ್ವದಲ್ಲಿ ಬಂಜಾರ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರಲು ಹಾಗೂ ಅವರನ್ನು ಪರಿಶಿಷ್ಟ ಜಾತಿಯಲ್ಲಿ ಸೇರಿಸಿ ಸಕಲ ಸಂವಿಧಾನಾತ್ಮಕ ಸವಲತ್ತುಗಳನ್ನು ನೀಡಲು ಸಹಕರಿಸಿತು.

ಆದರೆ ಅವರ ಆಚಾರ-ವಿಚಾರ, ರೂಢಿ-ಸಂಪ್ರದಾಯ, ಧಾರ್ಮಿಕ ವಿಧಿ-ವಿಧಾನ, ಭಾಷೆ, ವೈವಾಹಿಕ ಪದ್ಧತಿ, ಪ್ರತ್ಯೇಕ ನೆಲೆ ಇವುಗಳಲ್ಲೆವನ್ನೂ ನೋಡಿದಾಗ ಬಂಜಾರರು ಮೂಲತಃ ಬುಡಕಟ್ಟಿನವರೇ ಆಗಿದ್ದು, ಇತ್ತೀಚೆಗೆ ಒಂದು ಜಾತಿಗೆ ಪರಿವರ್ತನೆಯಾಗಲು ಪ್ರಯತ್ನಿಸುತ್ತಿರುವುದು ಅತ್ಯಂತ ಪ್ರಶಂಸನೀಯ ಸಂಗತಿಯಾಗಿದೆ.

ಪ್ರಸ್ತುತ ಅಧ್ಯಯನದ ಕೇಂದ್ರ ಬಿಂದುಗಳಾದ ದಕ್ಷಿಣ ಭಾರತದ ಬಂಜಾರರು ಸಹ ಮೂಲತಃ ಬುಡಕಟ್ಟು ಸಮುದಾಯವೇ ಆಗಿದ್ದು, ಇವರ ಚಾರಿತ್ರಿಕ ಸಾಂಪ್ರದಾಯಿಕ ಹಿನ್ನಲೆಯನ್ನು ಮಾನವಶಾಸ್ತ್ರೀಯ ದೃಷ್ಟಿಕೋನದ ಮೂಲಕ ಸ್ಥೂಲ ಪರಿಚಯ ಮಾಡಿ ಕೊಳ್ಳುವುದು ಈ ಸಂಶೋಧನಾ ಅಧ್ಯಯನದ ದೃಷ್ಟಿಯಲ್ಲಿ ಸೂಕ್ತವೆನಿಸುತ್ತದೆ. ಬಂಜಾರರ ಬದುಕು ಮತ್ತು ಬರಹಗಳ ಬಗ್ಗೆ ರಾಜಪ್ರಭುತ್ವದ ಶಾಸನಗಳು, ಜಾನಪದ ಸಾಹಿತ್ಯ, ದಂತಕಥೆಗಳು ಹಾಗೂ ಸರ್ಕಾರದ ವರದಿಗಳು ಇತ್ಯಾದಿಗಳೆಲ್ಲವೂ ಐತಿಹಾಸಿಕತೆಯ ಮುಖ್ಯ ಆಕರಗಳಾಗಿರುತ್ತವೆ. ಇವುಗಳ ಜೊತೆಗೆ ಅನೇಕ ವಿದೇಶಿ ಪ್ರವಾಸಿಗಳ ಬರಹಗಳು ಮತ್ತು ಕಣ್ಣಾರೆ ನೋಡಿದ ಸಂಗತಿಗಳು ವಿಧ ವಿಧವಾಗಿ ಬಂಜಾರ ಮೂಲದ ಬಗ್ಗೆ ತಿಳಿಸಿರುತ್ತವೆ. ಈ ಜಗತ್ತಿನ ಪ್ರತಿಯೊಂದು ಮಾನವ ಜನಾಂಗದ ಸೃಷ್ಠಿಯಂತೆ ಬಂಜಾರ ಜನಾಂಗವು ಸೃಷ್ಠಿಯಾಗಿರುತ್ತದೆ.

ಬಂಜಾರ-ಬಂಜಾರಾ "ಬಂಜಾರ ಅಥವಾ ಬಂಜಾರಾ ಪದ ಪ್ರಯೋಗ ಹೆಚ್ಚು ಕಡಿಮೆ ಎಲ್ಲಾ ಕಡೆಗಳಲ್ಲಿಯೂ ಪ್ರಚಲಿತದಲ್ಲಿದೆ. ಮೂಲತಃ ಇವರು ವರ್ತಕರಾಗಿದ್ದ ರೆಂಬುದನ್ನು ಇದು ಸೂಚಿಸುತ್ತದೆ. ಬಂಜಾರ ಅಥವಾ ಬಂಜಾರಾ ಎಂಬ ಶಬ್ದವು ಸಂಸ್ಕ್ರತದ ವಾಣಿಜ್ಯ ಎಂಬ ಶಬ್ದದಿಂದ ಉತ್ಪತ್ತಿಯಾಗಿದೆ. ಈ ಗುಂಪಿನವರು ಪೂರ್ವದಲ್ಲಿ ವ್ಯಾಪಾರವನ್ನು ಕೈಗೊಂಡು ದೇಶವಿದೇಶದಲ್ಲಿ ಸಂಚರಿಸುತ್ತಿದ್ದರಿಂದ ಇವರಿಗೆ ಬಂಜಾರ ಅಥವಾ ಬಂಜಾರಾ ಎಂಬ ಹೆಸರುಗಳಿಂದ ಕರೆದರು.

ಕ್ರಿ.ಶ. ೧೧-೧೨ನೇ ಶತಮಾನದ ಸಂಸ್ಕ್ರತದ ದಶಕುಮಾರ ಚರಿತಮ್ ಎಂಬ ಗ್ರಂಥದಲ್ಲಿ ಬಂಜಾರ ಶಬ್ದದ ಉಲ್ಲೇಖವಿದೆ. ಅಲ್ಲದೆ ಕಿ.ಪೂ.೪ನೇ ಶತಮಾನದಲ್ಲಿ ಒಂದು ಸಂಚಾರಿ ಜನಾಂಗದ ಉಲ್ಲೇಖ ದೊರೆಯುತ್ತಿದ್ದು, ಈ ಜನರು ಗುಡಿಸಲು ವಾಸಿಗಳಾಗಿದ್ದ

ರಲ್ಲದೇ ತಮ್ಮ ದನ, ಕರುಗಳ ಪಾಲನೆಗಾಗಿ ಅಡವಿಯಲ್ಲಿ ಸಂಚರಿಸುತ್ತಾರೆ ಎಂದು ಸರ್. ಹೆಚ್.ಎಂ. ಎಲಿಯೇಟ್ ಇವರು ದಿ ರೇಸ್ ಆಫ್ ದಿ ಎನ್.ಯು.ಪಿ. ಆಫ್ ಇಂಡಿಯಾ ಸಂಪುಟ:೧ ೧೮೬೯ರಲ್ಲಿ ಉಲ್ಲೇಖಿಸಿದ್ದಾರೆ.

ಮೇಲೆ ಉಲ್ಲೇಖಿಸಿದ ಹಲವಾರು ಜನ ವಿದ್ವಾಂಸರುಗಳ ಅಭಿಪ್ರಾಯವನ್ನು ಗಮನಿಸಿದಾಗ ಬಂಜಾರ ಅಥವಾ ಬಂಜಾರಾ ಪದಕ್ಕೆ ಸಂಸ್ಕೃತದ ವಾಣಿಜ್ಯಕಾರ ಎಂಬ ಪದವು ಮೂಲ ವಾಗಿದೆ ಎಂದು ಹೇಳಬಹುದು.

ಸುಕಾಲಿ–ಸುಗಾಲಿ ಬಂಜಾರಗಳಲ್ಲಿಯೇ ಕೆಲವರಿಗೆ ಸುಕಾಲಿ–ಸುಗಾಲಿ ಎಂಬ ಹೆಸರಿನಿಂದ ಕರೆಯುತ್ತಾರೆ. ಇವರು ಆಂಧ್ರ, ಕರ್ನಾಟಕ, ಕೇರಳ, ತಮಿಳುನಾಡಿನಲ್ಲಿ ಕಂಡುಬರುತ್ತಾರೆ. ತೆಲುಗಿನಲ್ಲಿ ಸುಗಾಲಿ ಎಂದರೆ ಗೋವುಗಳು ಎಂದು ಅರ್ಥ ಸುಗಾಲಿಯ ಪದದ ಪರ್ಯಾಯ ಪದವೇ ಸುಕಾಲಿ. ಲಂಬಾಣಿಗರ ಮೂಲ ಪುರುಷ ಮೋಲಾದಾದ ಇವನು ಗೋವುಗಳನ್ನು ಕಾಯುತ್ತಿದ್ದನ್ನು ಇವನನ್ನ ಗೋಪಾಲಕ ಎಂದು ಕರೆಯಲಾಗುತ್ತಿತ್ತು. ಸುಕಾಲಿ ಶಬ್ದ ಕೆಲವೊಮ್ಮೆ ಬೈಯ್ಯುವುದಕ್ಕೆ ಅಪಹಾಸ್ಯ ಮಾಡುವುದಕ್ಕೆ ಬಳಸಲಾಗುತ್ತಿತ್ತು. ಸುಕಾಲಿ ಅಥವಾ ಸುಗಾಲಿಗರು ಕರ್ನಾಟಕದ ಶಿವಮೊಗ್ಗ, ಚಿತ್ರದುರ್ಗ ಭಾಗಗಳಲ್ಲಿ ಕಂಡುಬರುತ್ತಾರೆ.

**ತಾಂಡ ರಚನೆ**

ಲಂಬಾಣಿಗರು ಮೂಲತಃ ಅಲೆಮಾರಿ ಗುಂಪಿನವರಾಗಿದ್ದು ಮೊದಮೊದಲು ಬೇಕೆಂದಾಗ ಮಡಚಿ ಕಟ್ಟಿ ಎತ್ತಿಕೊಂಡು ಹೋಗಬಹುದಾದ ಹೆಣೆದ ಕಡ್ಡಿ ಚಾಪೆ, ಈಚಲು ಚಾಪೆ, ಕಾಲಾನಂತರ ಬಟ್ಟೆಯ ಡೇರಗಳನ್ನು ತಮಗೆ ಅನುಕೂಲವಾದಲ್ಲಿ ಸಾಗಿಸಿ ಅದನ್ನೇ ತಮ್ಮ ತಾತ್ಕಲಿಕ ವಾಸ ಸ್ಥಳವನ್ನಾಗಿ ಮಾಡಿಕೊಳ್ಳುತ್ತಿದ್ದರು. ಕಾಲಬದಲಾದಂತೆ ಗುಡಿಸಲುಗಳನ್ನು ಕಟ್ಟಿಕೊಂಡು ತಾಂಡಗಳ ಹುಟ್ಟಿಗೆ ಕಾರಣರಾದರು. ಸಾಮಾನ್ಯವಾಗಿ ಹಳ್ಳಿ ನಗರಗಳಿಂದ ದೂರದಲ್ಲಿ ಕಾಡು–ಮೇಡು ಕೊಳ್ಳ ಕಣಿವೆ ಗುಡ್ಡ ಗಾಡುಗಳಲ್ಲಿ ಲಂಬಾಣಿ ತಾಂಡ ಇರುತ್ತದೆ.

**ಬಂಜಾರ ತಾಂಡದ ಸ್ವರೂಪ**

- ಬಂಜಾರರು ಮೂಲತಃ ಅಲೆಮಾರಿಸಮೂಹದವರಾಗಿದ್ದಾರೆ.
- ಬಂಜಾರರು ನಿಸರ್ಗ ಪ್ರಿಯರು, ಕಾಡುಮೇಡುಗಳಿಂದ ಆಹಾರ ಸಂಗ್ರಹಣೆ ಮಾಡುತ್ತಾರೆ.
- ಪುರಾಣ ಶಾಸ್ತ್ರಗಳ ಪ್ರಕಾರ ಬಂಜಾರರ ಉಗಮವು ಸಾವಿರಾರು ವರ್ಷಗಳ ಹಿಂದಿನದು ಮತ್ತು ಮಹಾಕಾವ್ಯಗಳಲ್ಲಿ ಪ್ರಸ್ತಾಪವಾಗಿರುತ್ತಾರೆ.

- ತಾಂಡಗಳಲ್ಲಿ ಸೇವಾಲಾಲ್ ಮತ್ತು ಮರಿಯಮ್ಮ ದೇವಿಯ ಹೆಸರಿನ ಗುಡಿ ಕಟ್ಟಿರುತ್ತಾರೆ.
- ಸೇವಾಲಾಲ್ ಗುಡಿಯ ಮುಂದೆ ಬಿಳಿ ಬಾವುಟ ಮತ್ತು ಮರಿಯಮ್ಮ ದೇವಿ ಗುಡಿಯ ಮುಂದೆ ಕೆಂಪು ಭಾವುಟ ಹಾಕಿರುತ್ತಾರೆ.
- ಪಿತೃಪ್ರಧಾನ ಕುಟುಂಬ ಪದ್ಧತಿ ಇವರಲ್ಲಿ ರೂಢಿಯಲ್ಲಿದೆ. ತಂದೆಯ ಆಸ್ತಿಯ ಒಡೆತನಕ್ಕೆ ಹಿರಿಯ ಮಗನೇ ವಾರಸುದಾರನಾಗುತ್ತಾನೆ
- ಬಂಜಾರರಲ್ಲಿ ಬಾಲ್ಯವಿವಾಹ ಪದ್ಧತಿ ಪ್ರಚಲಿತವಿತ್ತು. ಆದರೆ ಇಂದು ಬಾಲ್ಯ ವಿವಾಹ ಪದ್ಧತಿ ಕಡಿಮೆಯಾಗಿದೆ.
- ಮದುವೆ ಸಂದರ್ಭದಲ್ಲಿ ತೆರ ಕೊಡುವ ಪದ್ಧತಿ ರೂಢಿಯಲ್ಲಿತ್ತು ಇಂದು ಬಂಜಾರರಲ್ಲಿಯೂ ಶಿಕ್ಷಣ ಪಡೆಯುತ್ತಿರುವವರ ಸಂಖ್ಯೆ ದಿನದಿಂದ ದಿನಕ್ಕೆ ಹೆಚ್ಚಾಗಿರುವುದರಿಂದ ಇವರಲ್ಲಿಯೂ ವರದಕ್ಷಿಣೆಯ ಪೆಡಂಭೂತ ಕಾಣಿಸಿಕೊಂಡಿದೆ.
- ಬಂಜಾರರಲ್ಲಿ ಹಲವಾರು ಗೋತ್ರಗಳಿವೆ ಇವರು ತಮ್ಮ ಗೋತ್ರವನ್ನು "ಗೋತ್ರ, ಜಾತ, ಪಾಡ, ಮತ್ತು ಖಾಂಪೇಟ್" ಎಂದು ಹೇಳುತ್ತಾರೆ.
- ಬಂಜಾರರ ಬದುಕು ಚಿತ್ತಾರಗಳಿಂದ ಕೂಡಿದೆ ರಂಗು ರಂಗಿನ ವೇಷಭೂಷಣ, ಮೋಜು ಕುಣಿತ, ಇವರ ವೈಶಿಷ್ಟ್ಯಗಳಾಗಿರುತ್ತವೆ.
- ಬಡತನ, ಅನಕ್ಷರತೆ, ಅಜ್ಞಾನ, ಆರ್ಥಿಕ ಅಸಮತೋಲನದಿಂದ ತುಂಬಿದ ಹಲವಾರು ಬಂಜಾರ ತಾಂಡಗಳು ಸ್ವತಂತ್ರ್ಯ ಸಿಕ್ಕಿ ಹಲವಾರು ವರ್ಷಗಳು ಗತಿಸಿದರು ಮೂಲ ಸೌಕರ್ಯಗಳಿಲ್ಲದೆ ಹಾಗೆಯೇ ಉಳಿದಿವೆ.
- ಆಧುನಿಕ ದಿನದಲ್ಲಿ ಕೆಲವು ತಾಂಡಗಳು ಕಂದಾಯ ಗ್ರಾಮಗಳಾಗಿ ಪರಿವರ್ತಿತವಾಗುತ್ತಿವೆ.
- ತಾಂಡಗಳಲ್ಲಿನ ವಾದ-ವಿವಾದಗಳು ಗುಂಪು ಘರ್ಷಣೆಗಳು ಅಲ್ಲಿನ ಮುಖಂಡ ಕಾರುಬಾರಿ ಇವನ ನೇತೃತ್ವದಲ್ಲಿ ತೀರ್ಮಾನಿಸಲ್ಪಡುತ್ತವೆ.

ಈ ಸಮುದಾಯಕ್ಕೆ ಶಿಕ್ಷಣ ಪಡೆಯುವ ಸೌಲಭ್ಯ ದೊರೆತು, ನಾಡಿನ ವಿವಿಧ ಕ್ಷೇತ್ರಗಳಲ್ಲಿ ಪ್ರವೇಶ ಪಡೆದು ರಾಷ್ಟ್ರೀಯ ಪ್ರವಾಹದಲ್ಲಿ ಒಂದಾಗುವ ಹಿನ್ನೆಲೆಯಲ್ಲಿ ಆಗಬೇಕಾಗಿರುವ ಕಾರ್ಯ ಸಾಕಷ್ಟಿದೆ ಇದೀಗ ಮುಂದುವರೆಯುತ್ತಿರುವ ಈ ಸಮುದಾಯಕ್ಕೆ ಸೇರಿರುವ ವಿದ್ಯಾವಂತ ಪ್ರತಿಷ್ಠಿತರು, ಆರ್ಥಿಕವಾಗಿ ಸ್ಥಿತಿವಂತರಾಗಿರುವವರು ತಮ್ಮ

ಸಮುದಾಯವನ್ನೇ ಮರೆತು ಹಿಂದುಳಿದ ತಮ್ಮವರೇ ಆದ ಬಂಜಾರಗಳಿಗಿಂತ ಬೇರೆ ಎನ್ನುವ ರೀತಿಯಲ್ಲಿ ವರ್ತಿಸಿ ಪ್ರತ್ಯೇಕತ ಮನೋಭಾವನೆ ಹೊಂದಿರುವುದು ಒಂದು ವೇದನೆ ಸಂಗತಿಯಾಗಿದೆ.

ಬಂಜಾರರ ಸಾಮಾಜಿಕ ವ್ಯವಸ್ಥೆಯ ಒಂದು ವಿಶಿಷ್ಟ ಸಂಸ್ಕೃತಿಯ ಪ್ರತಿನಿಧಿಯಾಗಿದೆ. ಆಚಾರ-ವಿಚಾರ, ರೂಢಿ ಸಂಪ್ರದಾಯಗಳನ್ನು ಹೊಂದಿರುವ ಹಾಗೆಯೇ ವಿಶಿಷ್ಟ ವಿವಾಹ ಪದ್ಧತಿಗಳನ್ನು ಸಹ ಒಳಗೊಂಡಿರುತ್ತಾರೆ. ಇವರಲ್ಲಿ ಸಾಮಾನ್ಯವಾಗಿ ವಿಭಕ್ತ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತವೆ. ಜೊತೆಗೆ ವಂಶಪಾರಂಪರಿಕೆ ಮತ್ತು ರಕ್ತಸಂಬಂಧ ಇತ್ಯಾದಿಗಳನ್ನು ತಂದೆಯ ಕುಲದ ಆಧಾರದ ಮೇಲೆ ಗುರುತಿಸಲಾಗುತ್ತದೆ.

ಸಾಂಪ್ರದಾಯಿಕ ಪ್ರಿಯರಾದ ಬಂಜಾರರು, ಧಾರ್ಮಿಕ ನಂಬಿಕೆ ಹಾಗೂ ಆಚರಣೆಗಳಿಗೆ ಕಟ್ಟುಬದ್ಧರಾಗಿರುತ್ತಾರೆ. ಧಾರ್ಮಿಕ ವಿಧಿ-ವಿಧಾನ ದೇವರ ಆರಾಧನೆ ಜೀವನಶೈಲಿ ನಾಮಧೇಯ ಮುಂತಾದವುಗಳನ್ನು ಗಮನಿಸಿದಾಗ ಇವರು ಹಿಂದೂ ಧರ್ಮಾವಲಂಭಿಗಳು ಎನ್ನುವುದರಲ್ಲಿ ಯಾವುದೇ ಸಂದೇಹವಿಲ್ಲ. ಬಂಜಾರರು ಧಾರ್ಮಿಕವಾಗಿ ಯಾವುದೇ ಗುಡಿ ಗೋಪುರಗಳನ್ನು ನಿರ್ಮಿಸಿಕೊಂಡವರಲ್ಲ, ಆದರೆ ದೇವರುಗಳ ಮೂರ್ತಿಗಳನ್ನು ಅವರು ಹೋದ ಕಡೆಯಲೆಲ್ಲ ತೆಗೆದುಕೊಂಡು ಹೋಗುತ್ತಿದ್ದರು. ಇವರ ಮೂಲ ದೇವರುಗಳಾದ ಸೇವಾಲಾಲ್, ಮರಿಯಮ್ಮ, ಸಾತಿ ಭವಾನಿ, ತುಳಜಾ ಭವಾನಿ, ಇತ್ಯಾದಿಗಳಿಗೆ ಕಾಲಕಾಲಕ್ಕೆ ಪ್ರಾಣಿ ಬಲಿಗಳನ್ನು ನೀಡುತ್ತಾ ತಾಂಡಗಳಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುತ್ತಿರುವ ಪ್ರಕರಣಗಳು ಧಾರ್ಮಿಕ ನಂಬಿಕೆಯನ್ನು ಹೆಚ್ಚುಗೊಳಿಸುತ್ತವೆ.

ಕರ್ನಾಟಕದಲ್ಲಿ ೫೦ ಬುಡಕಟ್ಟುಗಳನ್ನು ಅಧಿಕೃತ ಬುಡಕಟ್ಟುಗಳೆಂದು ಗುರುತಿಸಲಾಗಿದ್ದು ರಾಜ್ಯದಲ್ಲಿ ೩೪ ಲಕ್ಷ ೬೪,೦೦೦ ಬುಡಕಟ್ಟು ಜನರಿದ್ದಾರೆ. ಅವರ ಭಾಷೆ ಸಾಮಾಜಿಕತೆ, ಸಾಮಾಜಿಕ ಸಂಘಟನೆ, ಆರ್ಥಿಕವಾಗಿ ಹಿಂದುಳಿಯುವಿಕೆ, ಭೌಗೋಳಿಕ ಪ್ರತ್ಯೇಕತೆ, ಇತ್ಯಾದಿ ಗುಣಲಕ್ಷಣಗಳ ಆಧಾರದ ಮೇಲೆ ಬುಡಕಟ್ಟು ಜನಾಂಗದವರೆಂದು ಗುರುತಿಸಲಾಗಿದೆ.

೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದ ಜನಸಂಖ್ಯೆ ೪,೪೯,೭೭,೨೦೧ ಆಗಿದ್ದು ಕರ್ನಾಟಕದಲ್ಲಿ ಲಂಬಾಣಿಗರ ಒಟ್ಟು ಜನಸಂಖ್ಯೆ ೮.೨೩೫೦೫ ಶೇಕಡಾ, ೧.೮ರಷ್ಟಾಗಿದೆ. ಪರಿಶಿಷ್ಟ ಜಾತಿಯ ಶೇಕಡಾ ೧೧.೧೭ರಷ್ಟಾಗಿದೆ. ಕರ್ನಾಟಕದ ಲಂಬಾಣಿ ಜನಸಂಖ್ಯೆ ಜಿಲ್ಲಾವಾರು ಹಂಚಿಕೆ ಸಮಪ್ರಮಾಣದಲ್ಲಿ ಇಲ್ಲಾ. ಕೆಲವು ಜಿಲ್ಲೆಗಳಲ್ಲಿ ಕಡಿಮೆ

ಹಂಚಿಕೆಯಾಗಿದ್ದು, ಗುಲ್ಬರ್ಗಾದಲ್ಲಿ ಅತಿಹೆಚ್ಚು ಸಂಖ್ಯೆಯಲ್ಲಿ ಲಂಬಾಣಿಗಳಾಗಿದ್ದಾರೆ. ಗುಲ್ಬರ್ಗಾದ ಲಂಬಾಣಿಗರ ಸಂಖ್ಯೆ ೧,೬೬,೪೬೬ ಅತಿಕಡಿಮೆ ಸಂಖ್ಯೆಯಲ್ಲಿ ೧೫೦ ಲಂಬಾಣಿಗರು ಕೊಡಗು ಜಿಲ್ಲೆಯಲ್ಲಿದ್ದಾರೆ.

ಸಂವಿಧಾನದ ದೃಷ್ಟಿಯಲ್ಲಿ ಲಂಬಾಣಿ ಸಮುದಾಯವನ್ನು ಈ ಕರ್ನಾಟಕ ರಾಜ್ಯದಲ್ಲಿ ಪರಿಶಿಷ್ಟ ಜಾತಿ ಎಂದೂ ಪರಿಗಣಿಸಲ್ಪಟ್ಟಿದ್ದಾರೆ. ಆಂಧ್ರಪ್ರದೇಶದಲ್ಲಿ ಪರಿಶಿಷ್ಟ ಪಂಗಡದವರೆಂದು, ತಮಿಳುನಾಡಿನಲ್ಲಿ ಅತಿ ಹಿಂದುಳಿದ ಜನಾಂಗವೆಂದು ಪರಿಗಣಿಸಲ್ಪಟ್ಟಿದೆ. ಈ ನಿಟ್ಟಿನಲ್ಲಿ ಲಂಬಾಣಿ ಜನಾಂಗವನ್ನು ಸಂವಿಧಾನಾತ್ಮಕವಾಗಿ ನೋಡುವುದರ ಬದಲೂ ಅವರ ಸಂಸ್ಕೃತಿ, ಕಲೆ, ಸಾಂಸ್ಕೃತಿಕತೆ, ರೂಢಿ ಸಂಪ್ರದಾಯ, ಲಿಪಿರಹಿತ ಭಾಷೆ, ಪ್ರತ್ಯೇಕ ವಾಸಸ್ಥಳ, ಧಾರ್ಮಿಕ ಪರಂಪರೆ, ಧಾರ್ಮಿಕ ವಿಧಾನ ಮತ್ತು ಹಬ್ಬ ಹರಿದಿವಸಗಳು ಇತ್ಯಾದಿ. ಈ ಎಲ್ಲಾ ಅಂಶಗಳು ಬುಡಕಟ್ಟು ಜನರಿಗೆ ಸಂಬಂಧಿಸಿದ ಲಕ್ಷಣಗಳಾಗಿರುತ್ತದೆ. ಆದ್ದರಿಂದ ಲಂಬಾಣಿ ಸಮುದಾಯವು ಒಂದು ಬುಡಕಟ್ಟು ಜನಾಂಗವಾಗಿದೆ. ಆದ್ದರಿಂದ ಇತ್ತೀಚಿನ ದಿವಸಗಳಲ್ಲಿ ಸಮಾಜದ ಮೇಲೆ ಆಗುತ್ತಿರುವ ಬದಲಾವಣೆಗಳೇ ಸಾಮಾಜಿಕ, ಸಾಂಸ್ಕೃತಿಕ ಪರಿವರ್ತನೆಯ ಪ್ರಕ್ರಿಯೆಗಳಾಗಿದ್ದು ಆ ಸಾಮಾಜಿಕ, ಸಾಂಸ್ಕೃತಿಕ, ಪರಿವರ್ತನೆಯ ಪ್ರಕ್ರಿಯೆ ಲಂಬಾಣಿಗರ ಆರ್ಥಿಕ, ಸಾಮಾಜಿಕ ವ್ಯವಸ್ಥೆ ಮೇಲೆ ಆಗುವಂತಹ ಪರಿವರ್ತನಾ ಅಂಶಗಳಾಗಿವೆ. ಪ್ರಸ್ತುತ ಸನ್ನಿವೇಶದಲ್ಲಿ ಲಂಬಾಣಿ ಮಹಿಳೆಯರ ಸ್ಥಿತಿಗತಿಗಳನ್ನು ತಿಳಿಯುವ ಪ್ರಯತ್ನ ಇದಾಗಿದೆ.

ಪ್ರಸ್ತುತ ಸಂಶೋಧನಾ ಅಧ್ಯಯನಕ್ಕೆ ದಕ್ಷಿಣ ಕರ್ನಾಟಕದಲ್ಲಿನ ಮೂರು ಜಿಲ್ಲೆಗಳನ್ನು ಚಿತ್ರದುರ್ಗ, ಚಿಕ್ಕಮಗಳೂರು ಹಾಗೂ ಚಿಕ್ಕಬಳ್ಳಾಪುರ ಸ್ಥಳಗಳನ್ನು ಕರ್ನಾಟಕ ಜನಗಣತಿ ೨೦೧೧, ಭಾರತದ ಜನಗಣತಿ ೨೦೧೧ ಹಾಗೂ ಆರ್ಥಿಕ, ಸಾಂಖ್ಯಿಕ ಇಲಾಖೆಯ ಅಂಕಿ–ಅಂಶಗಳ ಆಧಾರದ ಮೇಲೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಜಿಲ್ಲೆಗಳಿಂದ ಕ್ರಮವಾಗಿ ಹೊಸದುರ್ಗ, ಕಡೂರು ಹಾಗೂ ಬಾಗೇಪಲ್ಲಿ ತಾಲ್ಲೂಕುಗಳನ್ನು ಗುರುತಿಸಿಕೊಂಡು ಪ್ರತಿ ತಾಲ್ಲೂಕುಗಳಿಂದ ಐದು ತಾಂಡಗಳನ್ನು ಸಂಶೋಧನೆಗೆ ಆಯ್ಕೆ ಮಾಡಿಕೊಳ್ಳಲಾಗಿದೆ. ಪ್ರಾಥಮಿಕ ಮೂಲ ಮಾಹಿತಿಗಾಗಿ ಒಟ್ಟು ೧೫ ತಾಂಡಗಳಿಂದ ೨೦೦ ಕುಟುಂಬಗಳನ್ನು ಮಾಹಿತಿಗಾಗಿ ಆರಿಸಿಕೊಳ್ಳಲಾಗಿದೆ. ಸಂಶೋಧಕರ ಕಾಲ, ಕರ್ತವ್ಯ ಹಾಗೂ ಅನುಕೂಲಕರ ವಾತಾವರಣವನ್ನು ಪರಿಗಣಿಸಿ ಅಧ್ಯಯನ ಕ್ಷೇತ್ರದ ವ್ಯಾಪ್ತಿಯನ್ನು ನಿರ್ಣಯಿಸಲ್ಪಟ್ಟಿರುತ್ತದೆ.

ಮಾನವಶಾಸ್ತ್ರೀಯ ಅಧ್ಯಯನದಲ್ಲಿ ಜನಾಂಗೀಯ ಅಧ್ಯಯನ ಒಂದು ಪ್ರಮುಖ ವಿಧಾನವಾಗಿದೆ.ಮಾನವ ಸಮುದಾಯ ಅಥವಾ ಚಿಕ್ಕ ಸಮುದಾಯವೊಂದರ ಕುರಿತಾಗಿ

ಪ್ರತ್ಯೇಕ್ಷ ಅವಲೋಕನಗಳನ್ನು ಅನುಸರಿಸಿ ಆ ಮೂಲಕ ಕಂಡುಕೊಂಡದ್ದನ್ನು ಒಂದು ವಿಸ್ತೃತ ದಾಖಲೆಯ ಮೂಲಕ ಪ್ರಸ್ತುತಪಡಿಸುವ ಪ್ರಯತ್ನ ಇದರಲ್ಲಿರುವುದು ಇಲ್ಲಿ ವಿಶ್ಲೇಷಣೆ ಮತ್ತು ವ್ಯಾಖ್ಯಾನಗಳಿಗಿಂತಲೂ ಸಮಾಜದ ಬಗ್ಗೆ ವಿವರಣೆಯ ಬಗ್ಗೆಯೇ ಇಲ್ಲಿ ಹೆಚ್ಚು ಒತ್ತು ನೀಡಲಾಗಿದೆ. ಸಾಮಾಜಿಕ ಮಾನವಶಾಸ್ತ್ರ ಕ್ಷೇತ್ರ ಕಾರ್ಯವನ್ನು ಇಲ್ಲಿ ಬಳಸುವುದರಿಂದ ವಿವಿಧ ಸಮುದಾಯಗಳ ಸಂಸ್ಕೃತಿಗಳ ಅಧ್ಯಯನವಾಗಿದೆ.

ಸೆನ್ಸಾಸ್ ಆಫ್ ಇಂಡಿಯಾ ೨೦೧೧ರ ಪ್ರಕಾರ ಭಾರತದ ಜನಸಂಖ್ಯೆ ೧೨೧, ೦೧,೯೩ ೪೨೨ ಇದ್ದು ಜನಸಂಖ್ಯಾ ಬೆಳವಣಿಗೆಯ ದರ ೧೭.೬೪ರಷ್ಟಿದೆ. ಈ ಜನಸಂಖ್ಯೆಯಲ್ಲಿ ಮಹಿಳೆಯರ ಸಂಖ್ಯೆ ೫೮,೬೪,೯೧೭೪ ಆಗಿದ್ದೂ, ಪುರುಷರ ಸಂಖ್ಯೆ ೬೨,೩೭,೨೪೨೪೮ ಆಗಿರುತ್ತದೆ. ಸರಾಸರಿ ಲಿಂಗಾನುಪಾತ ೯೪೦ ಇದ್ದೂ ಸಾಕ್ಷರತೆಯ ಪ್ರಮಾಣ ೭೪.೦೪ ಆಗಿರುತ್ತದೆ. ೧೯,೯೫,೮೧,೪೭೭ ಜನಸಂಖ್ಯೆ ಹೊಂದಿರುವ ಉತ್ತರ ಪ್ರದೇಶ ರಾಜ್ಯ ಪ್ರಥಮ ಸ್ಥಾನವನ್ನು ಪಡೆದಿದೆ. ಹಾಗಯೇ ಕರ್ನಾಟಕ ರಾಜ್ಯವು ೬,೧೧,೩೦೭೦೪ ಜನಸಂಖ್ಯೆ ಹೊಂದಿದ್ದೂ ಪುರುಷರ ಸಂಖ್ಯೆ ೩,೧೦,೫೭,೭೪೨ ಆಗಿದೆ. ಮಹಿಳೆಯರ ಸಂಖ್ಯೆ ೩೦೦,೭೨,೯೬೨ ಆಗಿರುತ್ತದೆ. ಹಾಗೆಯೇ ಕರ್ನಾಟಕದ ಸರಾಸರಿ ಲಿಂಗಾನುಪಾತ ೯೬೮ ಆಗಿದ್ದೂ ಸಾಕ್ಷರತೆಯ ಪ್ರಮಾಣ ೭೫.೬೦ ಆಗಿದೆ. ಅಂದರೆ ೪೧೦೨೯೩೨೩ ಜನರು ಸಾಕ್ಷರತರಾಗಿದ್ದಾರೆ. ಅದರಲ್ಲಿ ಮಹಿಳೆಯರು ೧,೮೨,೨೦,೮೫೫ರಷ್ಟು ಸಾಕ್ಷರತೆಯನ್ನು ಪಡೆದಿದ್ದಾರೆ. ಹಾಗೂ ಪುರುಷರು ೨ ಕೋಟಿ ೨೮೦೮೪೬೮ ಜನ ಸಾಕ್ಷರರಾಗಿದ್ದಾರೆ. ಕರ್ನಾಟಕ ರಾಜ್ಯವು ೩೦ ಜಿಲ್ಲೆಯನ್ನು ಹೊಂದಿದ್ದು ಅತಿ ಹೆಚ್ಚು ಜನಸಂಖ್ಯೆಯನ್ನು ಬೆಂಗಳೂರು ಜಿಲ್ಲೆ ಹೊಂದಿದೆ. ಬೆಂಗಳೂರು ಜಿಲ್ಲೆಯ ಜನಸಂಖ್ಯೆ ೯೫೮೮೯೧೦ ಆಗಿರುತ್ತದೆ. ಇದು ಪ್ರಥಮ ಸ್ಥಾನವನ್ನು ಪಡೆದಿರುತ್ತದೆ. ೨೯೪೭೪೪ ಜನಸಂಖ್ಯೆ ಹೊಂದಿರುವ ಮೈಸೂರು ಜಿಲ್ಲೆ ಎರಡನೇ ಸ್ಥಾನವನ್ನು ಪಡೆದಿದೆ. ತುಮಕೂರು ಜಿಲ್ಲೆಯಲ್ಲಿ ೨೬,೮೧,೪೪೯ ಜನಸಂಖ್ಯೆಯನ್ನು ಚಿಕ್ಕಮಗಳೂರು ಜಿಲ್ಲೆಯಲ್ಲಿ ೧೧,೩೭,೭೫೩ ಜನಸಂಖ್ಯೆಯನ್ನು ಚಿತ್ರದುರ್ಗ ಜಿಲ್ಲೆಯಲ್ಲಿ ೧೬೬೦೩೭೮ ಜನಸಂಖ್ಯೆಯನ್ನು ಹೊಂದಿದೆ.

ಬಂಜಾರ ಸಮುದಾಯ ಕುರಿತ ಈ ಅಧ್ಯಯನವು ಎರಡು ರೀತಿಯ ಮಾಹಿತಿ ಸಂಗ್ರಹಣೆಗೆ ಒಳಪಟ್ಟಿದ್ದರೂ ಮೂಲತಃ ಪ್ರಾಥಮಿಕ ಮೂಲ ಮಾಹಿತಿ ಆಧಾರದ ಮೇಲೆ ಹೆಚ್ಚು ಅವಲಂಬಿತವಾಗಿದೆ. ದಕ್ಷಿಣ ಕರ್ನಾಟಕದ ಮೂರು ಪ್ರತಿಷ್ಠಿತ ಜಿಲ್ಲೆಗಳಾದ ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳಿಂದ ಕ್ರಮವಾಗಿ ಹೊಸದುರ್ಗ,

೭೦, ಕಡೂರು ೭೦ ಮತ್ತು ಬಾಗೇಪಲ್ಲಿ ೬೦ ಮೂರು ತಾಲ್ಲೂಕುಗಳಿಂದ ಒಟ್ಟು ೨೦೦ ಕುಟುಂಬಗಳನ್ನು ಯಾದೃಚ್ಛಿಕ ಮಾದರಿಯ ಆಧಾರದ ಮೇಲೆ ಆಯ್ಕೆ ಮಾಡಿಕೊಂಡು ಸಂದರ್ಶನಕ್ಕೆ ಒಳಪಡಿಸಿ ಮಾಹಿತಿ ಸಂಗ್ರಹಿಸಲಾಗಿದೆ. ಸಂಗ್ರಹಿಸಿದ ಒಟ್ಟು ೨೦೦ ಕುಟುಂಬಗಳ ಮಾಹಿತಿದಾರರಲ್ಲಿ ೧೨೦ ಪುರುಷರು ಮತ್ತು ೮೦ ಜನ ಸ್ತ್ರೀಯರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಮಸ್ತ ಬಂಜಾರ ಸಮುದಾಯವನ್ನು ಭವಿಷ್ಯತ್ತಿನ ಮಾನವಶಾಸ್ತ್ರೀಯ ಅಧ್ಯಯನ ಕ್ಷೇತ್ರವನ್ನಾಗಿಸಿಕೊಂಡು ತನ್ಮೂಲಕ ಬಂಜಾರರ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಹಾಗೂ ಆರ್ಥಿಕ ಬದುಕು ಉತ್ತಮವಾಗಲು ಪ್ರಸ್ತುತ ಅಧ್ಯಯನ ಅತ್ಯುತ್ತಮವಾಗಿ ಸಹಕರಿಸುತ್ತದೆ.

ಬಂಜಾರರ ಕಲ್ಯಾಣಕ್ಕಾಗಿ ಯೋಜನೆಗಳನ್ನು ಕಾರ್ಯಕ್ರಮಗಳನ್ನು ಹಾಕಿಕೊಂಡು ಅದರಂತೆ ಕೆಲವು ಸಾಂಸ್ಥಿಕ ವ್ಯವಸ್ಥೆ ಮಾಡಿದರೆ ಸಾಲದು, ಭಾರತದ ಸದ್ಯದ ಪರಿಸ್ಥಿತಿಯಲ್ಲಿ ಯಾವುದೇ ಯೋಜನೆಯ ಯಶಸ್ಸಿಗೆ ರಾಜಕೀಯ ಸಂಕಲ್ಪ ಹಾಗೂ ನೌಕರಶಾಹಿ ಬದ್ಧತೆ ಬೇಕು. ನೌಕರಶಾಹಿ ಜಡತ್ವದಿಂದ ಎಂತಹ ಉದಾತ್ತ ಯೋಜನೆಯಾದರೂ ಅದು ಮಾಮೂಲಿ ಸರ್ಕಾರಿ ಕಾರ್ಯಕ್ರಮವಾಗಿ ಬಿಡುತ್ತದೆ. ರಾಜಕೀಯ ಸಂಕಲ್ಪವಿಲ್ಲದಿದ್ದರೆ ಯೋಜನೆಗೆ ಸ್ಥಿರತೆ ಎಂಬುದೇ ಇರುವುದಿಲ್ಲ.

ಎಸ್.ಸಿ.ದುಬೆ ಅವರು ಪರಿಶಿಷ್ಟರ ಪಟ್ಟಿಯ ತಯಾರಿಯು ಕೇವಲ ಒಂದು ರಾಜಕೀಯ ಧೋರಣೆಯಾಗಿ ಪರಿಣಮಿಸಿದ್ದರಿಂದ ಸಮಸ್ಯೆ ಮತ್ತಷ್ಟು ಜಟಿಲವಾಗಿದೆ ಎನ್ನುತ್ತಾರೆ. ಇಲ್ಲಿ ಜನಾಂಗೀಯ, ಸಾಂಸ್ಕೃತಿಕ, ಸಮಾಜಶಾಸ್ತ್ರೀಯ ಹಾಗೂ ಆರ್ಥಿಕ ಮಾನದಂಡದ ಬಳಕೆಗೆ ಅವಕಾಶವೇ ಇಲ್ಲವಾಗಿದೆ. ಪ್ರಸ್ತುತ ಸಾಮಾಜಿಕ ಹಾಗೂ ರಾಜಕೀಯ ಅವಕಾಶಗಳ ಹೆಚ್ಚಿನ ಲಾಭ ಕೆಲವೇ ಕೆಲವು ಮಂದಿ ಸುಧಾರಿತ ಬಂಜಾರ ಸಮುದಾಯಗಳಿಗೆ ಕಂಡುಬಂದರೆ, ನತದೃಷ್ಟರಾಗಿರುವ, ಅಲೆಮಾರಿ ಜೀವನ ನಡೆಸುತ್ತಿರುವ, ಬಹುಸಂಖ್ಯಾತ ಬಂಜಾರ ಸಮುದಾಯಗಳಿಗೆ ಯಾವುದೇ ಅವಕಾಶಗಳು ಲಭ್ಯವಾಗುತ್ತಿಲ್ಲ. ಅವಕಾಶಗಳ ಲಾಭ ಪಡೆದ ಸುಧಾರಿತ ಬಂಜಾರರು ತಮಗೆ ಬರಬೇಕಾದ ಪಾಲಿಗಿಂತಲೂ ಅದೆಷ್ಟೋ ಮಿಗಿಲಾದ ಶೈಕ್ಷಣಿಕ, ಆರ್ಥಿಕ ಹಾಗೂ ಔದ್ಯೋಗಿಕ ಸೌಲಭ್ಯ ಪಡೆದು ಉಳಿದ ಅಲೆಮಾರಿ ಬಂಜಾರ ಸಮುದಾಯಗಳಿಗೆ ವಂಚನೆಯಾಗುತ್ತಿದೆ. ಇಂದಿನ ರಾಜಕೀಯ ಪರಿಸ್ಥಿತಿ ಹಿನ್ನಲೆಯಲ್ಲಿ ಆರ್ಥಿಕ ಸುಧಾರಣೆ ಹೊಂದಿದ ಬಂಜಾರರಿಗೆ ಮೀಸಲಾತಿ ಸೌಲಭ್ಯ ನೀಡಿಕೆಯನ್ನು ನಿಲ್ಲಿಸಬೇಕೆಂದು ಸಾರುವ ಧೈರ್ಯ ಯಾವುದೇ ರಾಜಕೀಯ ಪಕ್ಷಕ್ಕೆ ಇದ್ದಂತೆ ಕಾಣಿಸದು ಎಂದು ಎಸ್.ಸಿ.ದುಬೆ ಅವರು ಹೇಳಿರುವುದು

